ಶ್ರೀ ವಿದ್ಯಾರಣ್ಯ ಪುಸ್ತಕಮಾಲೆ ೨.

ಕಥೆಗಳನ್ನೊಳಗೊಂಡ

# ಬೀರಬಲ್ಲನ ಚರಿತ್ರೆ

(ಪೂರ್ವಾರ್ಧ)

ಇದನ್ನು
ಮುಂಬಯಿ ವಿಶ್ವವಿದ್ಯಾಲಯದ ಗೌರವ ಸಭಾಸದರೂ
ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಅಭ್ಯಾಸ
ಮಂಡಲದ ಸಭಾಸದರೂ ಆದ

**ರಾ. ಹ. ದೇಶಪಾಂಡೆ,** ಎಮ್. ಎ.

ಯವರು ಬರೆದರು

ಮತ್ತು

ಶ್ರೀ ವಿದ್ಯಾರಣ್ಯ ಪ್ರಕಾಶಕ ಸಂಸ್ಥೆಯ
ಆಡಳಿತಗಾರರಾದ

**ಶ್ರೀ. ರಾ. ದೇಶಪಾಂಡೆ,** ಬಿ. ಎಸ್‌ಸಿ.

ಯವರು ಮುದ್ರಿಸಿ ಪ್ರಸಿದ್ಧ ಪಡಿಸಿದರು.

ಮೊದಲನೆಯ ಆವೃತ್ತಿ.

ಬೆಲೆ: ೧ ರೂ. ೬ ಆ.




ಕಥೆಗಳನ್ನೊಳಗೊಂಡ

# ಬೀರಬಲ್ಲನ ಚರಿತ್ರೆ (ಪೂರ್ವಾರ್ಧ)

ಇದನ್ನು

ಮುಂಬಯಿ ವಿಶ್ವವಿದ್ಯಾಲಯದ ಗೌರವ ಸಭಾಸದರೂ ಮೈಸೂರು ವಿಶ್ವ
ವಿದ್ಯಾನಿಲಯದ ಕನ್ನಡ ಅಭ್ಯಾಸಮಂಡಲದ ಸಭಾಸದರೂ ಆದ

**ರಾಮಚಂದ್ರ ಹಣಮಂತ ದೇಶಪಾಂಡೆ,** ಎಮ್. ಎ.

ಯವರು ಬರೆದರು

ಮತ್ತು

ಶ್ರೀ ವಿದ್ಯಾರಣ್ಯ ಪ್ರಕಾಶಕ ಸಂಸ್ಥೆಯ ಆಡಳಿತಗಾರರಾದ

**ಶ್ರೀಪಾದ ರಾಮಚಂದ್ರ ದೇಶಪಾಂಡೆ,** ಬಿ. ಎಸ್‌ಸಿ.

ಯವರು ಮುದ್ರಿಸಿ ಪ್ರಸಿದ್ಧ ಪಡಿಸಿದರು.




...ದಲನೆಯ ಆವೃತ್ತಿ.

... ೧ ರೂ. ೬ ಆ.

## ರಾಮಚಂದ್ರ ಹಣಮಂತ ದೇಶಪಾಂಡೆ, ಎಮ್. ಎ. ಯವರು ಬರೆದ ಪುಸ್ತಕಗಳು

| | | ರೂ. | ಆ. | ಪೈ. |
|---|---|---|---|---|
| ೧. | ಅಕ್ಬರ ಚಕ್ರವರ್ತಿಯ ಚರಿತ್ರೆ (ಸಚಿತ್ರ) . . | ೧ | ೧ | ೦ |
| ೨. | ಚರಿತ್ರಸಂಗ್ರಹ (ಪೂರ್ವಾರ್ಧ) ,, . . | ೧ | ೪ | ೦ |
| ೩. | ಮೊಗಲ್ ಬಾದಶಾಹಿ (ಪೂರ್ವಾರ್ಧ) . . | ೦ | ೧೪ | ೦ |
| ೪. | ಧರ್ಮಸ್ಥಾಪಕರೂ ಧರ್ಮಸುಧಾರಕರೂ . . | ೦ | ೬ | ೦ |
| ೫. | ಹೈದರಲ್ಲಿ ಟೀಪುಸುಲ್ತಾನ . . . . . . | ೦ | ೫ | ೦ |
| ೬. | ನಾನಾಫಡನವೀಸ . . . . . . . | ೦ | ೪ | ೦ |
| ೭. | ಗ್ರೇಟ ಬ್ರಿಟನ್ ಆಯರ್ಲಂಡ ದೇಶಗಳ ಸಂಕ್ಷಿಪ್ತ ವರ್ಣನೆ . . . . . . . | ೦ | ೬ | ೦ |
| ೮. | ನೂರಜಹಾನ ಮಹಾರಾಣಿ (ಸಚಿತ್ರ) . . . | ಅಚ್ಚಿನಲ್ಲಿದೆ | | |
| ೯. | ಛತ್ರಪತಿ ಶಿವಾಜಿ ಮಹಾರಾಜ (ಸಚಿತ್ರ) . | ,, | | |
| ೧೦. | ಕರ್ನಾಟಕ ಸಾಮ್ರಾಜ್ಯ ಸಂಪುಟ ೧. . . | ಸಿದ್ಧವಾಗುತ್ತಲಿದೆ. | | |



ಮಂಗಳೂರು :

ಕೊಡಿಯಾಲ್‌ಬೈಲ್ ಛಾಪಖಾನೆಯಲ್ಲಿ ಛಾಪಿಸಲ್ಪಟ್ಟು,
ಶ್ರೀಪಾದ ರಾಮಚಂದ್ರ ದೇಶಪಾಂಡೆ, ಬಿ. ಎಸ್‌ಸಿ., ಮಾಳಮಡ್ಡಿ, ಧಾರವಾಡ
ಇವರು ಪ್ರಸಿದ್ಧ ಪಡಿಸಿದರು.

೧೯೨೩

# ಪ್ರಸ್ತಾವನೆ.

ನಾನು ನನ್ನ ತಾಯ್ನುಡಿಯ ಸೇವೆಯಲ್ಲಿ ತೊಡಗಿ ಸುಮಾರು ೩೮ ವರ್ಷಗಳಾದವು. ಈ ಗಡುವಿನಲ್ಲಿ ನಮ್ಮ ಕನ್ನಡಿಗರಲ್ಲಿ ಮಾತೃಭಾಷೆಯ ಅಭಿಮಾನವು ಬೆಳೆದಿದ್ದರೂ ಅದು ಅವರ ಹೃದಯದಲ್ಲಿ ಇನ್ನೂ ಬೇರುಬಿಟ್ಟಿಲ್ಲೆಂದು ತಿಳಿಸಲಿಕ್ಕೆ ವಿಷಾದಿಸುತ್ತೇನೆ. ವಾಚನಾಭಿರುಚಿಯು ದಿನದಿನಕ್ಕೆ ಹೆಚ್ಚುತ್ತಿದ್ದರೂ ಸಾಕಷ್ಟು ಬೆಳೆದಿಲ್ಲೆಂದು ನಿರ್ವಿವಾದವಾಗಿ ಹೇಳಬಹುದು. ಬರಹಗಾರರ ಸಂಖ್ಯೆಯು ವರ್ಷವರ್ಷಕ್ಕೆ ವೃದ್ಧಿಯನ್ನೈದುತ್ತಲಿದ್ದರೂ ಅವರೊಳಗೆ ಸಹಕಾರದ ಮಾತೇ ಇಲ್ಲ. ತಾವು ಕನ್ನಡಿಗರೆಂದು ಸಾರಿ ವರ್ಷಕ್ಕೆ ಸಾವಿರಾರು ರೂಪಾಯಿ ಗಳಿಸುವವರು ಇಡಿ ವರ್ಷದಲ್ಲಿ ಒಂದೆರಡು ಕನ್ನಡ ಪುಸ್ತಕಗಳನ್ನು ಕೊಂಡುಕೊಳ್ಳಲಿಕ್ಕೆ ಹಿಂದೆಗೆಯುತ್ತಾರೆ. ಈ ದುಸ್ಥಿತಿಯು, ಈ ಲೋಭವು, ಈ ಕಾರ್ಪಣ್ಯವು, ಈ ಎಚ್ಚರಗೇಡಿತನವು, ಈ ಆಕುಂಚಿತದೃಷ್ಟಿಯು ಕಡಮೆ ಆದ ಹಾಗೆ ನಮ್ಮ ತಾಯ್ನುಡಿಯ ಮೇಲ್ಮೆಯಾಗುವುದೆಂದು ನಿಶ್ಚಯವಾಗಿ ಹೇಳಬಹುದು.

ಇತಿಹಾಸಗಳ ಪ್ರಸಾರದಿಂದಲೇ ಕನ್ನಡಿಗರ ಏಳ್ಗೆಯು ನಿಶ್ಚಯವಾಗಿ ಆಗುತ್ತದೆಂದು ಗಟ್ಟಿಯಾಗಿ ನಂಬಿ ಕಳೆದ ೩೫ ವರ್ಷಗಳಲ್ಲಿ ಚರಿತ್ರೆಗಳನ್ನೇ ಬರೆದೆನು. ಈ ಪುಸ್ತಕದಲ್ಲಿ ಕಥಾಂಶವೇ ಹೆಚ್ಚಾಗಿರುವುದರಿಂದ ಇದನ್ನು ಬರೆಯಲಿಕ್ಕೆ ಒಂದು ವಿಶಿಷ್ಟ ಕಾರಣವು ಸಂಭವಿಸಿತು. ನನ್ನ ಪರಮ ಮಿತ್ರರಾದ ಮ. ರಾ. **ಬಿ. ವೆಂಕಟನಾರಾಯಣಪ್ಪ** ಎಮ್. ಎ. ಯವರು ೧೨-೬-೧೯೧೬

ದಿವಸ ಇಲ್ಲಿಗೆ ಬಂದು ನನ್ನಲ್ಲಿ ಉಳಿದರು. ಕನ್ನಡಿಗರಲ್ಲಿ ವಾಚನಾಭಿರುಚಿಯನ್ನು ಹೆಚ್ಚಿಸುವುದಕ್ಕೆ ಏನು ಮಾಡಬೇಕೆಂಬ ಪ್ರಶ್ನೆವನ್ನು ನಾನು ಅವರಿಗೆ ಕೇಳಿದೆನು. ಕಥೆಗಳ ಸಣ್ಣಸಣ್ಣ ಪುಸ್ತಕಗಳನ್ನು ಮುದ್ರಿಸಬೇಕೆಂದು ಅವರು ತಮ್ಮ ಅಭಿಪ್ರಾಯವನ್ನು ಕೊಟ್ಟರು; ಮತ್ತು ಮರುವರುಷ ನಾನು ಬೆಂಗಳೂರಿಗೆ ಹೋದಾಗ ಕೆಲ ಇಂಗ್ಲಿಷ ಪುಸ್ತಕಗಳನ್ನು ತೋರಿಸಿದರು. ನಾನು ಆ ಕಥೆಗಳನ್ನು ಓದಿದೆನು. ನನ್ನ ಮನಸ್ಸು ಅವುಗಳನ್ನು ಕನ್ನಡದಲ್ಲಿ ಬರೆಯಲಿಕ್ಕೆ ಒಡಂಬಡಲಿಲ್ಲ! ಅಷ್ಟರೊಳಗೆ ಸುದೈವದಿಂದ ಶ್ರೀ ಶಂಕರ ಕರ್ನಾಟಕ ಪುಸ್ತಕ ಭಾಂಡಾರವು ಕನ್ನಡ ನುಡಿಯ ಸೇವೆಗೋಸ್ಕರ ಹುಟ್ಟಿತು. (ಸಿದ್ಧಾರ್ಥಿ ಸಂವತ್ಸರ ಚೈತ್ರ ಶುದ್ಧ ೧ ಮಂಗಳವಾರ ತಾರೀಕು ೧ — ೪ — ೧೯೧೯). ಆ ಸಂಸ್ಥೆಯ ವ್ಯವಸ್ಥಾಪಕರು ಕರ್ನಾಟಕದ ಎಲ್ಲ ಭಾಗಗಳಿಂದ ತರಿಸಿದ ಸಾವಿರಾರು ಪುಸ್ತಕಗಳೊಳಗೆ **ಕಿತ್ತೂರ ಭೀಮಾಚಾರ್ಯರು ರಚಿಸಿದ ಅಕ್ಬರ ಬೀರಬಲ್ಲರ ವಿನೋದಕಥೆಗಳು** ಎಂಬ ಪುಸ್ತಕವು ನನ್ನ ಕಣ್ಣಿಗೆ ಬಿತ್ತು. ಅದನ್ನು ಓದಲು, ಆ ಕಥೆಗಳನ್ನು ಕ್ರಮಗೊಳಿಸಿ, ಕುಂದುಕೊರತೆಗಳನ್ನು ದೂರಮಾಡಿ, ಸರಿಪಡಿಸಿ, ಈ **ಕಥೆಗಳನ್ನೊಳಗೊಂಡ ಬೀರಬಲ್ಲನ ಚರಿತ್ರೆಯನ್ನು** ಬರೆಯಬೇಕೆಂಬ ಲವಲವಿಕೆಯು ನನ್ನಲ್ಲಿ ಹುಟ್ಟಿತು. ಕೂಡಲೆ ಕಲ್ಕತ್ತಾ, ಅಲ್ಹಾಬಾದ, ಪುಣೆ, ಲಾಹೋರಗಳಿಗೆ ಬೀರಬಲ್ಲನಿಗೆ ಸಂಬಂಧಿಸಿದ ಪುಸ್ತಕಗಳ ಬಗ್ಗೆ ಬರೆದೆನು. ಪುಣೆಯಲ್ಲಿ ಒಂದು ಸಣ್ಣ ಪುಸ್ತಕವು ಮಾತ್ರ ದೊರೆಯಿತು. ಬೀರಬಲ್ಲನು ಪ್ರಸಿದ್ಧಿಯನ್ನು ಹೊಂದಿದ ಸ್ಥಳಗಳಲ್ಲಿ ಅವನ ಪುಸ್ತಕಗಳೇ ಇಲ್ಲ. ಕಾಲಮಹಿಮೆ!! ಕರ್ನಾಟಕದಲ್ಲಿ ೨-೩ ಪುಸ್ತಕಗಳು ಸಿಕ್ಕವು.

ಸಾಮುಗ್ರಿಗಳು ದೊರೆತ ಬಳಿಕ ಪುಸ್ತಕವನ್ನು ಬರೆಯಲಾರಂಭಿಸಿದೆನು (ರೌದ್ರಿ ಸಂವತ್ಸರ ಆಶ್ವೀಜ ಶುದ್ಧ ೧೦ ತಾ. ೨೨—೧೦—೧೯೨೦).

ಈ ಚರಿತ್ರೆಗೆ ಸಹಾಯಕರಾದ ಈಲಿಯಟ್, ಎಲ್ಫಿನಸ್ಟನ್, ಹಂಟರ, ವ್ಹಿನ್ಸೆಂಟ ಸ್ಮಿಥ್, ಕಿತ್ತೂರ ಮುಂತಾದ ಬರಹಗಾರರ ಉಪಕಾರವನ್ನೆಣಿಸುತ್ತೇನೆ. ಮ. ರಾ. ವೆಂಕಟನಾರಾಯಣಪ್ಪನವರು ಇದನ್ನು ಓದಿ ಹಲವು ಉಪಯುಕ್ತವಾದ ಸೂಚನೆಗಳನ್ನು ಮಾಡಿದ್ದರಿಂದ ಅವರಿಗೆ ನಾನು ಋಣಿಯಾಗಿದ್ದೇನೆ.

ಈ ಚರಿತ್ರೆಯಲ್ಲಿ ಕರ್ನಾಟಕದ ಬೇರೆ ಭಾಗದವರಿಗೆ ತಿಳಿಯದಂತಹ ಶಬ್ದಗಳ ಅರ್ಥವನ್ನು ಕಂಸದಲ್ಲಿ ಕೊಟ್ಟಿರುತ್ತೇನೆ. ಇದರಲ್ಲಿರಬಹುದಾದ ತಪ್ಪುಗಳನ್ನು ತೋರಿಸುವ ಮಹಾನುಭಾವರ ಸೂಚನೆಗಳನ್ನು ನಾನು ಕೃತಜ್ಞತೆಯಿಂದ ಸ್ವೀಕರಿಸುವೆನು.

ಮಾಳಮಡ್ಡಿ, ಧಾರವಾಡ.<br>
ದುಂದುಭಿ ಸಂವತ್ಸರ ಫಾಲ್ಗುಣ ಬಹುಳ<br>
ಅಷ್ಟಮಿ ಶನಿವಾರ ಶಕೆ ೧೮೪೪.<br>
ತಾ. ೧೦—೩—೧೯೨೩.

**ರಾಮಚಂದ್ರ ಹಣಮಂತ ದೇಶಪಾಂಡೆ.**



## ವಿಷಯಾನುಕ್ರಮಣಿಕೆ.



## ಚಿತ್ರಗಳು.

# ಒಪ್ಪೋಲೆ.

| ಪುಟ. | ಸಾಲು. | ಅಶುದ್ಧ. | ಶುದ್ಧ. |
|---|---|---|---|
| ೨ | ೧೪ | ಸಂಸ್ಕ್ರತ | ಸಂಸ್ಕೃತ |
| ೭ | ೧೪ | ಇದಕ್ಕಿದ್ದ | ಇದ್ದಕ್ಕಿದ್ದ |
| ೧೨ | ೨೬ | ಮುಕ್ತೆದಾರ | ಮಕ್ತೆದಾರ |
| ೨೨ | ೧೭ | ಆಗಿರುವುದರಲ್ಲಿ | ಆಗಿರುವವರಲ್ಲಿ |
| ೨೬ | ೫ | ಅಖಿಲಸಾಮಾಗ್ರಿಗಳನ್ನು | ಅಖಿಲಸಾಮಗ್ರಿಗಳನ್ನು |
| ೩೨ | ೩ | ಬೀರಬಲ | ಬೀರಬಲ್ಲ |
| ೩೭ | ೧೫ | ಮನೆಯಲ್ಲಿಟು | ಮನೆಯಲ್ಲಿಟ್ಟು |
| ೪೩ | ೨೩ | ಪೋಲಿಸುಕಚೇರಿಗೆ | ಪೋಲಿಸಕಚೇರಿಗೆ |
| ೬೧ | ೨ | ಹೆಸರ | ಹೆಸರು |
| ೬೮ | ೯ | ಮುಲದಂತೆ | ಮೊಲದಂತೆ |
| ೭೧ | ೨೪ | ಅದೇ ಪ್ರಶ್ನವನ್ನು | ಅವನಿಗೆ ಅದೇ ಪ್ರಶ್ನವನ್ನು |
| ೮೧ | ೧೦ | ಪಿತರಾರ್ಜಿತ | ಪಿತ್ರಾರ್ಜಿತ |
| ೧೧೦ | ೨೪ | ಅಮಾವನ | ಅವಮಾನ |
| ೧೧೪ | ೧೫ | ವೈರಾಗ | ವೈರಾಗ್ಯ |
| ೧೧೭ | ೧೦ | ಅಂಜುಬುರುಕರೆಯಲ್ಲವೇ? | ಅಂಜುಬುರುಕಿಯರಲ್ಲವೇ? |
| ೧೨೦ | ೧೯ | ಬೇಡುವವರನ್ನು | ಬೇಡುವವರನ್ನೂ |
| ೧೨೬ | ೨೦ | ಆದರಿಂದ | ಆದ್ದರಿಂದ |
| ೧೩೪ | ೮ | ಮನಸ್ಸಿದಲ್ಲಿ | ಮನಸ್ಸಿನಲ್ಲಿ |
| ೧೩೭ | ೬ | ಮದುವೆಕೊಂಡರೆ | ಮದುವೆಮಾಡಿಕೊಂಡರೆ |
| ೧೫೮ | ೧೮ | ಯುಕ್ತಿಕವಾಗಿರುತ್ತದೆ | ಸಯುಕ್ತಿಕವಾಗಿರುತ್ತದೆ |
| ೧೮೫ | ೧೫ | ಆದರಿಂದ | ಆದ್ದರಿಂದ |
| ೧೮೯ | ೨೫ | ಬಿಚಿಸಿದನು | ಬಿಚ್ಚಿಸಿದನು |
| ೧೯೧ | ೨೦ | ಅತಿಥ್ಯವನ್ನು | ಆತಿಥ್ಯವನ್ನು |
| ೨೦೧ | ೨೦ | ಯಾವುದ | ಯಾವುದು |
| ೨೦೩ | ೩ | ಸುಳ್ಳುತಗುಲಮೋಸಗಳನ್ನು | ಸುಳ್ಳುತಗಲು ಮೋಸಗಳನ್ನು |
| ೨೧೦ | ೫ | ಬಂಡಿಗಳು | ಬಂಡಿಗಳೂ |
| ೨೨೭ | ೧೨ | ಬಾಹ್ಮಣರ ಶ್ರೇಷ್ಟತ್ವೆ | ಬ್ರಾಹ್ಮಣರ ಶ್ರೇಷ್ಠತ್ವೆ |

ಕಥೆಗಳನ್ನೊಳಗೊಂಡ

# ಬೀರಬಲ್ಲನ ಚರಿತ್ರೆ

(ಪೂರ್ವಾರ್ಧ)



## ೧ನೆಯ ಅಧ್ಯಾಯ

---

### ಚಿಕ್ಕತನ

ಬೀರಬಲ್ಲನ ಹೆಸರು ಎಲ್ಲ ಭಾರತೀಯರಿಗೂ ಗೊತ್ತಿರಬಹುದು. ಇವನು ಅಕ್ಬರ ಬಾದಶಹನ ಜೀವದ ಗೆಳೆಯನಾಗಿದ್ದನೆಂಬುದು ಎಲ್ಲರಿಗೂ ತಿಳಿದ ಮಾತೇ ಸರಿ. ಇವನ ಜಾಣ್ಮೆಯ ಕೆಲಮಾತುಗಳನ್ನೂ ಇವನ

ಚಾತುರ್ಯದ ಒಂದೆರಡು ಕಥೆಗಳನ್ನೂ ಪ್ರತಿಯೊಬ್ಬ ಕಲಿತವನು ಕೇಳಿರಬಹುದು. ಆದರೆ ಇವನ ಪೂರ್ವಜರ ಜಾತಿಯಾವದು? ಇವನು ಎಲ್ಲಿ ಹುಟ್ಟಿದನು? ಎಲ್ಲಿ ಕಲಿತನು? ಅಕ್ಬರನ ಒಲುವೆಯನ್ನು ಹೇಗೆ ದೊರಕಿಸಿಕೊಂಡನು? ಇವನ ಸಂಸಾರದ ಸ್ಥಿತಿ ಎಂತಹದು? ಇವನಿಗೆ ಹೆಂಡರುಮಕ್ಕಳು ಎಷ್ಟು ಮಂದಿ ಇದ್ದರು? ಅಕ್ಬರನ ದರಬಾರಿನಲ್ಲಿ ಇವನ ವರ್ಚಸ್ಸು ಎಷ್ಟು ಮಟ್ಟಿಗಿತ್ತು? ಇವನು ಯಾವ ದೊಡ್ಡ ಕೆಲಸಗಳನ್ನು ಮಾಡಿದನು? ಇವೇ ಮುಂತಾದ ಪ್ರಶ್ನಗಳಿಗೆ ಸಮರ್ಪಕವಾದ ಉತ್ತರವನ್ನು ಕೊಡುವವರು ಒಬ್ಬಿಬ್ಬರು ಇದ್ದರೂ ಇರಬಹುದು; ಇಲ್ಲವೆಂದು ಹೇಳಿದರೂ ಹೇಳಬಹುದು.

**ಬೀರಬಲ್** ಶಬ್ದವು ಇವನ ಹೆಸರಲ್ಲೆಂದು ತೋರುತ್ತದೆ. ಬಹುಶಃ ಇದು ಅಕ್ಬರ ಬಾದಶಹನು ಕೊಟ್ಟ ಬಿರುದಿರಬಹುದು. ೧೮೮೮ರಲ್ಲಿ ಪ್ರಕಟಿಸಲ್ಪಟ್ಟ ಬಂಗಾಲದ ಆಸಿಯಾ ಸಂಸ್ಥೆ (Asiatic Society)ಯು ಮಾಸಪುಸ್ತಕದಲ್ಲಿ ಇವನ ಹೆಸರು **ಬೀರಬರ** ಇತ್ತೆಂದು ಬರೆದಿರುತ್ತಾರೆ. ಉತ್ತರ ಹಿಂದುಸ್ಥಾನದಲ್ಲಿ ಸಂಸ್ಕೃತದ 'ವ' ಅಕ್ಷರಕ್ಕೆ ಬದಲಾಗಿ 'ಬ' ಅಕ್ಷರವನ್ನು ಉಪಯೋಗಿಸುವ ಪರಿಪಾಠವುಂಟು. ಕಿತ್ತೂರ ಭೀಮಾಚಾರ್ಯರು "ಆ ಮೇಲೆ ಕೆಲವು ಕಾಳಗಗಳಲ್ಲಿ ಬೀರಬಲ್ಲನು ತನ್ನ ಶೌರ್ಯವನ್ನು ಪ್ರಕಟಿಸಿದ್ದರಿಂದ ಬಾದಶಹನು 'ವೀರವರ'ನೆಂಬ ಬಹುಮಾನದ ಪದವಿಯನ್ನಿತ್ತನು" ಎಂದು ಬರೆಯುತ್ತಾರೆ.* ಇವನು ಯಾವ ಕಾಳಗಗಳಲ್ಲಿ ಕಲಿತನವನ್ನು ತೋರಿಸಿ, ಎಂದು ಈ ಬಿರುದನ್ನು ಪಡೆದನೆಂಬ ವಿಷಯದಲ್ಲಿ ಲೇಖಗಳೇನೂ ದೊರೆಯುವುದಿಲ್ಲ. ಆದ್ದರಿಂದ ಈ ಬರಹವು ಎಷ್ಟು ಮಟ್ಟಿಗೆ ನಿಜವಾಗಿರುತ್ತದೆಂಬುದನ್ನು ಕುರಿತು ನಾವು ಏನೂ ಹೇಳಲಾರೆವು. ಅದು ಹೇಗೇ ಇರಲಿ, ವೀರವರ ಶಬ್ದದ ಹಿಂದೀ ರೂಪವೇ ಬೀರಬಲ್ ಆಗಿರುತ್ತದೆಂದು ಹೇಳಲಿಕ್ಕೆ ಅಡ್ಡಿ ಏನು ತೋರುವುದಿಲ್ಲ.

---

* ಅಕ್ಬರ ಬೀರಬಲ್ಲರ ವಿನೋದ ಕಥೆಗಳು ಪುಟ ೮.

ವಿನ್ಸೆಂಟ ಸ್ಮಿತ್ತರು ಬೀರಬಲ್ಲನು ೧೫೨೮ರಲ್ಲಿ **ಕಾಲ್ಪಿ** ಎಂಬೂರಿನಲ್ಲಿ ಹುಟ್ಟಿದನೆಂತಲೂ ಅವನ ಹೆಸರು **ಮಹೇಶದಾಸ**ನೆಂತಲೂ ಬರೆಯುತ್ತಾರೆ.* ನಮ್ಮ ಭರತಖಂಡದಲ್ಲಿ ಕಾಲ್ಪಿ ಗ್ರಾಮಗಳು ಎರಡಿರುತ್ತವೆ. ಕಲಕತ್ತೆಯ ಹತ್ತರ ಹುಗಳಿ ಹೊಳೆಯ ದಂಡೆಯಲ್ಲೊಂದು, ವಾಯುವ್ಯ ಪ್ರಾಂತದಲ್ಲಿ ಯಮುನಾ ನದಿಯ ದಂಡೆಯಲ್ಲಿ ಮತ್ತೊಂದು. ಯಮುನಾ ತೀರದಲ್ಲಿರುವ ಕಾಲ್ಪಿ ಗ್ರಾಮವೇ ಬೀರಬಲ್ಲನು ಹುಟ್ಟಿದೆಡೆಯಾಗಿರಬಹುದು. ಏಕೆಂದರೆ ಮಹೇಶದಾಸನು ಅಕ್ಬರನ ಆಸರೆ ಹೊಂದಿದಾಗ ಬಂಗಾಳ ಬಿಹಾರ ಪ್ರಾಂತ ಗಳು ಅಕ್ಬರ ಬಾದಶಹನ ಆಳಿಕೆಗೆ ಒಳಗಾಗಿರಲಿಲ್ಲ. ಕಾಲಿಂದೀತಟದಲ್ಲಿ ರುವ ಕಾಲ್ಪಿಯೇ ಮಹೇಶದಾಸನ ಜನ್ಮಸ್ಥಳವೆಂದು ನಿರ್ಣಯಿಸಲಿಕ್ಕೆ ವಿನ್ಸೆಂಟ ಸ್ಮಿತ್ತರ ಬರಹದ ಹೊರತು ಬೇರೆ ಆಧಾರಗಳೇನು ದೊರೆಯುವುದಿಲ್ಲ.

ಬೀರಬಲ್ಲನು ಮಾರವಾಡದಲ್ಲಿದ್ದ ಮಕರ ಎಂಬ ಊರಿನಲ್ಲಿ ಹುಟ್ಟಿದ ನೆಂದು ಮಾರವಾಡಿಯರೂ ಅಜಮೀರದ ಹತ್ತರದಲ್ಲಿದ್ದ ಒಂದು ಹಳ್ಳಿಯಲ್ಲಿ ಹುಟ್ಟಿದನೆಂದು ಜಯಪೂರಿಯರೂ ದಿಲ್ಲಿಯಲ್ಲಿ ಒಬ್ಬ ಬ್ರಾಹ್ಮಣನ ಹೊಟ್ಟೆ ಯಲ್ಲಿ ಹುಟ್ಟಿದನೆಂದು ದಿಲ್ಲಿಯವರೂ ಬುಂದೇಲ ಖಂಡದಲ್ಲಿದ್ದ ಟೆಹರಿ ಎಂಬ ಪಟ್ಟಣದಲ್ಲಿ ಹುಟ್ಟಿದನೆಂದು ಬುಂದೇಲಿಯರೂ ಕಾಶಿಯಲ್ಲಿದ್ದ ಬ್ರಹ್ಮಘಾಟ ಎಂಬಲ್ಲಿ ಹುಟ್ಟಿದನೆಂದು ವಾರಣಾಸಿಯವರೂ ಹೇಳುತ್ತಾರೆ. ಇವೆಲ್ಲ ಸ್ವಾಭಿಮಾನದಿಂದ ಪ್ರೇರಿತವಾದ ಕಟ್ಟುಕಥೆಗಳಾದ್ದರಿಂದ ಇವುಗಳನ್ನು ನಾವು ನಂಬಲಾರೆವು.

ಬೀರಬಲ್ಲನ ಹೆಸರಿನ ವಿಷಯವಾಗಿಯೂ ಭಿನ್ನಾಭಿಪ್ರಾಯಗಳುಂಟು. ಕೆಲವರು ಇವನ ಹೆಸರು **ಬ್ರಹ್ಮದಾಸ**ನೆಂದು ಬರೆಯುತ್ತಾರೆ. ಇದು ತಪ್ಪು ತಿಳುವಳಿಕೆಯ ಫಲವೆಂದು ತೋರುತ್ತದೆ. ಏಕೆಂದರೆ ಬೀರಬಲ್ಲನು ತನ್ನ ಕವಿತೆಯ ಕೊನೆಯಲ್ಲಿ **ಬ್ರಹ್ಮಲಿಖಾ** ಎಂಬ ಮುದ್ರಿಕೆಯನ್ನು ಹಾಕು ತ್ತಿದ್ದುದರಿಂದ ಅವನ ಹೆಸರೇ ಬ್ರಹ್ಮದಾಸನೆಂದಿರಬಹುದೆಂದು ಅನುಮಾನ ಪಡುವದು ಸರಿಯಾಗಲಾರದು. ವಾಡಿಕೆಯಾಗಿ ಮುದ್ರಿಕೆಯು ಕವಿಯ

---

* ಅಕ್ಬರ ಚರಿತ್ರ ಪುಟ ೨೩೬.

ಇಷ್ಟ ದೇವತೆಯ ಅಥವಾ ಗುರುವಿನ ಹೆಸರಾಗಿರುವುದರಿಂದ ಅದು ಬರಹ ಗಾರನ ಹೆಸರೆಂದೆಣಿಸುವುದು ಶುದ್ಧ ತಪ್ಪು. ಆದಕಾರಣ ಶೋಧಕರಾದ ವಿನ್ಸೆಂಟ ಸ್ಮಿತ್ತರು ಬರೆದ ಮಹೇಶದಾಸನೆಂಬ ಹೆಸರೇ ನಿಜವಾದ ಹೆಸರಿರ ಬಹುದೆಂದು ಹೇಳಲಿಕ್ಕೆ ಅಡ್ಡಿಯಿಲ್ಲ.

ಮಹೇಶದಾಸನು ಬ್ರಾಹ್ಮಣನಾಗಿದ್ದನೆನ್ನಲಿಕ್ಕೆ ಹಲವು ಕಾರಣಗ ಳುಂಟು. ೧. ವಿನ್ಸೆಂಟ ಸ್ಮಿತ್ತರು ಇವನು ಒಬ್ಬ ಬ್ರಾಹ್ಮಣನ ಮಗನಾಗಿದ್ದ ನೆಂದು ಬರೆಯುತ್ತಾರೆ. ೨. ಇವನ ಮುದ್ರಿಕೆಯು ಬ್ರಹ್ಮಲಿಖಾ ಎಂದಿದ್ದು ದರಿಂದ ಇವನು ಬ್ರಾಹ್ಮಣನಾಗಿಯೇ ಇರಬೇಕು. ೩. ಇವನು ತನ್ನ ಬುದ್ಧಿಸಾಮರ್ಥ್ಯದಿಂದ ವಿಶ್ವಪ್ರಯತ್ನಮಾಡಿ ಅಕ್ಬರ ಬಾದಶಹನ ವಿಶ್ವಾಸವು ವೇದಧರ್ಮದಲ್ಲಿ ನೆಲೆಗೊಳ್ಳುವಂತೆ ಮಾಡಿದನು. ೪. ಇವನು ಸಂಸ್ಕೃತ ಭಾಷೆಯ ಅಧ್ಯಯನವನ್ನು ಚೆನ್ನಾಗಿ ಮಾಡಿದ್ದನು. ೫. ಇವನ ಆಚಾರ ವಿಚಾರ ಸಂಬಂಧಗಳು ಬ್ರಾಹ್ಮಣರಿಗೆ ಸರಿಯಾಗಿದ್ದವು.* ೬. ಬ್ರಾಹ್ಮಣರ ಹೆಚ್ಚಳವನ್ನೂ ಇಂದ್ರಾದಿ ದೇವತೆಗಳ ಶ್ರೇಷ್ಠತ್ವವನ್ನೂ ಸಂದರ್ಭದೊರೆದಂತೆ ಇವನು ಬಾದಶಹನಿಗೆ ತಿಳಿಸುತ್ತಿದ್ದನು.†

ಮೇಲೆ ಹೇಳಿದಂತೆ ಮಹೇಶದಾಸನು ಕಾಲ್ಪಿ ಎಂಬ ಗ್ರಾಮದಲ್ಲಿ ಒಬ್ಬ ಬಡ ಬ್ರಾಹಣ್ಮನ ಹೊಟ್ಟೆಯಲ್ಲಿ ಹುಟ್ಟಿದನು (೧೫೨೮). ಅವನ ತಂದೆಯ ಹೆಸರು ಗೊತ್ತಾಗುವುದಿಲ್ಲ. ಅವನ ತಾಯಿಯ ಹೆಸರು **ಕಾಳಿ** ಎಂದು ಒಂದು ಕಥೆಯಿಂದ ಮಾತ್ರ ತಿಳಿಯುತ್ತದೆ. ಒಂದು ದಿವಸ ಬಾದ ಶಹನು ಬೀರಬಲ್ಲನೊಡನೆ ಬೀದಿ ಹಿಡಿದು ಹೋಗುತ್ತಿರುವಾಗ ಅವರು ಕರಿ ರೊಟ್ಟಿಯನ್ನು ತಿನ್ನುತ್ತಿದ್ದ ಒಂದು ನಾಯಿಯನ್ನು ನೋಡಿದರು. ಆಗ ಬಾದಶಹನು ವಿನೋದದಿಂದ

ಬೀರಬಲ್ಲ, ದೇಖೊ, ಕಾಲಿಕೊ ಕುತ್ತಾ ಖಾ ರಹಾ ಹೈ (ಕಾಳಿಯನ್ನು ನಾಯಿಯು ತಿನ್ನುತ್ತದೆ, ನೋಡು).

---

* ಪರಿಶಿಷ್ಟ ಅ ನೋಡಿರಿ.  † ಪರಿಶಿಷ್ಟ ಇ ನೋಡಿರಿ.

ಬೀರಬಲ್ಲ — ಉಸಕೆ ಲಿಯೆತೊ ಯಹಿ ನ್ಯಾಮತ ಹೈ (ಅದು ನ್ಯಾಮತಳನ್ನು ಹಿಡಿದುಕೊಂಡಿರುತ್ತದೆ).

ಬಾದಶಹ — (ತನ್ನ ತಾಯಿಯನ್ನು ನ್ಯಾಮತಳೆಂದು ಕರೆಯುತ್ತಿದ್ದುದರಿಂದ ಸಿಟ್ಟಾಗಿ) ಏನು ನನ್ನ ತಾಯಿಯನ್ನು ನಾಯಿಯಿಂದ ತಿನಿಸುತ್ತೀಯಾ?

ಬೀರಬಲ್ಲ — (ಸಮಾಧಾನದಿಂದ) ನನ್ನ ತಾಯಿಯನ್ನು ಮಾತ್ರ ತಾವು ನಾಯಿಗೆ ಹಾಕುವುದು ಉಚಿತವೇ?

ಬಾದಶಹ — (ತುಸು ಶಾಂತನಾಗಿ) ನಾನು ಹಾಗೆ ಎಂದೂ ಹೇಳಲಿಲ್ಲ. ನಾಯಿಯು ಕರಿರೊಟ್ಟಿಯನ್ನು ತಿನ್ನುತ್ತದೆ ಎಂದು ಮಾತ್ರ ಹೇಳಿದೆನು. ನಿನ್ನ ತಾಯಿಗೆ ಅವಮಾನ ಮಾಡಬೇಕೆಂದು ನಾನು ಎಂದೂ ಬಯಸಲಿಲ್ಲ.

ಬೀರಬಲ್ಲ — ಮಹಾಸ್ವಾಮಿ, ಕ್ಷಮಿಸಬೇಕು. ನಾನೆಂದೂ ತಮ್ಮ ಮಾತುಶ್ರೀಯವರಿಗೆ ಅವಮಾನ ಮಾಡಬೇಕೆಂದು ಬಗೆಯಲಿಲ್ಲ. ರೊಟ್ಟಿಯು ಕರಿದಾಗಲಿ ಕೆಟ್ಟದಾಗಲಿ ಅದನ್ನು ತಿನ್ನುವುದು ನಾಯಿಯ ಸ್ವಭಾವವೆಂದು ಮಾತ್ರ ನಾನು ಹೇಳಿದೆನು.

ಬಾದಶಹನು ನಿರುತ್ತರನಾದನು.*

ಈ ಕಥೆಯಿಂದ ಅವನ ತಾಯಿಯ ಹೆಸರು ತಿಳಿದರೂ ಆಕೆಯು ಎಷ್ಟು ವರ್ಷ ಬದುಕಿದ್ದಳೆಂಬುದು ಗೊತ್ತಾಗುವುದಿಲ್ಲ. ಇದಲ್ಲದೆ ಅವನ ಬಂಧುಬಳಗದವರ ವಿಷಯಕ್ಕೂ ಅವನ ಗೃಹಸ್ಥಿತಿ-ವಿದ್ಯಾಭ್ಯಾಸಗಳ ವಿಷಯಕ್ಕೂ ನಮಗೆ ಏನೂ ತಿಳಿಯುವ ಸಂಭವವಿಲ್ಲ.

ಜನ್ಮಾಂತರದ ಸಿದ್ಧಾಂತವು ನಮ್ಮಲ್ಲಿ ಬಲವಾಗಿ ಬೇರು ಬಿಟ್ಟಿರುವುದರಿಂದ ಈ ಹೊತ್ತಿನ ವರೆಗೆ ಈ ನಮ್ಮ ಪುಣ್ಯಭರತ ಭೂಮಿಯಲ್ಲಿ ಹುಟ್ಟದ ಎಲ್ಲ ಮಹಾಪುರುಷರ ಪೂರ್ವಜನ್ಮದ ಕಥೆಗಳು ನಮ್ಮಲ್ಲಿ ಹಬ್ಬಿರುತ್ತವೆ.

* ಕಿ. ಭೀಮಾಚಾರ್ಯರ ಅಕ್ಬರ ಬೀರಬಲ್ಲರ ವಿನೋದ ಕಥೆಗಳು ಪುಟ ೨೩೬.

ಅದರಂತೆಯೇ ಅತುಲಕೀರ್ತಿಶೇಷರಾದ ಅಕ್ಬರ-ಬೀರಬಲ್ಲರ ಪೂರ್ವಜನ್ಮದ ಕಥೆಯೊಂದುಂಟು. ಅದನ್ನು ಇಲ್ಲಿ ಕೊಡುತ್ತೇವೆ.



೧೫ನೆಯ ಶತಮಾನದಲ್ಲಿ **ಸುಶರ್ಮ**ನೆಂಬ ಒಬ್ಬ ಸದಾಚಾರಸಂಪನ್ನನಾದ ಬ್ರಾಹ್ಮಣನೂ **ಸುದಾಸ**ನೆಂಬ ತಳವಾರ ಜಾತಿಯ ಅವನ ಜತೆಗಾರನೂ **ಬೈಜರ** ಎಂಬ ಒಂದು ಊರಿನಲ್ಲಿದ್ದರು. ಸುಶರ್ಮನ ಮನಸ್ಸಿನಲ್ಲಿ ಪ್ರಯಾಗಕ್ಕೆ ಹೋಗಿ ತಪಶ್ಚರ್ಯಮಾಡಿ ದೇವರನ್ನೊಲಿಸಿಕೊಂಡು ಮುಂದಿನ ಜನ್ಮದಲ್ಲಿ ಅರಸನಾಗಬೇಕೆಂಬ ಬಯಕೆಯು ಹುಟ್ಟಿದ್ದರಿಂದ ಅವನು ಅದನ್ನು ತನ್ನ ಸಂಗಡಿಗನಾದ ಸುದಾಸನಿಗೆ ತಿಳಿಸಲು ಅವನು ಸುಶರ್ಮನನ್ನು ಹಿಂಬಾಲಿಸಲಿಕ್ಕೆ ಸಿದ್ಧನಾದನು. ಅವರು ದಾರಿಯಲ್ಲಿ

ದಣಕೊಂಡು ಪ್ರಯಾಗಕ್ಕೆ ಹೋದ ಬಳಿಕ ಸುಶರ್ಮನು ೨೪ ವರ್ಷ ತಪಶ್ಚರ್ಯ ಮಾಡಿದರೂ ದೇವರು ಪ್ರತ್ಯಕ್ಷನಾಗಲಿಲ್ಲ. ಆದ್ದರಿಂದ ಅವನು ಬೇಸತ್ತು, ತ್ರಿವೇಣೀ ಸಂಗಮದಲ್ಲಿ ಮರಣಹೊಂದಿದವರಿಗೆ ಪಾಪವು ತಟ್ಟದೆ ಅಭೀಷ್ಟವು ದೊರಕುವುದೆಂಬ ಪುರಾಣೋಕ್ತಿಯನ್ನು ನೆನಪಿಗೆ ತಂದು, ಅಲ್ಲೇ ಮುಳುಗಿ ಸತ್ತನು. ಸುದಾಸನಾದರೂ ಹಾಗೆಯೇ ಮಾಡಿದನು. ಮುಂದೆ ಸುಶರ್ಮನು ಅಕ್ಬರನಾಗಿ ಹುಟ್ಟಿದನೆಂತಲೂ ಸುದಾಸನು ಮಹೇಶ ದಾಸನಾಗಿ ಜನಿಸಿದನೆಂತಲೂ ಅವರೀರ್ವರಿಗೂ ಹಿಂದಿನ ಜನ್ಮದ ಸ್ಮರಣೆ ಇತ್ತೆಂತಲೂ ಕೆಲವರು ಹೇಳುತ್ತಾರೆ. ಅದು ಹೇಗೆಂದರೆ:—

ಒಂದು ದಿನ ಅಕ್ಬರ ಬೀರಬಲ್ಲರು ಮಾತಾಡುತ್ತ ಕುಳಿತಿರುವಾಗ ಅಕ್ಬರನಿಗೆ ತಾನು ಪೂರ್ವಜನ್ಮದಲ್ಲಿ ಹುಗಿದಿಟ್ಟಿದ್ದ ದ್ರವ್ಯದ ನೆನಪಾಯಿತು. ಅದನ್ನು ಅವನು ಬೀರಬಲ್ಲನಿಗೆ ತಿಳಿಸಲು ಅವನಿಗೂ ಅದರ ನೆನಪು ಬಂತು. ಕೂಡಲೆ ಅದನ್ನು ಅಗಿದು ತರುವ ಉದ್ದೇಶದಿಂದ ಅವರಿಬ್ಬರು ವೇಷ ಬದಲಿಸಿಕೊಂಡು ಗುಪ್ತರೀತಿಯಲ್ಲಿ ಹೊರಟು ಆ ಎಡೆಗೆ ಹೋಗಿ, ಅಗಿದು ನೋಡಲು, ತಾವು ಹೂಳಿಟ್ಟ ಹಣವು ಇದಕ್ಕಿದ್ದ ಹಾಗೆ ಇದ್ದುದನ್ನು ಕಂಡು ಅವರಿಬ್ಬರಿಗೂ ಪರಮಾನಂದವಾಯಿತು. ಅಲ್ಲಿಂದ ಅವರಿಬ್ಬರೂ ಹೊರಟು ಮೊದಲು ಆ ಎಡೆಯ ನೆರೆಯಲ್ಲಿದ್ದ ಒಬ್ಬ ಕೂಲಿಕಾರನ ಗುಡಿಸಲಿಗೆ ಹೋಗಲು, ತಮ್ಮ ಪೂರ್ವಜನ್ಮದಲ್ಲಿ ಪರಿಚಿತನಾಗಿದ್ದ ಒಬ್ಬ ಮುಪ್ಪಿನ ಮುದುಕನನ್ನು ಅಲ್ಲಿ ಕಂಡು ಅವರಿಬ್ಬರೂ ಅತಿಸೋಜಿಗಗೊಂಡರು. ಆ ಮುದುಕನು ಅವರನ್ನು ಗುರುತಿಸಿ "ಸುಶರ್ಮಸುದಾಸರೇ, ಬಹಳ ದಿವಸಕ್ಕೆ ಎಲ್ಲಿಂದ ಬಂದಿರಿ?" ಎಂದು ಕೇಳಿದನು. ಪೂರ್ವಜನ್ಮದ ಹೆಸರಿನಿಂದ ತಮ್ಮಿಬ್ಬರನ್ನು ಕರೆದುದನ್ನು ಕೇಳಿ ಅವರಿಬ್ಬರಿಗೂ ಅತ್ಯಾಶ್ಚರ್ಯವಾಯಿತು. ಆಗ ಅವರು ಅವನ ಸಮಾಚಾರವನ್ನೆಲ್ಲ ಕೇಳಿ, ತಮ್ಮ ಪೂರ್ವಜನ್ಮದ ಸ್ಮರಣೆಯು ಅಕ್ಷರಶಃ ದಿಟವಾದ್ದೆಂದು ಮನಗಂಡು, ಸಂತೋಷದಿಂದ ಅವನಿಗೆ ತಮಗೆ ಸಿಕ್ಕಿದ ಹಣದ ಅರೆವಾಸಿಯನ್ನು ಕೊಟ್ಟರು. ಆ ಹಣದ ರಾಶಿಯನ್ನು ನೋಡಿ "ಸುಶರ್ಮ!! ನಾನು ಇಷ್ಟು ವರ್ಷ ಈ ಚೋಟು ಹೊಟ್ಟೆಯ ಸಲುವಾಗಿ ದುಡಿದು ದುಡಿದು ಕಂದಿ ಕುಂದಿ ಬೆಂದು

ಬೆಂಡಾದೆನು. ಈಗ ನೀನು ದಯಮಾಡಿಕೊಟ್ಟ ಕೊಟ್ಟ ಹಣದಿಂದ ಇನ್ನು ಮುಂದೆ ಸುಖವಾಗಿ ಕಾಲ ಕಳೆಯುವೆನು" ಎಂದು ಹೇಳಿ ಕಿಲಕಿಲನೆ ನಕ್ಕು ಹರ್ಷ ವಾಯುವಶನಾಗಿ ನೆಲದ ಮೇಲೆ ಉರುಳಾಡಿ ಒರಗಿದನು. ಮುಂದೆ ಕೆಲ ಹೊತ್ತಿನ ಮೇಲೆ ಆವನನ್ನು ಎಬ್ಬಿಸಲೆತ್ತುಗಡೆ ನೋಡಲು ಉಸಿರೇ ಇರ ಲಿಲ್ಲ!!! ಆಗ ಅವನ ಉತ್ತರಕ್ರಿಯೆಗಳನ್ನು ಮಾಡಿಸಿ ಅವರಿಬ್ಬರೂ ಮರಳಿ ತಮ್ಮ ಸ್ಥಳಕ್ಕೆ ಬಂದು ಸೇರಿದರು.*

ಈ ಕಥೆಯನ್ನು ಓದಿದ ಕೂಡಲೆ ವಾಚಕರ ಮನಸ್ಸಿನಲ್ಲಿ ತರತರದ ವಿಚಾರಗಳು ಬರುವುದು ಸ್ವಾಭಾವಿಕವಾದ ಮಾತೇ ಸರಿ. ಜನ್ಮಾಂತರ ತತ್ವವು ವೇದಧರ್ಮದ ವಿಶಿಷ್ಟಸ್ವತ್ತಾದ್ದರಿಂದ ಉಳಿದ ಧರ್ಮದವರಿಗೆ ಅದರ ಗಂಧವೇ ಇಲ್ಲ. ಆಂಗ್ಲವಿದ್ಯಾಮದ್ಯವು ತೀರತಲೆಗೇರಿದವರು ಈ ಜನ್ಮಾಂ ತರ ತತ್ವವು ಹೆಡ್ಡತನವೆಂದು ಹಳಿಯಬಹುದು. ಕೆಲಮಟ್ಟಿಗೆ ಅದರ ಸಂಸ್ಕಾರ ಹೊಂದಿದವರು ನಿಜವಾದುದೇನೆಂಬುದನ್ನು ದೇವರೇ ಬಲ್ಲ. ಅದರ ವಿಚಾರ ನಮಗೇಕೆ?—ಎಂದು ಉದಾಸೀನವೃತ್ತಿಯನ್ನು ವಹಿಸ ಬಹುದು. ಆಂಗ್ಲವಿದ್ಯೆಯ ಸಂಪರ್ಕವಿಲ್ಲದವರು ಅಥವಾ ಆ ವಿದ್ಯೆಯ ಬಯಲುಬೆಡಗನ್ನು ಕಂಡುಹಿಡಿದವರು ಈ ತರದ ಕಥೆಯ ಸತ್ಯತೆಯನ್ನು ಗಟ್ಟಿಯಾಗಿ ನಂಬದಿದ್ದರೂ ಮನುಷ್ಯನು ಈ ಜನ್ಮದಲ್ಲಿ ಅನುಭವಿಸುವ ವಿಪರೀತಫಲಗಳು ಪೂರ್ವಜನ್ಮದ ಕರ್ಮಗಳಿಗೆ ಸಂಬಂಧಿಸಿರುವವೆಂದು ಒಡಂಬಡಬಹುದು.

ಕಾರಣವಿಲ್ಲದೆ ಕಾರ್ಯವಾಗುವುದಿಲ್ಲೆಂಬ ಮೂಲತತ್ವವನ್ನು ಪಾಶ್ಚಾ ತ್ಯರೂ ಪೌರ್ವಾತ್ಯರೂ ಸಂದೇಹವಿಲ್ಲದೆ ಒಮ್ಮನಸ್ಸಿನಿಂದ ಒಪ್ಪುತ್ತಾರಷ್ಟೇ. ಆದರೆ ಈ ಪ್ರಪಂಚದಲ್ಲಿ ಕೆಟ್ಟ ಕೆಲಸಮಾಡುವ ಎಷ್ಟೋ ಮಂದಿ ದುಷ್ಟರು ಸುಖಿಗಳಾಗಿರುತ್ತಾರೆಂಬುದನ್ನೂ ಯಾವಾಗಲೂ ಪುಣ್ಯದ ಕೆಲಸ ಮಾಡುವ ಎಷ್ಟೋ ಮಂದಿ ಸಜ್ಜನರು ಅಡಿಗಡಿಗೆ ಕಷ್ಟಕ್ಕೆ ಗುರಿಯಾಗಿರುತ್ತಾರೆಂಬು ದನ್ನೂ ನಾವು ಕಣ್ಣಾರೆ ದಿನಾಲು ನೋಡುತ್ತೇವೆ. ಇದರ ಕಾರಣವೇನಿರ

* ಕಿತ್ತೂರ ಭೀಮಾಚಾರ್ಯರ ಅಕ್ಬರ-ಬೀರಬಲ್ಲರ ವಿನೋದ ಕಥೆಗಳು ಪುಟ ೧೨೦.

ಬಹುದು? ಪ್ರತಿಯೊಂದು ಕಾರ್ಯಕ್ಕೆ ಕಾರಣವಿರಬೇಕಲ್ಲವೇ ? ಈ ವಿಪ ರೀತ ದೃಶ್ಯಫಲರೂಪಿಯಾದ ಕಾರ್ಯಕ್ಕೆ ಈ ಜನ್ಮದ ಶುಭಾಶುಭಕರ್ಮ ಗಳು ಎಂದೂ ಕಾರಣಗಳಾಗಲಾರವು. ಏಕೆಂದರೆ ಮೇಲುಕೀಳು ಕೆಲಸ ಗಳಿಗೆ ಲೇಸುಕಾಡಾದ ಫಲಗಳೇ ಆಗುತ್ತವೆಂಬ ಗಟ್ಟಿ ನಂಬಿಕೆಯು ಎಲ್ಲ ಮನುಷ್ಯ ಪ್ರಾಣಿಗಳಲ್ಲಿ ನೆಲೆಗೊಂಡಿರುತ್ತದೆ. ಇಷ್ಟೇ ಅಲ್ಲ. ಎಲ್ಲ ಧರ್ಮ ಸ್ಥಾಪಕರು — ಮಹರ್ಷಿಗಳು, ಗೌತಮ ಬುದ್ಧ, ಮಹಾವೀರ, ಜೊರೋಸ್ತ್ರ, ಮಹಮ್ಮದ, ಕಾನಫೂಸಿಯಸ್, ಏಸುಕ್ರಿಸ್ತ — ಕೆಟ್ಟ ಕೆಲಸಕ್ಕೆ ಕೆಟ್ಟ ಫಲವೂ ಒಳ್ಳೆಯ ಕೆಲಸಕ್ಕೆ ಒಳ್ಳೆಯ ಫಲವೂ ನಿಶ್ಚಯವಾಗಿ ದೊರೆಯುತ್ತದೆಂದು ಎಡೆಬಿಡದೆ ಸಾರಿ ಹೇಳಿರುತ್ತಾರೆ. ಆದ್ದರಿಂದ ಈ ವಿಪರೀತ ದೃಶ್ಯಫಲ ರೂಪಿಯಾದ ಕಾರ್ಯಕ್ಕೆ ಪೂರ್ವಜನ್ಮದ ಕರ್ಮಗಳೇ ಕಾರಣಗಳಾಗಿರ ಬೇಕೆಂಬ ಸಿದ್ಧಾಂತವನ್ನು ನಮ್ಮ ಪೂರ್ವಜರಾದ ಮಹರ್ಷಿಗಳು ಕಂಡು ಹಿಡಿದು, ಇಡಿ ಮಾನವೀಯ ಕುಟುಂಬದ ಮೇಲೆ ದೊಡ್ಡ ಉಪಕಾರವನ್ನು ಮಾಡಿರುತ್ತಾರೆಂದು ಹೇಳಲಿಕ್ಕೆ ಅಡ್ಡಿ ಏನು ತೋರುವುದಿಲ್ಲ. ಈ ಸಿದ್ಧಾಂತ ವನ್ನು ನಂಬದವರು ಅಥವಾ ಹಳಿಯುವವರು ಈ ವಿಪರೀತ ದೃಶ್ಯಫಲ ರೂಪಿಯಾದ ಕಾರ್ಯಕ್ಕೆ ನಮ್ಮ ಮಹರ್ಷಿಗಳು ಹುಡುಕಿರುವ ಕಾರಣ ಕ್ಕಿಂತ ಹೆಚ್ಚು ಸಯುಕ್ತಿತವಾದ ಮತ್ತು ಹೆಚ್ಚು ಸಮಂಜಸವಾದ ಕಾರಣ ವನ್ನು ಶೋಧಿಸಿ ಸಿದ್ಧಮಾಡಿ ತೋರಿಸುವ ವರೆಗೆ ಈ ಅಮೌಲ್ಯವಾದ ಅರ್ಷಸಿದ್ಧಾಂತಕ್ಕೆ ಕುಂದುಕೊರತೆಗಳೆಂದಿಗೂ ಬರಲಾರವು. ತಿಳಿಗೇಡಿ ಗಳೆಂದು ಅವರು ನಮ್ಮನ್ನು ಜರೆದರೆ ಅವರ ಹೆಡ್ಡತನವೇ ಹೊರ ಬೀಳು ವುದು, ಹೊರತು ನಮ್ಮ ಯೋಗ್ಯತೆ ಏನೂ ಕಡಮೆಯಾಗಲಾರದು.

ಪೂರ್ವಜನ್ಮದ ಸಿದ್ಧಾಂತವು ನಿಜವಾದ್ದೆಂಬ ಮೇಲಿನ ಬರಹದಿಂದ ನಾನು ಅಕ್ಬರ ಬೀರಬಲ್ಲರ ಪೂರ್ವಜನ್ಮದ ಕಥೆಯನ್ನು ಪೂರ್ಣವಾಗಿ ನಂಬು ತ್ತೇನೆಂದು ಸರ್ವಥಾ ತಿಳಿಯಕೂಡದು. ಪೂರ್ವಜನ್ಮದ ಸುಕೃತದಿಂದಲೇ ಅವರಿಬ್ಬರು ಈ ಜನ್ಮದಲ್ಲಿ ಇಂತಹ ದೊಡ್ಡ ಯೋಗ್ಯತೆಯನ್ನು ಹೊಂದಿದ್ದ ರೆಂದೂ ಒಬ್ಬನು ಮತ್ತೊಬ್ಬನಿಗೆ ಋಣಿಯಾಗಿದ್ದರಿಂದಲೇ ಅವರಿಬ್ಬರು ಪರಮ ಸ್ನೇಹಿತರಾಗಿದ್ದರೆಂದೂ ಸಾಮಾನ್ಯವಾಗಿ ಎಲ್ಲರೂ ಒಡಂಬಡಬಹುದು.

ಮಹೇಶದಾಸನು ೧೫೨೮ರ ಸುಮಾರಿನಲ್ಲಿ ಹುಟ್ಟಿದನೆಂದು ಹಿಂದೆ ಹೇಳಿರುತ್ತೇವಷ್ಟೆ. ಆದರೆ ಕೆಲವರು ಅವನು ವಿಕ್ರಮ ಸಂವತ್ ೧೬೧೭ರಲ್ಲಿ (೧೫೬೧ನೆಯ ಇಸ್ವಿಯಲ್ಲಿ) ಹುಟ್ಟಿದನೆಂದು ಬರೆದಿರುತ್ತಾರೆ. ಇದು ತೀರ ಅಸಂಭವನೀಯವೆಂದು ತೋರುತ್ತದೆ. ಏಕೆಂದರೆ ೧೫೬೯ರಲ್ಲಿ ಅಕ್ಬರ ಬಾದಶಹನು ಕಾಳಂಜರ ಕೋಟೆಯನ್ನು ಹಿಡಿದುಕೊಂಡು ರಾಜಾ ಬೀರ ಬಲ್ಲನಿಗೆ ಅದನ್ನು ಜಹಗೀರು ಹಾಕಿ ಕೊಟ್ಟನೆಂದು ವಿನ್ಸೆಂಟ ಸ್ಮಿತ್ತರು ಬರೆಯುತ್ತಾರೆ.* ಅವನು ೧೫೬೧ರಲ್ಲಿ ಹುಟ್ಟಿದ್ದು ನಿಜವಾದರೆ ಮಹೇಶ ದಾಸನು ೮|೯ ವರುಷದವನಿರುವಾಗಲೇ ಅವನಿಗೆ ಈ ಜಹಗೀರು ದೊರೆದಿರ ಬೇಕು. ಇದು ಎಂದಿಗೂ ಆಗದ ಮಾತೇ ಸರಿ. ಆದ್ದರಿಂದ ಅವನು ೧೫೨೮ರ ಸುಮಾರಿನಲ್ಲಿ, ಹುಟ್ಟಿದ್ದೇ ನಿಜವಾದ ಸಂಗತಿಯೆಂದು ನಂಬ ಬಹುದು.

ಮಹೇಶನು ಎಲ್ಲಿ ಯಾರ ಬಳಿಯಲ್ಲಿ ಏನು ಕಲಿತನೆಂಬ ಬಗ್ಗೆ ನಮಗೆ ಏನೂ ಗೊತ್ತಾಗುವುದಿಲ್ಲ. ಆದರೆ ಅವನು ಹಿಂದಿ ಪಾರ್ಸಿ ಸಕ್ಕದ ನುಡಿ ಗಳಲ್ಲಿ ನಿಷ್ಣಾತನಾಗಿದ್ದನೆಂದು ನಿಸ್ಸಂದೇಹವಾಗಿ ಹೇಳಬಹುದು. ಏಕೆಂದರೆ ಅವನು ಸಾವಿರಾರು ಕವಿತೆಗಳನ್ನು ಮಾಡಿದ್ದನೆಂತಲೂ ಅವನಿಗೆ **ಆಸ್ಥಾನ ಕವಿ** ಎಂಬ ಬಿರುದನ್ನು ಅಕ್ಬರ ಬಾದಶಹನು ಕೊಟ್ಟಿದ್ದನೆಂತಲೂ ಐತಿಹ್ಯ ವುಂಟು. ಆದರೆ ನಮ್ಮ ದುರದೃಷ್ಟದಿಂದ ಅವನು ಬರೆದ ಕಾವ್ಯಗ್ರಂಥಗಳಲ್ಲಿ ಒಂದಾದರೂ ಈಗ ದೊರೆಯುವುದಿಲ್ಲ. ಈಗ ನಮಗೆ ದೊರೆಯುತ್ತಿರುವ ಅವನ ಸಮಸ್ಯಪೂರ್ತಿಗಳೂ ಶಬ್ದಾಲಂಕಾರಗಳೂ ಪ್ರಹೇಲಿಕೆಗಳೂ ಒಗಟು ಗಳೂ ಅವನ ಭಾಷಾಪಾಂಡಿತ್ಯವನ್ನೂ ಕವಿತಾಚಾತುರ್ಯವನ್ನೂ ಬುದ್ಧಿ ವೈಚಿತ್ರ್ಯವನ್ನೂ ವಿಶದವಾಗಿ ತೋರಿಸುತ್ತವೆ.† ಬುಂದೇಲಖಂಡದವರು ಅವನು ಕಾಶಿಯಲ್ಲಿ ಸಂಸ್ಕೃತಾಭ್ಯಾಸವನ್ನು ಮುಗಿಸಿಕೊಂಡು, ದಿಲ್ಲಿಗೆ ಹೋಗಿ ಆ ಕಾಲಕ್ಕೆ ರಾಜಭಾಷೆಯಾದ ಪಾರ್ಸಿಭಾಷೆಯನ್ನು ಕಲಿತನೆಂದು ಹೇಳುತ್ತಾರೆ. ಈ ಮಾತು ನಿಜವಾಗಿದ್ದರೂ ಇರಬಹುದು.

---

* ಅಕ್ಬರ ಚರಿತ್ರ ಪುಟ ೧೦೧, ಅಡಿ ಟಿಪ್ಪಣಿ.

† ಪರಿಶಿಷ್ಟ ಉ ನೋಡಿರಿ.

ಮಹೇಶದಾಸನ ಗೃಹಕೃತ್ಯದ ಬಗ್ಗೆ ಕೆಲವು ಸಂಗತಿಗಳು ಮಾತ್ರ ತಿಳಿದಿವೆ. ಅವನು ಬ್ರಾಹ್ಮಣನಿದ್ದನೆಂತಲೂ ಅವನ ತಾಯಿಯ ಹೆಸರು **ಕಾಳಿಮ್ಮ**ನೆಂತಲೂ ಹಿಂದೆ ಹೇಳಿರುತ್ತೇವಷ್ಟೆ. ಅವನ ತಂದೆಯ ಹೆಸರು ಗೊತ್ತಾಗುವುದಿಲ್ಲ. ತಂದೆಯ ಮತ್ತು ತಾಯಿಯ ಕಡೆಯ ಬಳಗದವರು ಯಾರು ಎಲ್ಲಿದ್ದರೆಂಬುದು ತಿಳಿಯುವುದಿಲ್ಲ. ಅವನಿಗೆ ಅಣ್ಣತಮ್ಮಂದಿರು ಅಥವಾ ಅಕ್ಕತಂಗಿಯರು ಯಾರೂ ಇರಲಿಲ್ಲವೆಂದು ತೋರುತ್ತದೆ. ಅವನ ಹೆಂಡತಿಯು ಕಪ್ಪು ಬಣ್ಣದವಳಾಗಿದ್ದಳು. ಆಕೆಯ ತವರ ಮನೆಯ ವಿಷಯವಾಗಿ ಏನೂ ಗೊತ್ತಾಗುವುದಿಲ್ಲ. ಆಕೆಯು ಸದ್ಗುಣಿಯೂ ಪತಿ ಸೇವಾಪರಾಯಣಳೂ ಆಗಿದ್ದಳೆಂದು ಮಹೇಶದಾಸನೇ ಒಂದು ಸಂದರ್ಭ ದಲ್ಲಿ ಬಾದಶಹನಿಗೆ ಹೇಳಿರುತ್ತಾನೆ. ಅವನಿಗೆ ಇಬ್ಬರು ಗಂಡುಮಕ್ಕಳೂ ಒಬ್ಬಾಕೆ ಅಥವಾ ಇಬ್ಬರು ಹೆಣ್ಣುಮಕ್ಕಳೂ ಇದ್ದರೆಂದು ತಿಳಿಯಬರುತ್ತದೆ. ಅವನ ಹೆಣ್ಣುಮಕ್ಕಳನ್ನು ಯಾರಿಗೆ ಕೊಟ್ಟಿತ್ತು, ಅವನ ಸೊಸೆಂದಿರು ಯಾವ ಮನೆತನದವರು, ಅವನಿಗೆ ಎಷ್ಟು ಮಂದಿ ಮೊಮ್ಮಕ್ಕಳಿದ್ದರು ಇವೇ ಮುಂತಾದ ಸಂಗತಿಗಳ ಬಗ್ಗೆ ನಮಗೆ ಏನೂ ಗೊತ್ತಾಗುವುದಿಲ್ಲ.*

## ೨ನೆಯ ಅಧ್ಯಾಯ

### ಅಕ್ಬರ ಬೀರಬಲ್ಲರ ಗುರುತು

ಮೊಟ್ಟಮೊದಲು ಅಕ್ಬರ ಬಾದಶಹನಿಗೆ ಮಹೇಶದಾಸನ ಗಂಟು (ಜತೆ) ಹೇಗೆ ಎಲ್ಲಿ ಬಿತ್ತು? ಬಾದಶಹನು ಯಾವ ಕಾರಣದಿಂದ ಅವನನ್ನು ಪ್ರೀತಿಸಿದನು? ಮುಂದೆ ಮಹೇಶದಾಸನು ಬಾದಶಹನ ಪ್ರೀತಿವಿಶ್ವಾಸ ಗಳನ್ನು ಹೇಗೆ ಬೆಳಿಸಿಕೊಂಡನು? ಇವೇ ಮುಂತಾದ ಪ್ರಶ್ನಗಳ ವಿಚಾರ ಮಾಡುವುದೇ ಈ ಅಧ್ಯಾಯದ ಉದ್ದೇಶವು.

---

* ಪರಿಶಿಷ್ಟ ಉ ನೋಡಿರಿ.

ಅಕ್ಬರ ಮಹೇಶರ ಪರಿಚಯದ ವಿಷಯವಾಗಿ ಹಲವು ಜನರು ಹಲವು ತೆರನಾಗಿ ಬರೆದಿರುತ್ತಾರೆ. ಅವುಗಳನ್ನು ಇಲ್ಲಿ ಕೊಡುತ್ತೇವೆ:—

೧. ಹಿಂದಿನಧ್ಯಾಯದಲ್ಲಿ ಹೇಳಿದಂತೆ ಅಕ್ಬರ ಮಹೇಶದಾಸರು ಪೂರ್ವದ ಜನ್ಮದಲ್ಲಿ ಸುಶರ್ಮಸುದಾಸರಾಗಿದ್ದು ಮುಂದಿನ ಜನ್ಮದಲ್ಲಿ ತಾವು ಅರಸುಪ್ರಧಾನರು ಆಗಬೇಕೆಂದು ಬಯಸಿ ತ್ರಿವೇಣೀ ಸಂಗಮದಲ್ಲಿ ಮುಳುಗಿ ಪ್ರಾಣ ಕೊಟ್ಟುದರಿಂದಲೂ ಅವರಿಗೆ ಪೂರ್ವಜನ್ಮದ ನೆನಪು ಇದ್ದುದರಿಂದಲೂ ಅವರು ಒಬ್ಬರನ್ನೊಬ್ಬರು ಅರಿಸಿಕೊಂಡು ಬಂದು ಒಬ್ಬರನ್ನೊಬ್ಬರು ಕಲಿತು ಜೀವದ ಗೆಳೆಯರಾದರು.

ಈ ಕಾಲದಲ್ಲಿ ಈ ಪೂರ್ವಜನ್ಮದ ಕಥೆಯನ್ನು ನಂಬುವವರು ಬಹಳ ವಿರಳ. ನಾವೆಲ್ಲರೂ ಪೂರ್ವಜನ್ಮದಲ್ಲಿ ನಂಬಿಕೆಯುಳ್ಳವರಾದರೂ ಈ ಕಟ್ಟು ಕಥೆಯನ್ನು ನೆಚ್ಚಲಾರೆವು. ವ್ಯಾಸ-ಬುದ್ಧ-ಶಂಕರಾಚಾರ್ಯರಂತಹ ಅವತಾರಪುರುಷರು ಹೇಳಿದ ಪೂರ್ವಜನ್ಮದ ವೃತ್ತಾಂತಗಳನ್ನು ನಂಬುವೆವೇ ಹೊರತು ಉಳಿದವುಗಳನ್ನು ನಂಬಲಾರೆವು. ಪೂರ್ವಜನ್ಮದ ಸುಕೃತದಿಂದ ಅಕ್ಬರ ಬೀರಬಲ್ಲರು ದೊಡ್ಡಿಸ್ತಿಕೆಯನ್ನು ಪಡೆದು ಒಬ್ಬರನ್ನೊಬ್ಬರು ಕೂಡಿದರೆನ್ನಲಿಕ್ಕೆ ಸಂದೇಹವಿಲ್ಲ. ಆದರೆ ಆ ಕೂಡುವಿಕೆಗೆ ಅಮಾನುಷಿಕ ಕಾರಣಗಳು ಅವಶ್ಯವಾಗಿ ಬೇಕು. ಅವುಗಳನ್ನು ಹೇಳದೆ ಇದ್ದ ವಿವರವು ಎಂದೂ ಪೂರ್ಣವಾಗಲಾರದು. ಇದಲ್ಲದೆ ಅವರಿಬ್ಬರಿಗೂ ಪೂರ್ವಜನ್ಮದ ನೆನಪಿತ್ತೆಂಬುದು ಅಬದ್ಧವಾದ ಮಾತೇ ಸರಿ.

೨. ಬೀರಬಲ್ಲನು **ಮಕರ**ನೆಂಬ ಗ್ರಾಮದಲ್ಲಿ ಹುಟ್ಟಿದಂತೆ ಮಾರವಾಡಿಯರು ಹೇಳುತ್ತಾರೆಂದು ಹಿಂದಿನ ಅಧ್ಯಾಯದಲ್ಲಿ ತಿಳಿಸಿರುತ್ತೇವಷ್ಟೆ. ಅವನು ಸಂಗಮರವರಿಕಲ್ಲಿನ (ಅಮೃತಶಿಲೆಯ) ಗಣಿಯನ್ನು ಗೊತ್ತು ಹಚ್ಚಿ ಕೊಟ್ಟುದರಿಂದ ಬಾದಶಹನು ಆ ಕಲ್ಲುಗಳಿಂದ ಫತ್ತೆಪುರಸಿಕ್ರಿಯಲ್ಲಿ ಒಂದು ಭವ್ಯವಾದ ಅರಮನೆಯನ್ನು ಕಟ್ಟಿಸುವಾಗ ಬೀರಬಲ್ಲನ ಗುರುತು ಅವನಿಗೆ ಆಯಿತೆಂದು ಮಾರವಾಡಿಯರ ಹೇಳಿಕೆಯುಂಟು.

ಇದು ಕ್ಲಿಷ್ಟಕಲ್ಪನೆಯೆಂದು ತೋರುತ್ತದೆ. ಏಕೆಂದರೆ ಮಹೇಶದಾಸನು ಹೊಸ ಗಣಿಯನ್ನು ಗೊತ್ತು ಹಚ್ಚಿದ್ದು ದಿಟವಾದರೆ ಕಲ್ಲಿನ ಮುಖ್ಯ

ದಾರನಿಗೂ ಅವನಿಗೂ ಗುರುತಾಗಿರಬಹುದು. ಬಾದಶಹನಿಗೂ ಕಲ್ಲಿನ ಗಣಿಗೂ ಸಂಬಂಧವೇನು? ಆ ಹೊಸಪೊಳಲನ್ನು ಕಟ್ಟಿಸುವಾಗ (೧೫೭೦-೧೫೮೫) ಒಂದೆರಡು ಸಾರಿಯಾದರೂ ಕಟ್ಟುವ ಕೆಲಸವನ್ನು ನೋಡಲಿಕ್ಕೆ ಅವನಿಗೆ ಬಿಡುವು ದೊರೆಯಿತೋ ಇಲ್ಲವೋ ದೇವರೇ ಬಲ್ಲ. ಇದಲ್ಲದೆ ಸೇಖ ಸೇಲಿಮ ಕಿಷ್ಟಿಯ ಮಸೀದೆಯು ಈ ಅಮೃತಶಿಲೆಯಿಂದ ಕಟ್ಟಲ್ಪಟ್ಟಿತು (೧೫೭೨). ಆ ಕಾಲಕ್ಕೆ ಬೀರಬಲ್ಲನಿಗೆ ೪೪ ವರ್ಷಗಳಾಗಿರಬಹುದು. ಚಿಕ್ಕಂದಿನಲ್ಲೇ ಬೀರಬಲ್ಲನು ಬಾದಶಹನನ್ನು ಆಶ್ರಯಿಸಿದ್ದರಿಂದ ಈ ಕಥೆಯನ್ನು ನಂಬಲಾರೆವು. ಈ ಕಥೆಯು ವಿಶ್ವಾಸಾರ್ಹವಲ್ಲವೆಂಬುದಕ್ಕೆ ಮತ್ತೊಂದು ಕಾರಣವುಂಟು. ಫತ್ತೆಪುರಸಿಕ್ರಿಯಲ್ಲಿ ಒಂದು ಸುಂದರವಾದ ಬೀರಬಲ್ಲನ ಮನೆಯೆಂಬ ಒಂದು ಕಟ್ಟಡವನ್ನು ಈಗಲೂ ನೋಡಬಹುದು. ಅದು ೧೫೭೨ರಲ್ಲಿ ಕಟ್ಟಲ್ಪಟ್ಟಿತೆಂದು ವಿನ್ಸೆಂಟ ಸ್ಮಿತ್ತರು ಬರೆಯುತ್ತಾರೆ.*



ಫತ್ತೆಪುರ ಸಿಕ್ರಿಯಲ್ಲಿದ್ದ ಬೀರಬಲ್ಲನ ಮನೆ.

* ಅಕ್ಬರ ಚರಿತ್ರ ಪುಟ ೪೪೩.

ಬೀರಬಲ್ಲನ ಸ್ನೇಹವಾಗುವುದಕ್ಕಿಂತ ಮೊದಲೇ ಬಾದಶಹನು ಅವನಿಗೊಂದು ಅಂದವಾದ ಮನೆಯನ್ನು ಕಟ್ಟಿಸಿ ಕೊಟ್ಟನೆಂಬ ಮಾತು ತೀರ ಅಬದ್ಧವೆಂದು ಎಲ್ಲರೂ ಒಡಂಬಡಬಹುದು. ಆದ್ದರಿಂದ ಈ ಮಾರವಾಡಿಯರ ಕಥೆಯಲ್ಲಿ ಏನೂ ತಥ್ಯಾಂಶವಿಲ್ಲೆಂದು ತೋರುತ್ತದೆ.

೩. ಮಹೇಶದಾಸನು ದಿಲ್ಲಿಯಲ್ಲಿದ್ದ ಒಬ್ಬ ಬಡ ಬ್ರಾಹ್ಮಣನ ಮಗನೆಂತಲೂ ಒಂದು ದಿನ ಅರಮನೆಯ ಮುಂದಿನ ಬೈಲಿನಲ್ಲಾದ ಒಬ್ಬ ಬಹುರೂಪಿಯ* ಆಟವನ್ನು ನೋಡಲಿಕ್ಕೆ ಹೋಗಿದ್ದನೆಂತಲೂ ಆ ಬಹುರೂಪಿಯು ಎತ್ತಿನ ಸೋಗು (ವೇಷ) ಹಾಕಿದ್ದನ್ನು ಪರೀಕ್ಷಿಸುವುದಕ್ಕೋಸ್ಕರ ಮಹೇಶನು ಆ ಎತ್ತಿಗೆ ಒಂದು ಸಣ್ಣ ಹರಳನ್ನು (ಕಲ್ಲನ್ನು) ಒಗೆದನೆಂತಲೂ ಆ ಸೋಗಿನವನು ಹರಳು ತಾಕಿದ ಕೂಡಲೆ ಎತ್ತಿನಂತೇ ಮೈಯ್ನಡಿಗಿಸಿದ್ದನ್ನು ಕಂಡು ಪರಮಾನಂದಭರಿತನಾಗಿ ಅವನು ತನ್ನ ತಲೆಗೆ ಸುತ್ತಿದ ಪಟಕೆಯನ್ನು† ಅವನಿಗೆ ಇನಾಮಾಗಿ ಕೊಟ್ಟನೆಂತಲೂ ಆ ಬಹುರೂಪಿಯು ಆ ಹುಡುಗನ ಗುಣಗ್ರಾಹಕತ್ವವನ್ನೂ ಉದಾರತನವನ್ನೂ ಜಾಣ್ಮೆಯನ್ನೂ ಬಾದಶಹನ ಮುಂದೆ ಕೊಂಡಾಡಿದ್ದರಿಂದ ಅವನು ಮಹೇಶನನ್ನು ಕರಿಸಿ ತನ್ನ ಹತ್ತರ ಕುಳ್ಳಿರಿಸಿಕೊಂಡು ಮುಂದೆ ಅವನನ್ನು ತನ್ನ ಆಶ್ರಯದಲ್ಲಿಟ್ಟುಕೊಂಡನೆಂತಲೂ ದಿಲ್ಲಿಯವರು ಹೇಳುತ್ತಾರೆ. ಈ ವೃತ್ತಾಂತವು ಅಸಂಭವನೀಯವಾಗದಿದ್ದರೂ ನಿಜವಾದ್ದೆಂದು ಹೇಳಲಿಕ್ಕೆ ನಮಗೆ ಸಾಕಷ್ಟು ಆಧಾರಗಳು ದೊರೆಯುವುದಿಲ್ಲ. ಮಹೇಶನು ಜಾಣನೂ ಉದಾರನೂ ಆದ್ದರಿಂದಲೂ ಅಕ್ಬರನು ಗುಣಗ್ರಾಹಿಯಾದ್ದರಿಂದಲೂ ಈ ಮಾತು ದಿಟವಾಗಿ ನಡೆದಿದ್ದರೂ ನಡೆದಿರಬಹುದು. ಆದರೆ ಇದು ರಾಜಾಶ್ರಯದ ಕಾರಣವಾಗಲಾರದು.

೪. ತಾನು ಹುಟ್ಟಿದ ತಾವಾದ ಕಾಶಿಯಲ್ಲಿ ಸಂಸ್ಕೃತಾಭ್ಯಾಸವನ್ನು ಮಾಡಿ ದಿಲ್ಲಿಗೆ ಹೋಗಿ ಪಾರ್ಸಿಭಾಷೆಯನ್ನು ಕಲಿಯುವಾಗ ಮಹೇಶನು ರೋಗಪೀಡಿತನಾಗಲು, ಅಲ್ಲಿದ್ದ ಒಬ್ಬ ವೈದ್ಯನು ಆ ದಿಕ್ಕಿಲ್ಲದ ಬಡ ಹುಡುಗ

---

* ಬೇರೆ ಬೇರೆ ರೂಪಗಳನ್ನು ಹಾಕಿಕೊಂಡು ಜನರ ಮನರಂಜನೆ ಮಾಡುವವನು.

† ಉತ್ತರದೇಶದವರು ತಲೆಗೆ ಸುತ್ತುವ ರುಮಾಲು.

ನಿಗೋಸ್ಕರ ಕನಿಕರಪಟ್ಟು ಅವನನ್ನು ತನ್ನ ಮನೆಯಲ್ಲಿಟ್ಟುಕೊಂಡು ಔಷದ ಕೊಟ್ಟು ಆರೈಕೆ ಮಾಡಿ ವಾಸಿಯಾದ ಬಳಿಕ ಅವನ ವಿಷಯವಾಗಿ ರಾಜಾ ತೋಡರಮಲ್ಲನ ಬಳಿಯಲ್ಲಿ ಸಿಫಾರಸು ಮಾಡಲು, ಅವನು ಆ ಹುಡುಗನ ಬುದ್ಧಿಕೌಶಲ್ಯಕ್ಕೆ ಬೆರಗಾಗಿ ಅವನನ್ನು ಬಾದಶಹನಿಗೆ ಬೆಟ್ಟಿ ಮಾಡಿಸಿದನೆಂದು ವಾರಣಾಸಿಯವರು ಹೇಳುತ್ತಾರೆ. ಇದರಲ್ಲಿ ಕೆಲಮಟ್ಟಿಗೆ ತಥ್ಯಾಂಶವಿದ್ದರೂ ಇರಬಹುದು. ಏಕೆಂದರೆ ರಾಜಾ ತೋಡರಮಲ್ಲನು ಕರ್ಮನಿಷ್ಠನೂ ಬ್ರಾಹ್ಮಣ್ಯಾಭಿಮಾನಿಯೂ ಆಗಿದ್ದುದರಿಂದ ಮಹೇಶನಿಗೆ ಮನಃಪೂರ್ವಕ ವಾಗಿ ನೆರವಾಗಿದ್ದರೂ ಇರಬಹುದು. ಆದರೆ ಈ ಸಂಗತಿಯು ರಾಜಾ ಶ್ರಯದ ಕಾರಣವೆಂದು ಹೇಳಲಾರೆವು.

೫. ಅಜಮೀರಿನವರು ಅಕ್ಬರ-ಬೀರಬಲ್ಲರ ಗುರುತಿನ ಬಗ್ಗೆ ಒಂದು ಸೋಜಿಗವಾದ ಕಥೆಯನ್ನು ಹೇಳುತ್ತಾರೆ. ಬೀರಬಲ್ಲನ ತಂದೆತಾಯಿಗಳು ಬಹಳ ಬಡವರಾಗಿದ್ದುದರಿಂದ ಅಜಮೀರದ ನೆರೆಯಲ್ಲಿದ್ದ ಒಂದು ಗುಡ್ಡದ ಓರೆಯಲ್ಲಿ ಅವರು ಮನೆ ಮಾಡಿಕೊಂಡಿದ್ದರು. ಮಹೇಶನು ಸಣ್ಣವನಿರುವಾಗ ಒಂದು ದಿನ ಗುಡ್ಡದ ಮೇಲೆ ಕಟ್ಟಿಗೆಯನ್ನು ಆರಿಸಿ ಕೂಡಿ ಹಾಕಿ, ಅವು ಗಳನ್ನು ಕಟ್ಟಲಿಕ್ಕೆ ಬೇಕಾದ ಹಗ್ಗವನ್ನು ಮರೆತು ಬಂದುದರಿಂದ ಅದನ್ನು ಕಳಿಸುವಂತೆ ತಾಯಿಗೆ ಕೂಗಿ ಹೇಳಿದನು. ಕಳಿಸಲಿಕ್ಕೆ ಯಾರೂ ಇಲ್ಲವಲ್ಲ ವೆಂದು ಆಕೆ ಉಸುರಲು, ನಾಯಿಯ ಕೊರಳಲ್ಲಿ ಕಟ್ಟಿಬಿಡು ಎಂದು ಉತ್ತರ ಕೊಟ್ಟನು. ಆಕೆಯು ಹಾಗೆ ಮಾಡಲು ಮಹೇಶನು ನಾಯಿಯನ್ನು ಕರೆದು ಹಗ್ಗವನ್ನು ಬಿಚ್ಚಿಕೊಂಡು ಕಟ್ಟಿಗೆಯ ಹೊರೆ ಕಟ್ಟಿ ಹೊತ್ತುಕೊಂಡು ಹೋಗಿ ದಾರಿಯಲ್ಲಿದ್ದ ಪ್ರವಾಹವನ್ನು ಈಸಿ ದಾಟಿದನು. ಕರ್ಮಧರ್ಮ ಸಂಯೋಗದಿಂದ ಅಲ್ಲಿಗೆ ಬೇಟೆಯಾಡಲಿಕ್ಕೆ ಬಂದ ಅಕ್ಬರನು ಮಹೇ ಶನು ಹಗ್ಗ ತರಿಸಿದ ಯುಕ್ತಿಯನ್ನು ಕೇಳಿಯೂ ಪ್ರವಾಹವನ್ನು ದಾಟಿದ ಸೌಲಭ್ಯವನ್ನು ನೋಡಿಯೂ ಬೆರಗಾಗಿ ಅವನನ್ನು ಮಾತಾಡಿಸಿ, ಅವನ ಜಾಣತನವನ್ನು ಹೊಗಳಿ ಅವನನ್ನು ತನ್ನ ಆಶ್ರಯದಲ್ಲಿಟ್ಟುಕೊಳ್ಳಬೇಕೆಂಬ ಲವಲವಿಕೆಯಿಂದ ಅವನ ತಂದೆತಾಯಿಗಳನ್ನು ಕೇಳಿ, ಅವರ ಒಪ್ಪಿಗೆ ಪಡೆದು ಅವನನ್ನು ತನ್ನ ಸಂಗಡ ಕರೆದುಕೊಂಡು ಹೋದನಂತೆ.

ಈ ವೃತ್ತಾಂತದಲ್ಲಿ ಬಹು ಮಟ್ಟಿಗೆ ತಥ್ಯಾಂಶವಿದ್ದರೂ ಇರಬಹುದು. ಏಕೆಂದರೆ ಅಜಮೀರ ಪಟ್ಟಣವು ಜಯಪುರದ ನೆರೆಯಲ್ಲಿರುತ್ತದೆ; ಮತ್ತು ಜಯಪುರದ ಅರಸನೂ ಅಕ್ಬರನ ಸಮೀಪದ ಆಪ್ತನೂ ಆದ ರಾಜಾಭಗ ವಾನ್ದಾಸನು ತನ್ನ ಊಳಿಗದಲ್ಲಿದ್ದ ಮಹೇಶನನ್ನು ಅಕ್ಬರ ಬಾದಶಹನ ಬಳಿಗೆ ಕಳುಹಿದನೆಂದು ವಿನ್ಸೆಂಟ ಸ್ಮಿತ್ತರು ಬರೆಯುತ್ತಾರೆ.* ಆದರೆ ಈ ಬರಹಕ್ಕಿರುವ ಆಧಾರಗಳನ್ನು ಅವರು ಕೊಟ್ಟಿಲ್ಲ.

೬. ಹನುಮಂತ ಕೇಶವ ಎಂಬವರು ಮತ್ತೊಂದು ಬಗೆಯಿಂದ ಅಕ್ಬರ-ಮಹೇಶದಾಸರಿಗೆ ಗುರುತಾಯಿತೆಂದು ಬರೆದಿರುತ್ತಾರೆ. ಒಂದು ದಿವಸ ಅಕ್ಬರ ಬಾದಶಹನು ತನ್ನ ಒಡ್ಡೋಲಗದಲ್ಲಿ ಕುಳಿತಿರುವಾಗ ಒಬ್ಬ ರಾಜಸೇವಕನು ಬಂದು ಅತಿನಮ್ರತೆಯಿಂದ ಪ್ರಣಾಮ ಮಾಡಿ ಒಬ್ಬ ಬ್ರಾಹ್ಮಣಯುವತಿಯನ್ನೂ ಒಬ್ಬ ತುರುಕಯುವಕನನ್ನೂ ಬಾದಶಹನ ಎದು ರಿಗೆ ನಿಲ್ಲಿಸಿ, ಆ ತರುಣಿಯ ವಸ್ತ್ರದಲ್ಲಿ ಕಟ್ಟಿದ ಒಂದು ಮಾಂಸದ ಕರಣೆ ಯನ್ನು ಬಾದಶಹನ ಮುಂದಿರಿಸಿ "ರಾಜಾಧಿರಾಜ, ಈ ಬ್ರಾಹ್ಮಣ ಜಾತಿಯ ಹರೆಯದ ಹೆಣ್ಣು ಮಗಳು ಈ ಮುಸಲ್ಮಾನನು ತಂದು ಕೊಟ್ಟ ಮಾಂಸ ವನ್ನು ತಿಂದು ಉಳಿದ ಚೂರುಗಳನ್ನು ತನ್ನ ವಸ್ತ್ರಗಳಲ್ಲಿ ಕಟ್ಟಿ ಇಟ್ಟಿರು ತ್ತಾಳೆ. ಧರ್ಮ ಸರಕಾರವು ಇದರ ವಿಚಾರಣೆಯನ್ನು ಮಾಡಿ ತಕ್ಕ ತೀರ್ಪ ನ್ನು ಕೊಡಬೇಕು" ಎಂದು ಅರಿಕೆ ಮಾಡಿದನು. ಆ ಪರಮಸುಂದರಿ ಯಾದ ಯುವತಿಯು ಕೆಳಕ್ಕೆ ಮೋರೆ ಮಾಡಿಕೊಂಡು ನಿಂತು ಕಣ್ಣಿನಿಂದ ಒಂದೇ ಸವನೆ ಪಟಪಟ ಬೀಳುತ್ತಿರುವ ನೀರಿನಿಂದ ನೆಲವನ್ನು ತೊಯಿಸು ತ್ತಿದ್ದಳು.

ಬಾದಶಹ—(ಯುವತಿಯನ್ನು ಕುರಿತು) ತಂಗಿ, ನೀನು ಮಾಂಸ ವನ್ನು ತಿಂದುದು ನಿಜವೋ?

ಯುವತಿ—(ಗದ್ಗದ ಸ್ವರದಿಂದ) ಸುಳ್ಳು; ಬರಿ ಸುಳ್ಳು.

---

* ಅಕ್ಬರ ಚರಿತ್ರ ಪುಟ ೨೨೬.

ಬಾದ.—(ತುರುಕನ ಕಡೆಗೆ ಬೆರಳು ತೋರಿಸಿ) ಈ ಯುವಕನು ನಿನಗೆ ಮಾಂಸ ಕೊಡಬಂದನೇನು ?

ಯು.—ಇಲ್ಲ. ಮಾಂಸದ ಮಾತು ಈಗ ತಾನೆ ಕೇಳುತ್ತೇನೆ. ಈ ನೀಚನು ನನ್ನನ್ನು ಮುಟ್ಟ ಬಂದನು. ನಾನು ಗಟ್ಟಿಯಾಗಿ ಗದರಿಸಿದೆನು. ಅಂಜಿ ಓಡಿ ಹೋಗಿ ಈ ಜವಾನನನ್ನು ಕರಕೊಂಡು ಬಂದು ಇಬ್ಬರೂ ಕೂಡಿ ನನ್ನನ್ನು ಜುಲುಮೆಯಿಂದ ಇಲ್ಲಿಗೆ ಎಳ ತಂದರು.

ಬಾದ.—(ತುರುಕನಿಗೆ) ನೀನು ಈಕೆಗೆ ಮಾಂಸವನ್ನು ತಂದು ಕೊಟ್ಟೆಯೋ ?

ತುರಕ—ಅಹುದು; ನಾನೇ ಕೊಟ್ಟೆನು.

ಬಾದ.—ಅದೇಕೆ ?

ತು.—ಈಕೆಗೂ ನನಗೂ ಬಹಳ ದಿವಸದಿಂದ ಸ್ನೇಹವಿದೆ. ದಿನಾಲು ಒಗೆಯುವ ನೆವದಿಂದ ಹೊಳೆಗೆ ನಡುಹಗಲಿನಲ್ಲಿ ಬಂದು, ನನ್ನಿಂದ ಮಾಂಸ ತೆಗೆದುಕೊಂಡು ಈಕೆಯು ತಿನ್ನುತ್ತಾಳೆ.

ಬಾದ.—(ರಾಜಸೇವಕನಿಗೆ) ಈಕೆಯು ಮಾಂಸ ತಿಂದುದನ್ನೂ ಇವನು ಮಾಂಸ ತಂದು ಕೊಟ್ಟುದನ್ನೂ ನೀನು ನೋಡಿದೆಯಾ ?

ಸೇವಕ—ಮಹಾಸ್ವಾಮಿ, ಈಕೆ ಕೆಲಭಾಗವನ್ನು ತಿಂದು ಉಳಿದುದನ್ನು ತನ್ನ ವಸ್ತ್ರದಲ್ಲಿ ಕಟ್ಟಿಟ್ಟುದನ್ನು ನಾನು ಕಣ್ಣಾರೆ ಕಂಡೆನು. ಈಕೆಯನ್ನು ನಾನು ಹಿಡಿಯಲು, ಈ ತರುಣನು ಈಕೆಯನ್ನು ತನಗೆ ಒಪ್ಪಿಸಿ ಬಿಡೆಂದು ನನ್ನ ಕಾಲು ಮೇಲೆ ಬಿದ್ದು ಬಹುಪರಿಯಿಂದ ಹೇಳಿಕೊಂಡನು. ಆದ್ದರಿಂದ ಇವನೇ ಮಾಂಸ ತಂದು ಕೊಟ್ಟಿರಬೇಕೆಂದು ಕಾಯಾಸ ಕಟ್ಟುತ್ತೇನೆ.

ಈ ಸವಾಲು ಜವಾಬುಗಳನ್ನು ಕೇಳಿ ಎಲ್ಲ ಸಭಿಕರು ಅಚ್ಚರಿಗೊಂಡರು. ಎತ್ತು ಈಯಿತೆಂದರೆ ಕೊಟ್ಟಿಗೆಯೊಳಗೆ ಕಟ್ಟು ಎಂದು ಹೇಳುವಷ್ಟು ಅವಿಚಾರಿಯಾದ ದೊರೆಯು ಅಕ್ಬರನಾಗಿರಲಿಲ್ಲ. ಆದ್ದರಿಂದ ಈ ಕಜ್ಜೆಯಲ್ಲಿದ್ದ ಸತ್ಯಾಂಶವನ್ನು ಹುಡುಕಿ ತೆಗೆಯಬೇಕೆಂಬ ಕುತೂಹಲವು

ಅವನ ಮನಸ್ಸಿನಲ್ಲಿ ಹುಟ್ಟಿತು. ಆದ್ದರಿಂದ ಅವನು ಆ ಸ್ತ್ರೀಯ ಆಪ್ತೇಷ್ಟ ರನ್ನೂ ಬೇರೆ ಕೆಲವರನ್ನೂ ಕರೆಯಿಸಿ ಕೇಳಲು, ಅವರೆಲ್ಲರು ಆಕೆಯು ಧರ್ಮಿಷ್ಠಳೂ ಸದ್ಗುಣಿಯೂ ಪತಿವ್ರತೆಯೂ ಆದ್ದರಿಂದ ಆಕೆಯ ಮೇಲೆ ಬಂದ ದೋಷಾರೋಪವು ಅಭುಕ್ತಸುಳ್ಳಿರುತ್ತದೆಂದು ಏಕಕಂಠದಿಂದ ಸ್ಪಷ್ಟ ವಾಗಿ ಹೇಳಿದರು. ಅದರಿಂದ ಬಾದಶಹನು ಮತ್ತಿಷ್ಟು ದಿಗಿಲುಗೊಂಡು, ಅದೇ ದಿನ ನೆರೆದ ಸಭೆಯೊಳಗೆ "ಸಭಿಕರೇ, ತಮ್ಮೊಳಗಾರಾದರು ಈ ಮೊಕದಮೆಯ ತೀರ್ಪನ್ನು ಸರಿಯಾಗಿ ಮಾಡಿ ಸತ್ಯವನ್ನು ಪ್ರತ್ಯಕ್ಷವಾಗಿ ಹೊರಪಡಿಸಿಕೊಟ್ಟರೆ ನಾನು ಅವರಿಗೆ ಕೃತಜ್ಞನಾಗುವೆನಲ್ಲದೆ ೧೦೦೦ ರೂ. ಇನಾಮು ಕೊಡುವೆನು" ಎಂದು ಗಟ್ಟಿಯಾಗಿ ಹೇಳಿದನು. ಅದನ್ನು ಕೇಳಿ ಅಲ್ಲಿದ್ದ ಸಭಿಕರಲ್ಲಿ ಒಬ್ಬರು ಮತ್ತೊಬ್ಬರ ಮೋರೆಯನ್ನು ಮಿಕಿ ಮಿಕಿ ನೋಡ ತೊಡಗಿದರು. ಆಗ ಪ್ರೇಕ್ಷಕರೊಳಗೆ ಕುಳಿತಿದ್ದ ಒಬ್ಬ ಬ್ರಾಹ್ಮಣ ತರುಣನು ಎದ್ದು ಬಂದು, ಬಾದಶಹನಿಗೆ ರೀತಿಯಂತೆ ಪೊಡಮಡಿದು, "ಮಹಾಪ್ರಭೊ, ಅರ್ಧ ತಾಸು ಅವಕಾಶ ಕೊಟ್ಟರೆ, ನಾನು ಈ ವ್ಯಾಜ್ಯ ದಲ್ಲಿರುವ ನಿಜಾಂಶವನ್ನು ತಮ್ಮೆಲ್ಲರಿಗೂ ಪ್ರತ್ಯಕ್ಷವಾಗಿ ತೋರಿಸುವೆನು. ದಯವಿಟ್ಟು ಅಪ್ಪಣೆ ದಯಪಾಲಿಸಬೇಕು" ಎಂದು ವಿನಯಪೂರ್ವಕವಾಗಿ ಬಿನ್ನವಿಸಲು, ಬಾದಶಹನು ಸಂತುಷ್ಟನಾಗಿ ಎಲ್ಲ ಸಭಿಕರ ಅನುಮತಿಯಿಂದ ಅವನಿಗೆ ಅಪ್ಪಣೆ ಕೊಟ್ಟನು. ಕೂಡಲೆ ಆ ಬ್ರಾಹ್ಮಣ ತರುಣನು ಪೇಟೆಗೆ ಹೋಗಿ ತೀಕ್ಷ್ಣವಾದ ವಾಂತಿಯ ಮದ್ದನ್ನು ತಂದು ಆ ಸ್ತ್ರೀಯನ್ನು ಕುರಿತು "ತಂಗೀ, ನೀನು ಹೊಳೆಗೆ ಒಗೆಯಲಿಕ್ಕೆ ಹೋಗುವಾಗ ಏನು ತಿಂದಿದ್ದೆ" ಎಂದು ಕೇಳಿದನು. ಅವಳು "ನಮ್ಮ ಅತ್ತೆಯು ಕೊಟ್ಟಿದ್ದ ಹೆಸರುಹಿಟ್ಟನ್ನು ತಿಂದಿದ್ದೆ" ಎಂದು ಹೇಳಿದಳು. ಬಳಿಕ ಅವನು ಅವಳಿಗೆ ಆ ವಾಂತಿಯ ಔಷಧವನ್ನು ಕುಡಿಸಿ, ಒಂದು ಸ್ವಚ್ಛವಾದ ಪಾತ್ರೆಯಲ್ಲಿ ಆಕೆಯು ಕಾರುವಂತೆ ಮಾಡಿ ದನು. ತರುವಾಯ ಅವನು ಆಕೆಯ ಕಾರಿಕೆಯನ್ನು ಸಭಿಕರಿಗೆ ತೋರಿ ಸಲು ಅದರಲ್ಲಿ ಹೆಸರುಹಿಟ್ಟಿನ ರಾಡಿಯೇ ಇತ್ತಲ್ಲದೆ ಒಂದಾದರು ಮಾಂಸದ ಕಣವು ಕಾಣಲಿಲ್ಲ. ಅದನ್ನು ನೋಡಿ ಆ ಸ್ತ್ರೀಯ ನಿರಪರಾಧತೆಯನ್ನು ಮನಗಂಡ ಸಭಾಸದರು ಸಂತುಷ್ಟರಾಗಿ "ಶಾಬಾಸ ಬ್ರಾಹ್ಮಣಯುವಕ.

ನಿನ್ನ ಜಾಣ್ಮೆಗೆ ಎಣೆಯಿಲ್ಲ! ಈ ಸಾಧ್ವಿಗೆ ಜಯವಾಗಲಿ" ಎಂದು ಜಯಘೋಷವನ್ನು ಮುಕ್ತಕಂಠದಿಂದ ಮಾಡಿದರು. ಆ ಕೋಲಾಹಲ ಧ್ವನಿಯು ಆ ಸ್ಥಾನವನ್ನು ತುಂಬಿ ಹೊರಚೆಲ್ಲಿತು. ಆ ಬಟುವಿನ ಬುದ್ಧಿಚಾತುರ್ಯವನ್ನು ನೋಡಿ ಬೆರಗಾದ ಬಾದಶಹನು ಆ ತುರಕನಿಗೂ ರಾಜಸೇವಕನಿಗೂ ಸುಳ್ಳು ಆರೋಪವನ್ನು ಮಾಡಿದ ಬಗ್ಗೆ ಶಿಕ್ಷೆಯನ್ನು ವಿಧಿಸಿ, ಆ ಸಾಧ್ವೀಮಣಿಯನ್ನು ಯಥೋಚಿತವಾಗಿ ಸಂತವಿಸಿ, ಆಕೆಗೆ ವಸ್ತ್ರಾಲಂಕಾರಗಳನ್ನು ಉಡುಗೊರೆಯಾಗಿ ಕೊಟ್ಟು, ಆಕೆಯನ್ನು ಪಲ್ಲಕ್ಕಿಯಲ್ಲಿ ಕೂಡಿಸಿ, ಮನೆಗೆ ಕಳುಹಿಸಿದನು. ಬಳಿಕ ಬಾದಶಹನು ಆ ಬ್ರಾಹ್ಮಣಯುವಕನ ಜಾಣ್ಮೆಯನ್ನು ಪರಿಪರಿಯಿಂದ ಕೊಂಡಾಡಿ, ಅವನಿಗೆ ಇನಾಮನ್ನೂ ಉಡುಗೊರೆಯನ್ನೂ ಕೊಟ್ಟು, ಆ ಹೊತ್ತಿನಿಂದ ಅವನನ್ನು ತನ್ನ ಆಶ್ರಯದಲ್ಲಿಟ್ಟುಕೊಂಡನು. ಇವನೇ ಮುಂದೆ ಹೆಸರುವಾಸಿಯಾದ ಬೀರಬಲ್ಲನು.

ಈ ವೃತ್ತಾಂತವು ಹನುಮಂತ ಕೇಶವರ ಇತ್ತಕಡೆಯ ಕಲ್ಪನೆಯೆಂದು ತೋರುತ್ತದೆ. ಏಕೆಂದರೆ ಮಹೇಶದಾಸನು ಬಾದಶಹನ ನ್ಯಾಯಾಧೀಶನಾದ ಬಳಿಕ ಈ ತರದ ನ್ಯಾಯಚಾತುರ್ಯವನ್ನು ತೋರಿಸಿದ ಕಥೆಗಳು ಎಷ್ಟೋ ಇರುತ್ತವೆ. ಆದ್ದರಿಂದ ಅವು ಗುರುತಿನ ಕಾರಣಗಳಾಗಲಾರವು.

ಮೇಲೆ ಕೊಟ್ಟ ೬ ಗುರುತಿನ ಕಾರಣಗಳಲ್ಲಿ ೫ನೆಯದೊಂದು ಮಾತ್ರ ಸಯುಕ್ತಿಕವಾದುದೂ ಸಮಂಜಸವಾದುದೂ ಇರುತ್ತದೆಂದು ಹೇಳಬಹುದು. ಜನ್ಮಾಂತರವು ಮನುಷ್ಯವಿಚಾರಕ್ಕೆ ಮೀರಿದ ವಿಷಯವೇ ಸರಿ. ಅಮೃತಶಿಲಾಶೋಧನದ ಕಾರಣವು ಕಟ್ಟುಕಥೆಯೆಂದು ಹೇಳಬಹುದು. ಬಹುರೂಪಿಯ ಹೊಗಳಿಕೆಯ ಕಾರಣವು ಅದೇ ಮಾದರಿಯ ಕಥೆಯೇ ಸರಿ. ತೋಡರಮಲ್ಲನ ಮಧ್ಯಸ್ಥಿಕೆಯ ಕಾರಣವು ಸಬಲವೆಂದು ಹೇಳಲಾರೆವು. ಏಕೆಂದರೆ ಮಹೇಶನು ಅವನ ಮುಂದೆ ತನ್ನ ಬುದ್ಧಿಚಾತುರ್ಯ ತೋರಿಸಿದ ಒಂದು ಕಥೆಯಾದರೂ ಇಲ್ಲ ಮತ್ತು ಮಹೇಶನು ಅವನಿಗೆ ತನ್ನ ಕೃತಜ್ಞತೆಯನ್ನು ಯಾವ ಸಂದರ್ಭದಲ್ಲಿಯೂ ತೋರಿಸಿಲ್ಲ. ಮಾಂಸಭಕ್ಷಣಾರೋಪದ ಕಾರಣವು ಮೇಲೆ ಬರೆದಂತೆ ಅಕ್ಬರಮಹೇಶರ ಗುರುತಿನ ಕಾರಣವಾಗಲಾರದು. ಮೇಲೆ ಕೊಟ್ಟ ೫ನೆಯ ಕಾರಣವು ಗುರುತಿಗೆ ಕೆಲ ಮಟ್ಟಿಗೆ

ಸಂಬಂಧಿಸಿರಬಹುದು. ಬಾದಶಹನು ಜಯಪುರಕ್ಕೆ ಹೋಗಿರಬಹುದು. ಬೇಟೆಗೆ ಹೋದಾಗ ಫಕ್ಕನೆ ಮಹೇಶನಿದ್ದಲ್ಲಿಗೆ ಬಂದಿರಬಹುದು. ಅವನ ಅದಟಜಾಣ್ಮೆಗಳನ್ನು ಕಣ್ಣಾರೆ ಕಂಡು, ರಾಜಾಭಗವಾನ್‌ದಾಸನ ಸಿಫಾರಸನ್ನು ಕೇಳಿ, ಮಹೇಶನನ್ನು ತನ್ನ ಜತೆಗಾರನಾಗಿ ಮಾಡಿಕೊಂಡಿರಬಹುದು. ಇದು ವಾದಗ್ರಸ್ತ ವಿಷಯವಾದ್ದರಿಂದ ಓದುವವರು ತಂತಮ್ಮ ಮನಸ್ಸಿಗೆ ಬಂದಂತೆ ಅನುಮಾನ ಮಾಡಬಹುದು.

ಮಹೇಶದಾಸನ ರೂಪದ ವಿಷಯವಾಗಿದ್ದ ಒಂದು ಕಥೆಯನ್ನು ಕೊಟ್ಟು ಈ ಅಧ್ಯಾಯವನ್ನು ಮುಗಿಸುವೆವು.

ಒಂದು ದಿನ ಅಕ್ಬರ ಬಾದಶಹನು ತನ್ನ ಸಭಿಕರೊಡನೆ ಮಾತಾಡುತ್ತ ತನ್ನ ಒಡ್ಡೋಲಗದಲ್ಲಿ ಕುಳಿತಿರುವಾಗ, ಮನುಷ್ಯರ ಬಣ್ಣದ ಬಗ್ಗೆ ಪ್ರಶ್ನೆ ಹೊರಟಿತು. ಕರ್ಮಧರ್ಮಸಂಯೋಗದಿಂದ ಅದೇ ಹೊತ್ತಿಗೆ ಬೀರಬಲ್ಲನು ಬರಲು, ಎಲ್ಲರು ಅವನ ಕಪ್ಪು ಬಣ್ಣವನ್ನು ನೋಡಿ ಕಿಲಕಿಲಿ ನಕ್ಕರು. ಅದನ್ನು ನೋಡಿ ಅವನು ಬೆರಗಾಗಿ ಉಮ್ಮಳದಿಂದ ತನ್ನ ಸ್ಥಳದಲ್ಲಿ ಕುಳಿತುಕೊಂಡನು.

ಬೀರಬಲ್ಲ—(ದುಮ್ಮಾನದಿಂದ) ಪೃಥ್ವೀನಾಥ, ತಾವು ಈ ಹೊತ್ತು ಬಹಳ ಆನಂದದಲ್ಲಿರುವಂತೆ ತೋರುತ್ತದೆ.

ಬಾದ.— ಹೆಚ್ಚಿನ ಕಾರಣವೇನೂ ಇಲ್ಲ. ಇವರು ನಿನ್ನ ಕಪ್ಪು ಬಣ್ಣವನ್ನು ನೋಡಿ ನಕ್ಕರು.

ಬೀರಬಲ್ಲ—ಅದರ ಕಾರಣವು ಇವರಿಗೆ ಇನ್ನೂ ಗೊತ್ತಾದಂತೆ ತೋರುವುದಿಲ್ಲ.

ಬಾದ.— ಇವರಿಗೆ ಅದು ಗೊತ್ತಿಲ್ಲ. ಅದೇನಿದೆ ಹೇಳು.

ಬೀರ.— ಹಾಗಾದರೆ ಹೇಳುತ್ತೇನೆ. ಚಿತ್ತೈಸಿರಿ. ನಮ್ಮ ಗ್ರಂಥಗಳಲ್ಲಿ ಇದರ ಕಾರಣವನ್ನು ಸ್ಪಷ್ಟವಾಗಿ ಬರೆದಿರುತ್ತಾರೆ. ಬ್ರಹ್ಮನು ಸೃಷ್ಟಿಯನ್ನು ನಿರ್ಮಿಸುವಾಗ ಮೊಟ್ಟಮೊದಲು ಗಿಡಗಂಟೆಗಳನ್ನೂ ಪಶುಪಕ್ಷಿಗಳನ್ನೂ ಸೃಷ್ಟಿಸಿ, ಬಳಿಕ ಶ್ರೇಷ್ಠಪ್ರಾಣಿಯಾದ ಮನುಷ್ಯನನ್ನು ಸೃಜಿಸಿ

ಅವನಿಗೆ ವಿಚಾರಶಕ್ತಿಯನ್ನು ಕೊಟ್ಟನು. ಅವನು ಈ ವಿಚಾರಶಕ್ತಿಯನ್ನು ಹೇಗೆ ಉಪಯೋಗಿಸುತ್ತಾನೆಂಬುದನ್ನು ನೋಡುವುದಕ್ಕೋಸ್ಕರ ಅವನಿಗೆ ಬೇಕಾದ ನಾಲ್ಕು ಪದಾರ್ಥಗಳನ್ನು ನಿರ್ಮಿಸಿದನು. ಅವು ಯಾವ ವೆಂದರೆ:—೧ ನೈತಿಕ ಬುದ್ಧಿ, ೨ ದೇಹಸಾಮರ್ಥ್ಯ, ೩ ಸಂಪತ್ತು, ೪ ವರ್ಣ ರೂಪ ಮುಂತಾದ್ದು. ತರುವಾಯ ತಾನು ನಿರ್ಮಿಸಿದ ಮನುಷ್ಯರನ್ನು ಕರೆದು ಈ ನಾಲ್ಕು ಪದಾರ್ಥಗಳನ್ನು ಅವರ ಮುಂದಿಟ್ಟು ತಮಗೆ ಬೇಕಾದ ಒಡವೆ (ಪದಾರ್ಥ)ಗಳನ್ನು ಬೇಕಾದಷ್ಟು ಆರಿಸಿಕೊಳ್ಳಬಹುದೆಂದು ಹೇಳಲು ದೂರದರ್ಶಿಗಳಾದ ನನ್ನ ಪೂರ್ವಜರು ನೈತಿಕ ಬುದ್ಧಿಯ ದೊಡ್ಡ ಭಾಗ ವನ್ನು ತೆಗೆದುಕೊಂಡರು. ಆದ್ದರಿಂದ ನನ್ನಲ್ಲಿ ಅದರ ಭಾಗವೇ ಹೇರಳ ವಾಗಿರುತ್ತದೆ. ವರ್ಣರೂಪ ಮುಂತಾದವು ನಮ್ಮ ಪೂರ್ವಜರ ಪಾಲಿಗೆ ಹೆಚ್ಚಾಗಿ ಬಾರದ್ದರಿಂದ ನಾನು ಕೃಷ್ಣವರ್ಣದವನಾಗಿರುತ್ತೇನೆ.

ಬಾದ.—ನಿಮ್ಮ ಪೂರ್ವಜರು ಉಳಿದ ೩ ವಸ್ತುಗಳಲ್ಲಿ ದೊಡ್ಡ ಭಾಗಗಳನ್ನು ಏಕೆ ತೆಗೆದುಕೊಳ್ಳಲಿಲ್ಲ?

ಬೀರ.—ತಮ್ಮ ಪೂರ್ವಜರು ಉಳಿದ ೩ ಪದಾರ್ಥಗಳಿಗೆ ಮೆಚ್ಚಿ ಅವುಗಳ ಎಲ್ಲ ಭಾಗವನ್ನು ಮೇಲಾಡಿ ತೆಗೆದುಕೊಂಡರಿಷ್ಟೇ ಅಲ್ಲ; ಅವರು ನಮ್ಮ ಪೂರ್ವಜರಿಗೆ ನೈತಿಕಬುದ್ಧಿಯು ನಿಸ್ಸಾರವಾದ್ದರಿಂದ ಅದನ್ನು ತೆಗೆದುಕೊಳ್ಳಬೇಡರೆಂದು ಹಲವು ತರದಿಂದ ಉಪದೇಶಮಾಡಿದರು. ನಮ್ಮ ಪೂರ್ವಜರು ದೀರ್ಘದರ್ಶಿಗಳಾದ್ದರಿಂದ ಅವರ ಮಾತನ್ನು ಲೆಕ್ಕಿಸದೆ, ನೈತಿಕ ಬುದ್ಧಿಯ ದೊಡ್ಡ ಅಂಶವನ್ನು ಇಟ್ಟುಕೊಂಡು, ಉಳಿದವುಗಳ ಕೆಲವು ಅಂಶವ ನ್ನಾದರು ತೆಗೆದುಕೊಳ್ಳಬೇಕೆಂಬುವಷ್ಟರಲ್ಲಿ ಉಳಿದವರು "ನನಗೆ ಬೇಕು" "ನಿನಗೆ ಬೇಕು" ಎಂದು ಕಚ್ಚಾಡಿ ಅವುಗಳನ್ನೆಲ್ಲ ತೆಗೆದುಕೊಂಡು ಬಿಟ್ಟಿದ್ದರು!!!

ಈ ಯುಕ್ತಿವಾದವನ್ನು ಕೇಳಿ ಅದುವರೆಗೂ ನಗುತ್ತಿದ್ದ ಎಲ್ಲ ಸಭಿಕರು ನಾಚಿಕೊಂಡು ಸುಮ್ಮನಾದರು. ಬೀರಬಲ್ಲನು ನಸುನಗುತ್ತ ಅವರಿಗೆಲ್ಲರಿಗೂ ಶಾಲಿನಲ್ಲಿ ಸುತ್ತಿದ ಮಚ್ಚೆಯ ಪೆಟ್ಟನ್ನು ಕೊಟ್ಟುದರಿಂದ ಅವರ ಮೋರೆ ಒಣಗಿ ಕಪ್ಪಾಯಿತು!!!

# ೩ನೆಯ ಅಧ್ಯಾಯ

## ಅಕ್ಬರ ಬಾದಶಹನ ಮೆಚ್ಚಿಗೆ

ಹಿಂದಿನ ಅಧ್ಯಾಯದಲ್ಲಿ ಅಕ್ಬರ್ ಮಹೇಶರ ಸಂಬಂಧದಿಂದ ದೊರೆ ತಷ್ಟು (ಲಭ್ಯವಿದ್ದಷ್ಟು) ಐತಿಹ್ಯಗಳನ್ನು ಕೊಟ್ಟು ಅವುಗಳಲ್ಲಿರುವ ತಥ್ಯಾಂಶ ವನ್ನು ಗೊತ್ತುಪಡಿಸುವ ಕೆಲಸವನ್ನು ವಾಚಕರಿಗೆ ಒಪ್ಪಿಸಿದೆವು. ಇನ್ನು ಈ ಅಧ್ಯಾಯದಲ್ಲಿ ಅವರ ಗುರುತು ಹೇಗೆ ಜೀವದ ಗೆಳೆತನದಲ್ಲಿ ಪರಿಣಮಿಸಿ ತೆಂಬ ಬಗ್ಗೆ ಯಥಾಶಕ್ತಿಯಾಗಿ ವಿಚಾರ ಮಾಡುವೆವು.

ಅಕ್ಬರನಿಗೂ ಮಹೇಶನಿಗೂ ಇದ್ದ ಅವಸ್ಥಾಂತರವು ಅತಿಶಯವಾ ಗಿತ್ತು. ಅಕ್ಬರನು ತಂದೆಯ ಕಡೆಯಿಂದ ತುರುಕನೂ ತಾಯಿಯ ಕಡೆ ಯಿಂದ ಮೊಗಲನೂ ಆಗಿದ್ದನು; ಮಹೇಶನು ಆರ್ಯವಂಶಕ್ಕೆ ಸೇರಿದವನು. ಅಕ್ಬರನು ಸಿಂಧು ಪ್ರಾಂತದಲ್ಲಿ ಹುಟ್ಟಿದರೂ ತನ್ನ ಬಾಲ್ಯವನ್ನು ಅಫಗಾನ ಸ್ಥಾನದಲ್ಲಿಯೇ ಕಳೆದನು; ಇವನು ಮುಸಲ್ಮಾನನು, ಮಹೇಶನು ಸನಾತನ ಧರ್ಮಿಯು. ಇವರ ಭಾಷೆಯೂ ಶಿಕ್ಷಣವೂ ಪರಿಸ್ಥಿತಿಯೂ ಆಚಾರ ವಿಚಾರಗಳೂ ತೀರ ಭಿನ್ನವಾಗಿದ್ದುವು. ಹೀಗಿರುವಲ್ಲಿ ಮೈತ್ರಿಯು ಹೇಗೆ ಹುಟ್ಟಿತು ?

“ಸಮಾನಶೀಲವ್ಯಸನೇಷು ಸಖ್ಯಮ್” ಎಂದು ಒಬ್ಬ ಕವಿಯು ಬರೆಯುತ್ತಾನೆ. ನಡತೆಯೂ ವ್ಯಸನಗಳೂ ಒಂದೇ ಆಗಿರುವುದರಲ್ಲಿ ಗೆಳೆ ತನವು ಕೂಡುತ್ತದೆಂಬುದೇ ಈ ಮಾತಿನ ಅಭಿಪ್ರಾಯವು. ಆದರೆ ಈ ನೇಮವು ಸಾರ್ವತ್ರಿಕವಾಗಲಾರದು. ಇದು ಒಂದೇ ಅವಸ್ಥೆಯಲ್ಲಿರುವ ಜನರಿಗೆ ಸಂಬಂಧಿಸುವುದೇ ಹೊರತು ಭಿನ್ನಾವಸ್ಥೆಯ ಜನರಿಗೆ ಸಲ್ಲದು. ಏಕೆಂದರೆ, ಭಿನ್ನಾವಸ್ಥೆಯ ಜನರ ಆಚಾರವಿಚಾರಗಳೂ ಶೀಲವ್ಯಸನಗಳೂ ಭಿನ್ನವಾಗಿಯೇ ಇರುವುವು. ಅಕ್ಬರ್ ಮಹೇಶರು ಭಿನ್ನಾವಸ್ಥೆಯವರಾ ಗಿದ್ದುದರಿಂದ ಈ ನೇಮದಂತೆ ಅವರ ಸ್ನೇಹವು ಬೆಳೆಯುವ ಸಂಭವವೇ ಇಲ್ಲ.

ಪ್ರಸಿದ್ಧಕವಿಯಾದ **ಭವಭೂತಿಯು** ತನ್ನ **ಮಾಲತೀಮಾಧವ ನಾಟಕದಲ್ಲಿ** "ಯಾವದೋ ಒಂದು ಅದೃಷ್ಟ ಕಾರಣವು ಪದಾರ್ಥಗಳನ್ನು ಒಟ್ಟುಗೂಡಿಸುತ್ತದೆ. ಈ ಕೂಡುವಿಕೆಗೆ ಹೊರಗಿನ ಕಾರಣವಾವುದೂ ಬೇಕಾಗಿಲ್ಲ" ಎಂದು ಹೇಳುತ್ತಾನೆ.* ಈ ಮಾತು ನಾಟಕಕ್ಕೆ ಶೋಭಿಸುವ ಅಲಂಕಾರಿಕ ಭಾಷೆಯೇ ಹೊರತು ಶಾಸ್ತ್ರಕ್ಕನುರೂಪವಾದ ನಿಯಮವಾಗ ಲಾರದು. ಏಕೆಂದರೆ ಅದರಲ್ಲಿ ಕಾರಣವು ಗೊತ್ತಾಗುವುದಿಲ್ಲೆಂಬುದೆ ಮುಖ್ಯವಾದ ಮಾತಾಗಿರುತ್ತದೆ. ಆದ್ದರಿಂದ ಅಕ್ಬರ ಮಹೇಶರ ಗೆಳೆತನದ ಕಾರಣವನ್ನು ಗೊತ್ತು ಹಚ್ಚಲು ಈ ಭವಭೂತಿಯ ಅದೃಶ್ಯಕಾರಣ ನೇಮವು ನಮಗೆ ಉಪಯೋಗವಿಲ್ಲ.

ಮನುಷ್ಯರ ಸಂಬಂಧಗಳು ೫ ತೆರವಾದವಾಗಿರುತ್ತವೆ. ೧. ಪಿತೃ ಪುತ್ರಸಂಬಂಧ (ರಕ್ತಸಂಬಂಧ), ೨. ಶರೀರಸಂಬಂಧ (ಮದುವೆಯ ಸಂಬಂಧ), ೩. ಸ್ವಾಮಿಸೇವಕಸಂಬಂಧ, ೪. ಗುರುಶಿಷ್ಯಸಂಬಂಧ, ೫. ಸ್ನೇಹಸಂಬಂಧ. ಇವುಗಳಲ್ಲಿ ಮೊದಲಿನೆರಡು ಸಂಬಂಧಗಳು ಅಕ್ಬರ ಮಹೇಶರ ಗೆಳೆತನಕ್ಕೆ ಯಾವ ಬಗೆಯಿಂದಲೂ ಹತ್ತುವುದಿಲ್ಲ. ೩ನೆಯದಾದ ಸ್ವಾಮಿಸೇವಕಸಂಬಂಧವು ಅವರ ಪರಿಚಯದಿಂದ ಉದ್ಭವಿಸಿ, ಗುರುಶಿಷ್ಯಸಂಬಂಧದಲ್ಲಿ ವೃದ್ಧಿಯನ್ನು ಹೊಂದಿ, ಸ್ನೇಹಸಂಬಂಧದಲ್ಲಿ ಪರಿ ಣಮಿಸಿರಬಹುದೆಂದು ತೋರುತ್ತದೆ.

ಸ್ವಾಮಿಸೇವಕಸಂಬಂಧವು ಅಥವಾ ಸೇವಾಧರ್ಮವು ಬಲುಬಿಕ್ಕಟ್ಟಿನ ವೃತ್ತಿಯಾಗಿರುತ್ತದೆ. ಅದು ಅಸಿಧಾರಾವ್ರತದಂತೆ ಅತಿಕಠಿಣವಾದುದು. ಅದು ಒಂದು ಮಗ್ಗಲಿಗೆ ಬಾವಿಯು ಮತ್ತೊಂದು ಕಡೆಗೆ ಕೆರೆಯು ಇರುವ ಇಕ್ಕಟ್ಟಿನ ದಾರಿಯಂತಿರುತ್ತದೆ. ಈ ದಾರಿಯಲ್ಲಿ ಹೆಜ್ಜೆಹೆಜ್ಜೆಗೆ ದಿನ್ನೆತಗ್ಗು ಗಳೂ ಮುಳ್ಳುಕಲ್ಲುಗಳೂ ಹೇರಳವಾಗಿ ಹರಡಿರುತ್ತವೆ. ಈ ಕಲ್ಲುಮುಳ್ಳು

---

* ವ್ಯತಿಷಜತಿ ಪದಾರ್ಥಾನಾಂತರ: ಕೋಽಪಿ ಹೇತುಃ |
ನ ಖಲು ಬಹಿರುಪಾಧೀನ್ ಪ್ರೀತಯ: ಸಂಶ್ರಯಂತೆ ||
ವಿಕಸತಿ ಹಿ ಪತಂಗಸ್ಯೋದಯೇ ಪುಂಡರೀಕಂ |
ದ್ರವತಿ ಚ ಹಿಮರಶ್ಮಾವುದ್ಗತೇ ಚಂದ್ರಕಾಂತಃ || ಮಾಲತೀಮಾಧವ.

ಗಳು ಕಣ್ಣಿಗೆ ಅಪಾಯವಿಲ್ಲದಂತೆ ತೋರಿದರೂ ಅಪಾಯ ಮಾಡದೆ ಬಿಡು ವುದಿಲ್ಲ. ಒಳ್ಳೆಯದು ಕೆಡಕಾಗುತ್ತದೆ, ಕೆಟ್ಟದು ಒಳಿತಾಗುತ್ತದೆ. ಅನ್ಯಾಯವು ನ್ಯಾಯವಾಗುತ್ತದೆ, ನ್ಯಾಯವು ಅನ್ಯಾಯವಾಗುತ್ತದೆ. ಊಚು ನೀಚಾಗುತ್ತದೆ, ನೀಚು ಊಚಾಗುತ್ತದೆ. ಶತ್ರುವು ಮಿತ್ರನಾಗು ತ್ತಾನೆ, ಮಿತ್ರನು ಶತ್ರುವಾಗುತ್ತಾನೆ. ಹಣಗಾರನು ಬಡವನಾಗುತ್ತಾನೆ, ಬಡವನು ಹಣಗಾರನಾಗುತ್ತಾನೆ; ದಿಟವು ಸಟೆಯಾಗುತ್ತದೆ, ಸಟೆಯು ದಿಟವಾಗುತ್ತದೆ. ಆದುದರಿಂದಲೇ ಸೇವಾವೃತ್ತಿಯು ಅತಿಕಠಿಣವಾದುದು; ಅದರ ಮರ್ಮವು ಯೋಗಿಗಳಿಗೂ ಗೊತ್ತಾಗಿಲ್ಲೆಂದು ಒಬ್ಬ ಕವಿಯು ಬರೆದಿರುತ್ತಾನೆ.*

ಮೇಲೆ ಹೇಳಿದ ಕವಿವಚನವು ವಿಶೇಷವಾಗಿ ದೇವತಾಸೇವೆಗೆ ಸಂಬಂ ಧಿಸಿರುವುದಿಲ್ಲ. ಏಕೆಂದರೆ ದೇವತಾಸೇವೆಯಲ್ಲಿ ಧರ್ಮವಿರೋಧವು ಹೆಚ್ಚಾಗಿ ಹುಟ್ಟುವುದಿಲ್ಲ. ಮಾರುತಿಯು ಶ್ರೀರಾಮಚಂದ್ರನ ಸೇವೆಯನ್ನು ಮಾಡಿ ಸೇವಾಧುರೀಣನೆಂದು ಹೆಸರು ಪಡೆದನು. ಅದರಂತೆಯೇ ಎಷ್ಟೋ ಮಂದಿ ಸಾಧುಸಂತರು ಶ್ರೀಪರಮೇಶ್ವರನ ಸೇವೆಯಲ್ಲಿ ಮಗ್ನರಾಗಿರುವರು. ಅವ ರಿಗೆ ಅರಿಷಡ್ವರ್ಗಗಳನ್ನು ಗೆಲ್ಲುವುದೊಂದೇ ತೊಂದರೆಯು; ಬೇರೆ ಯಾವ ತೊಂದರೆಯೂ ಇಲ್ಲ. ಆದರೆ ಮನುಷ್ಯ ಸೇವೆಯಲ್ಲಿ ಮತ್ತೊಂದು ಬಲವ ತ್ತರದ ತೊಂದರೆಯು ಅಡ್ಡಗಟ್ಟುತ್ತದೆ. ಏಕೆಂದರೆ, ಸೇವಕರಂತೆ ಯಜ ಮಾನರೂ ಕಾಮಕ್ರೋಧಲೋಭ ಮುಂತಾದ ಅರಿಷಡ್ವರ್ಗಗಳ ವಶವರ್ತಿ ಗಳು. ಇಂತಹ ಯಜಮಾನರ ಅಪ್ಪಣೆಗಳನ್ನು ಸಲ್ಲಿಸುವುದು ಸೇವಕರ ಕರ್ತವ್ಯವಾಗಿರುತ್ತದೆ. ಆದುದರಿಂದ ಸೇವಕನು ದೇವರ ಕಟ್ಟಳೆಯಾದ ತನ್ನ ಧರ್ಮವನ್ನು ಕಾಯ್ದುಕೊಳ್ಳಲಿಕ್ಕೆ ತನ್ನ ಮಾನಸಿಕ ಶತ್ರುಗಳೊಡನೆ ಕಾದಬೇಕಲ್ಲದೆ ಯಜಮಾನನೊಡನೆಯೂ ಬಾರಿ ಬಾರಿಗೆ ಹೊಡೆದಾಡ ಬೇಕಾಗುತ್ತದೆ. ಇಂತಹ ಸಂಧರ್ಭದಲ್ಲಿ ಸ್ವಧರ್ಮವನ್ನು ಕಾಪಾಡಿಕೊಳ್ಳು ವುದು ಎಷ್ಟು ಕಷ್ಟಸಾಧ್ಯವೆಂಬುದನ್ನು ವಾಚಕರೇ ಊಹಿಸಬಹುದು. ಪಾಂಡವರು ಸೇವಾವೃತ್ತಿಯಿಂದ ವಿರಾಟ ರಾಜನ ಆಶ್ರಯದಲ್ಲಿದ್ದಾಗ ಅವರು

---

* ಸೇವಾಧರ್ಮಃ ಪರಮಗಹನೋ ಯೋಗಿನಾಮಪ್ಯಗಮ್ಯಃ ।

ಅನುಭೋಗಿಸಿದ ಕಷ್ಟಗಳು ಎಲ್ಲರಿಗೂ ಗೊತ್ತಿರುವವು. ಧರ್ಮರಾಯನ ತಾಳ್ಮೆ, ಧರ್ಮಬುದ್ಧಿ, ನೈತಿಕಧೈರ್ಯ, ಸ್ವಾರ್ಥತ್ಯಾಗ, ಸತ್ಯಸಂಧತ್ವ— ಈ ಗುಣಗಳು ಈಗಿನ ಸೇವಕರೊಳಗೆ ಎಷ್ಟು ಮಂದಿಯಲ್ಲಿರಬಹುದು? ಒಬ್ಬರಲ್ಲಿಯೂ ಇಲ್ಲವೆಂದರೂ ಅತಿಶಯೋಕ್ತಿಯಾಗಲಾರದು. ಆದುದರಿಂದ ಇಂತಹ ಸೇವಕರು ಅವಿವೇಕಿಗಳಾದ ಯಜಮಾನರ ಅಪ್ಪಣೆಯನ್ನು ಪಾಲಿಸಿದರೆ ಪರದಲ್ಲಿ ಕಷ್ಟವನ್ನೂ ಪಾಲಿಸದಿದ್ದರೆ ಇಹದಲ್ಲಿ ಕಷ್ಟವನ್ನೂ ತಪ್ಪದೆ ಅನುಭೋಗಿಸಬೇಕಾಗುತ್ತದೆ.

ಪ್ರತಿಯೊಬ್ಬ ಮನುಷ್ಯನಲ್ಲಿಯೂ ಅತ್ಯುತ್ಕೃಷ್ಟವಾದ ಕೆಲವು ಗುಣಗಳು ಅವಶ್ಯವಾಗಿ ಇರಲೇ ಬೇಕು. ಆ ಗುಣಗಳಿಲ್ಲದವನು ಮನುಷ್ಯ ಪ್ರಾಣಿಯಲ್ಲ, ಪಶುವೇ ಸರಿ. ಆ ಗುಣಗಳೇ ಜನಾಂಗದ ಅಥವಾ ಸಮಾಜದ ಉನ್ನತಿಯ ಮತ್ತು ಅವನತಿಯ ಮುಖ್ಯಕಾರಣಗಳು. ಅವು ಬೆಳೆದಂತೆ ಜನರ ಸೌಖ್ಯವು ಹೆಚ್ಚುವುದು; ಅವು ಕಡಿಮೆಯಾದಂತೆ ಜನರ ದುಃಖವು ಬೆಳೆಯುವುದು. ಆದುದರಿಂದ ಆ ಸದ್ಗುಣಗಳನ್ನು ವಿಶ್ವಪ್ರಯತ್ನಮಾಡಿ ಕಾಯ್ದುಕೊಂಡು ವೃದ್ಧಿಗೊಳಿಸುವುದೇ ಮನುಷ್ಯನ ಅತಿ ದೊಡ್ಡದಾದ ಮತ್ತು ಅತಿ ಪವಿತ್ರವಾದ ಕರ್ತವ್ಯವಾಗಿರುತ್ತದೆ. ಆ ಸದ್ಗುಣಗಳಾವುವೆಂದರೆ—೧. ದೇವರಲ್ಲಿ ಭಕ್ತಿವಿಶ್ವಾಸಗಳು, ೨. ಬಂಧುಪ್ರೀತಿ, ೩. ಕೃತಜ್ಞತೆ, ೪. ಸತ್ಯಪಕ್ಷಪಾತ ೫. ಸ್ವಾಭಿಮಾನ.

೧. **ದೇವರಲ್ಲಿ ಭಕ್ತಿ ವಿಶ್ವಾಸಗಳು.** ದೇವರು ಸೃಷ್ಟಿಕರ್ತನು ಮತ್ತು ಸೃಷ್ಟಿನಿಯಾಮಕನು. ನಮ್ಮನ್ನು ಸೃಷ್ಟಿಸಿದವನು ಅವನೇ, ಸಲಹುವವನು ಅವನೇ. ನಮ್ಮ ಅನುಕೂಲ್ಯಕ್ಕೋಸ್ಕರ ಅವನು ಈ ಭೂಮಂಡಲವನ್ನೂ ನದಿಸಮುದ್ರಗಳನ್ನೂ ಗಿರಿಕಂದರಗಳನ್ನೂ ವೃಕ್ಷಲತೆಗಳನ್ನೂ ಜಲಜಖನಿಜಗಳನ್ನೂ ಸೂರ್ಯಚಂದ್ರಾದಿಗ್ರಹಗಳನ್ನೂ ಋತುಮಾನಗಳನ್ನೂ ಭೂಚರಜಲಚರಖೇಚರಪ್ರಾಣಿಗಳನ್ನೂ ವಾತಾವರಣಮೇಘಮಂಡಲವನ್ನೂ ನಿರ್ಮಿಸಿರುತ್ತಾನೆ. ಈ ಎಲ್ಲ ಅನುಕೂಲ್ಯಗಳನ್ನು ನಾವು ಚೆನ್ನಾಗಿ ಉಪಯೋಗಮಾಡಿಕೊಳ್ಳಬೇಕೆಂಬ ಉದ್ದೇಶದಿಂದ ದೇವರು ನಮಗೆ ಬುದ್ಧಿಯನ್ನೂ

ದೇಹಸಾಮರ್ಥ್ಯವನ್ನೂ ದಯೆಪಾಲಿಸಿರುತ್ತಾನೆ. ಯಾವನಾದರೂ ಒಬ್ಬ ಗೃಹಸ್ಥನು ನಮಗೆ ಒಂದು ಹೊಲವನ್ನಾಗಲಿ ಒಂದು ಮನೆಯನ್ನಾಗಲಿ ಕೆಲವು ಹಣವನ್ನಾಗಲಿ ಉಚಿತವಾಗಿ ಕೊಟ್ಟರೆ ಅವನು ನಮಗೆ ದೊಡ್ಡ ಉಪಕಾರ ಮಾಡಿದನೆಂದು ಅವನನ್ನು ಕೊಂಡಾಡುತ್ತೇವೆ. ದೇವರು ನಮಗೆ ಅಖಂಡ ಭೂಮಿಯನ್ನೂ ಅಪಾರಸಂಪತ್ತನ್ನೂ ಅಖಿಲಸಾಮಾಗ್ರಿಗಳನ್ನೂ ಅತುಲಜ್ಞಾನವನ್ನೂ ಕೊಟ್ಟು ಸಂರಕ್ಷಿಸುತ್ತಿರುವುದರಿಂದ ಅವನನ್ನು ಎಷ್ಟು ಹೊಗಳಿದರೂ ಸಾಲದು, ದಾಸಾನುದಾಸರಾಗಿ ಅವನನ್ನು ಎಷ್ಟು ಸೇವಿಸಿದರೂ ಅವನು ನಮಗೆ ಮಾಡುವ ಉಪಕಾರದ ಕೋಟ್ಯಾಂಶದ ಕೆಲಭಾಗವನ್ನಾದರೂ ತೀರಿಸುವುದು ನಮ್ಮಿಂದ ತೀರ ಅಶಕ್ಯವಾಗಿರುತ್ತದೆ. ಆದುದರಿಂದ ಪ್ರತಿಯೊಬ್ಬ ಮನುಷ್ಯನು ದೇವರಲ್ಲಿ ಪೂರ್ಣ ವಿಶ್ವಾಸವಿಟ್ಟು ಅವನನ್ನು ಅನನ್ಯಭಾವಭಕ್ತಿಯಿಂದ ಭಜಿಸುವುದು ನಮ್ಮೆಲ್ಲರ ಅತಿ ಪವಿತ್ರವಾದ ಆದ್ಯ ಕರ್ತವ್ಯವಾಗಿರುತ್ತದೆ.

೨. **ಬಂಧು ಪ್ರೀತಿ.** ದೇವರೇ ನಮ್ಮೆಲ್ಲರ ತಂದೆಯು. ಭಾರತೀಯರಾದ ನಾವೆಲ್ಲರೂ ಅವನ ಮಕ್ಕಳು. ನಮ್ಮ ತಾಯಿತಂದೆಗಳ ಮೂಲಕವಾಗಿ ನಮಗೆ ಜನ್ಮ ಕೊಟ್ಟವನು ಅವನೇ.* ನಮ್ಮಲ್ಲಿ ದೈವ ನಿರ್ಮಿತವಾದ ಜಾತಿಗಳು ಎರಡೇ—ಗಂಡು ಮತ್ತು ಹೆಣ್ಣು. ಈಗ ನಾವು ನೋಡುವ ಅನೇಕ ಜಾತಿಗಳು, ಅನೇಕ ಮತಗಳು, ಅನೇಕ ಪಂಗಡಗಳು, ಅನೇಕ ಕೋಮುಗಳು ಇವೆಲ್ಲವೂ ಮನುಷ್ಯ ನಿರ್ಮಿತವಾದುವೇ ಹೊರತು ದೈವ ನಿರ್ಮಿತವಲ್ಲ. ಸ್ಮಾರ್ತ, ಮಾಧ್ವ, ರಾಮಾನುಜ, ವಲ್ಲಭಪಂಥಿ, ಸಾರಸ್ವತ, ಬೌದ್ಧ, ಜೈನ, ಲಿಂಗಾಯತ, ಸಿಕ್, ಮಹಮ್ಮದಿಯ, ಕ್ರೈಸ್ತ ಮುಂತಾದ ಭೇದಗಳೂ ಅವುಗಳಿಗೊಳಪಟ್ಟ ಉಪಭೇದಗಳೂ ಮನುಷ್ಯ ಕೃತಿಯೇ ಹೊರತು ದೈವಿಕ ಕೃತಿಗಳಾಗಲಾರವು. ಏಕೆಂದರೆ ಪ್ರತಿಯೊಬ್ಬ ಮತಸ್ಥಾಪಕನೂ ದೇವತಾಂಶಸಂಭೂತನಾದರೂ ಸೃಷ್ಟಿಕರ್ತನಾದ ದೇವ

---

* ಸರ್ವಯೋನಿಷು ಕೌಂತೇಯ ಮೂರ್ತಯಃ ಸಂಭವಂತಿ ಯಾಃ |
ತಾಸಾಂ ಬ್ರಹ್ಮ ಮಹದ್ಯೋನಿರಹಂ ಬೀಜಪ್ರದಃ ಪಿತಾ || ಭಗವದ್ಗೀತಾ ಅ. ೧೪ ಶ್ಲೋ. ೪.

ರಲ್ಲ.* ಆದುದರಿಂದ ನಮ್ಮ ಮತವು ಯಾವುದೇ ಆಗಲಿ, ನಮ್ಮ ಉದ್ಯೋಗವು ಯಾವುದೇ ಆಗಲಿ, ನಮ್ಮ ಸ್ಥಳವು ಯಾವುದೇ ಆಗಲಿ, ನಾವೆಲ್ಲರೂ ದೇವರ ಮಕ್ಕಳೆಂದು ದೃಢವಾಗಿ ನಂಬಿ, ದುರಭಿಮಾನಾಸೂಯೆಗಳಿಗೆ ನಮ್ಮ ಅಂತಃಕರಣದಲ್ಲಿ ಸ್ವಲ್ಪವಾದರೂ ಇಂಬುಗೊಡದೆ, ಒಬ್ಬರನ್ನೊಬ್ಬರು ಶುದ್ಧಾಂತಃಕರಣದಿಂದ ಪ್ರೀತಿಸುವುದು ನಮ್ಮೆಲ್ಲರ ಎರಡನೆಯ ಕರ್ತವ್ಯವಾಗಿರುತ್ತದೆ.

೩. **ಕೃತಜ್ಞತೆ.** ಎರಡನೆಯವರು ನಮಗೆ ಮಾಡಿದ ಉಪಕಾರವನ್ನು ಎಚ್ಚರದಿಂದ ನೆನಪಿನಲ್ಲಿಟ್ಟು ಅವರಿಗೆ ನಿರ್ವಂಚನೆಯಿಂದ ಪ್ರತ್ಯುಪಕಾರ ಮಾಡಬೇಕೆಂಬ **ಉತ್ಕಟೇಚ್ಛೆಯೇ** ಕೃತಜ್ಞತೆಯು. ಜಗನ್ನಿಯಾಮಕನಾದ ಪರಮೇಶ್ವರನು ಈ ಹೊತ್ತಿನ ವರೆಗೆ ಮಾಡಿದ ಮತ್ತು ಈಗ ಮಾಡುತ್ತಿರುವ ಅನಂತೋಪಕಾರವನ್ನೂ ಗುರುಹಿರಿಯರು ಮಾಡುವ ಹಿತಕೃತ್ಯಗಳನ್ನೂ ಬಂಧು ಬಳಗದವರು ಮಾಡುವ ಉಪಕಾರವನ್ನೂ ಪರರು ಆಪತ್ಕಾಲದಲ್ಲಿ ಮಾಡಿದ ಅಯಾಚಿತ ಅಥವಾ ಯಾಚಿತ ಸಾಹಾಯ್ಯವನ್ನೂ ನಾವು ಎಂದೂ ಮರೆಯದೆ ನಮ್ಮ ಶಕ್ತ್ಯನುಸಾರವಾಗಿ ಪ್ರತ್ಯುಪಕಾರ ಮಾಡಲು ಹವಣಿಸಿದರೆ ನಮ್ಮಲ್ಲಿ ಬಂಧು ಪ್ರೀತಿಯು ಬೆಳೆದು ಐಕ್ಯಶಕ್ತಿಯುಂಟಾಗುವುದು. '**ಸಂಘೇ ಶಕ್ತಿಃ ಕಲೌಯುಗೆ**' ಎಂಬ ನಾಣ್ನುಡಿಯು ಎಲ್ಲರಿಗೂ ಗೊತ್ತಿರುವುದು. ಬಂಧುಪ್ರೀತಿ ಕೃತಜ್ಞತೆಗಳು ಸಂಘಶಕ್ತಿಯೆಂಬ ಬಂಡಿಯ ಎರಡು ಗಾಲಿಗಳಾಗಿರುತ್ತವೆ. ಈ ಗಾಲಿಗಳ ತುಳಿತದಿಂದ ನಮ್ಮ ಮನಸ್ಸಿನಲ್ಲಿ ಹುಟ್ಟಬಹುದಾದ ಸ್ವಾರ್ಥ, ಅಹಂಕಾರ, ಅಸೂಯಾಗಳೆಂಬ ಕರಕಿಕಸಗಳು (ಹುಲ್ಲು ಮುಂತಾದವು) ಪುಡಿಪುಡಿಯಾಗಿ ನಿರ್ಮೂಲವಾಗುವುವು. ಬಂಧು ಪ್ರೀತಿಯಿಂದ ನಾವು ಪರರಿಗೆ ಉಪಕಾರ ಮಾಡುವುದು, ಅವರು ತಿರುಗಿ ಕೃತಜ್ಞತೆಯಿಂದ ನಮ್ಮ ಹಿತವನ್ನು **ಬಯಸು**ವುದು, ಇವುಗಳ ಪರಂಪರೆಯಿಂದ ನಮ್ಮ ಜನ್ಮಸಾರ್ಥಕ್ಯವಾಗುವುದಲ್ಲದೆ, ನಮ್ಮಲ್ಲಿ ಸಂಘ ಶಕ್ತಿಯು ಬೆಳೆದು ನಮ್ಮ ಸಮಾಜದ, ಜನಾಂಗದ

---

* ಯದ್ಯದ್ವಿಭೂತಿಮತ್ಸತ್ವಮ್ ಶ್ರೀಮದೂರ್ಜಿತಮೇವವಾ ।
ತತ್ತದೇವಾವಗಚ್ಛತ್ವಮ್ ಮಮ ತೇಜೋಂಶ ಸಂಭವಮ್ ॥ ಭಗವಧೀತಾ ಅ. ೧೦ ಶ್ಲೋ. ೧೪.

ಅಥವಾ ರಾಷ್ಟ್ರದ ಶಾಂತಿಸುಖಗಳನ್ನು ಹೆಚ್ಚಿಸುವುದು, ಇದೇ ಇಹಲೋಕದ ಸೌಖ್ಯಸಾಧನವೂ ಪರಲೋಕದ ಬೀಜಮಂತ್ರವೂ ಆಗಿರುವುದೆಂದರೆ ಅತಿಶಯೋಕ್ತಿಯಾಗಲಿಕ್ಕಿಲ್ಲ.

೪. **ಸತ್ಯಪಕ್ಷಪಾತ.** ಸತ್ಯಾಸತ್ಯಗಳೆಂಬ ಸಂಸ್ಕೃತ ಶಬ್ದಗಳನ್ನೂ ಅವುಗಳಿಗೆ ಸರಿಯಾದ ದಿಟ, ಸುಳ್ಳು (ಸಟೆ) ಎಂಬ ಕನ್ನಡ ಶಬ್ದಗಳನ್ನೂ ನಾವು ಪ್ರತಿ ದಿನವೂ ಉಪಯೋಗಿಸುತ್ತೇವೆ. ಅದ್ವೈತಮತ ಸ್ಥಾಪಕರಾದ ಶ್ರೀಮಚ್ಛಂಕರಾಚಾರ್ಯರು ಬ್ರಹ್ಮನು ಮಾತ್ರ ಸತ್ಯವೆಂದು ಪ್ರತಿಪಾದಿಸುತ್ತಾರೆ.* ಈ ಗಹನವಾದ ವೈದಾಂತಿಕ ಅರ್ಥದ ಗೊಡವಿಗೆ ಹೋಗದೆ, ಸತ್ಯ ಅಥವಾ ನನ್ನಿ ಈ ಶಬ್ದಗಳ ವ್ಯಾವಹಾರಿಕ ಅರ್ಥವು ನಮ್ಮ ಪ್ರಕೃತ ವಿಷಯಕ್ಕೆ ಸಾಕಾಗಿರುತ್ತದೆ. 'ಸತ್ ಅಂದರೆ' ಇದ್ದುದು; ಇದ್ದಕ್ಕಿದ್ದ ಹಾಗೆ ಹೇಳುವುದೇ ಸತ್ಯ ಅಥವಾ ನನ್ನಿ. ದಿಟ ಶಬ್ದವು "**ದಿಶ್ = ನೋಡು**" ಎಂಬ ಸಂಸ್ಕೃತ ಧಾತುವಿನ ಭೂತಕೃದ್ವಾಚಿಕವಾದ 'ದಿಷ್ಟ' ಶಬ್ದದ ತದ್ಭವವಾಗಿರುತ್ತದೆ. ಅದರ ಅರ್ಥವು "ನೋಡಿದ್ದನ್ನು ಕಂಡಂತೆ ಹೇಳುವುದು" ಎಂದು ಆಗುತ್ತದೆ. ಆದ್ದರಿಂದ ಸತ್ಯ ಅಥವಾ ನನ್ನಿ ಎಂದರೆ ನೋಡಿದ್ದನ್ನು ನೋಡಿದಂತೆ ವರ್ಣಿಸುವುದು ಅಥವಾ ಕೇಳಿದ್ದನ್ನು ಕೇಳಿದಂತೆ ಹೇಳುವುದು.† ಈ ಸತ್ಯವು ಅತಿ ಪವಿತ್ರವಾದ ಸದ್ಗುಣವು. ಇದೇ ಇಹಪರದ ಮುಖ್ಯ ಸಾಧನವು. ಎಲ್ಲ ಸದ್ಗುಣಗಳಿಗೂ ಇದು ತಳಹದಿಯಾಗಿರುತ್ತದೆ.

ಪೂರ್ವಕಾಲದಲ್ಲಿ ಈ ನಮ್ಮ ಭರತಖಂಡದಲ್ಲಿ ಸತ್ಯಗುಣಕ್ಕೆ ಇದ್ದಷ್ಟು ಪ್ರತಿಷ್ಠೆಯು ಪೃಥ್ವಿಯೊಳಗಿನ ಯಾವ ನಾಡಿನಲ್ಲಿಯೂ ಇರಲಿಲ್ಲೆನ್ನಲಿಕ್ಕೆ ಏನೂ ಅಡ್ಡಿಯಿಲ್ಲ. ನಮ್ಮ ಪೂರ್ವಜರಾದ ಮಹರ್ಷಿಗಳು ತಾವು ಸತ್ಯ

---

* ಶ್ಲೋಕಾರ್ಧೇನ ಪ್ರವಕ್ಷ್ಯಾಮಿ ಯದುಕ್ತಂ ಗ್ರಂಥಕೋಟಿಭಿಃ ।
ಬ್ರಹ್ಮ ಸತ್ಯಮ್ ಜಗನ್ಮಿಥ್ಯಾ ಜೀವೋ ಬ್ರಹ್ಮೈವ ನಾಪರಃ ॥

† ಅರಸ ಕೇಳ್ಳೆ ಸತ್ಯವಚನಕೆ ಸರಿಯದಾವುದು ।
ಧರ್ಮಶಾಸ್ತ್ರೋತ್ಕರಗಳಲಿಸದುಗತಿಗೆ ಸಾಧನಸಕಲಸೌಖ್ಯಕರ ॥ ಮಹಾಭಾರತ.

ಸಂಧರಾಗಿ ಆ ಸದ್ಗುಣವನ್ನು ಭರತಖಂಡದಲ್ಲೆಲ್ಲ ಹಬ್ಬಿಸಲಿಕ್ಕೆ ವಿಶ್ವಪ್ರಯತ್ನ ಮಾಡಿ ಜಯಶೀಲರಾದರೆಂದು ಇತಿಹಾಸವು ಸರ್ವತೋಮುಖವಾಗಿ ಹೊಗಳುತ್ತದೆ. ಧರ್ಮರಾಜ ಹರಿಶ್ಚಂದ್ರರಂತಹ ಸತ್ಯಸಂಧ ಮಹಾರಾಜರು ಹಿಂದೆ, ಉಳಿದ ಯಾವ ದೇಶದಲ್ಲಿಯೂ ಆಗಲಿಲ್ಲ ಮತ್ತು ಆಗುವ ಸಂಭವವಿಲ್ಲ. ಇವರು ಪೌರಾಣಿಕ ಕಾಲದ ಸತ್ಯಸಂಧತ್ವದ ನಿದರ್ಶಕರಾಗಿರುವರು. ಅರ್ವಾಚೀನ ಇತಿಹಾಸಕಾಲದಲ್ಲಿಯೂ ಭಾರತೀಯರಲ್ಲಿ ಸತ್ಯಸಂಧತೆಯು ಸಾಮಾನ್ಯ ಜನರಲ್ಲಿ ಕೂಡ ಹಬ್ಬಿತ್ತೆಂಬ ಬಗ್ಗೆ ಚೀನ-ಗ್ರೀಕ ದೇಶಗಳ ಪ್ರವಾಸಿಕರಾದ ಹ್ಯುಯನತ್ಸಾಂಗ್ ಮೆಗಾಸ್ಥಿನೀಸರು ಸಾಕ್ಷಿ ಕೊಡುತ್ತಾರೆ. ಪರಕೀಯ ರಾಜ್ಯವು ಇಲ್ಲಿ ನೆಲೆಗೊಂಡಂದಿನಿಂದ ಎಂದರೆ ಕಳೆದ ೪೦೦ ವರ್ಷಗಳಲ್ಲಿ ನಮ್ಮ ಸತ್ಯಪಕ್ಷಪಾತವು ದಿನದಿನಕ್ಕೆ ಕ್ಷೀಣವಾಗುತ್ತ ನಡೆದು ಈಗ ನಿಕೃಷ್ಟಾವಸ್ಥೆಯನ್ನು ಹೊಂದಿರುತ್ತದೆ.

ಪರಕೀಯ ರಾಜ್ಯಕ್ಕೊಳಗಾದ ಜನಾಂಗಗಳಲ್ಲಿ ಸತ್ಯತ್ವವು ಕುಗ್ಗುತ್ತದೆಂಬ ಮಾತು ಇತಿಹಾಸ ಪ್ರಸಿದ್ಧವಾದ ಸಿದ್ಧಾಂತವಾಗಿರುತ್ತದೆ. ಈಗ ಸತ್ಯಪಕ್ಷಪಾತವು ನಮ್ಮಲ್ಲಿ ಅವಶೇಷವಾಗಿ ಉಳಿದಿರುವುದೇ ಹೊರತು **ಉತ್ಕರ್ಷಾವಸ್ಥೆ** (ಮೇಲಾದ ಸ್ಥಿತಿ)ಯಲ್ಲಿರುವುದಿಲ್ಲ. ಟೆಂಕಿಗೊಬ್ಬನಂತೆ* ಬೇಕಾದಷ್ಟು ಸುಳ್ಳು ಹೇಳುವ ಸಾಕ್ಷಿಯವರು ದೊರೆಯುತ್ತಾರೆ. ಮೊದಲು ಒಂದು ಕೋರ್ಟು ಇದ್ದಲ್ಲಿ ಈಗ ನಾಲ್ಕಾರು ಕೋರ್ಟುಗಳಾಗಿ ನ್ಯಾಯಾಧೀಶರು ೧೧ರಿಂದ ೫ ಘಂಟೆಯ ವರೆಗೆ ಸುಳ್ಳು ಮಾತನ್ನು ಕೇಳಿ ಕೇಳಿ ದಣಿದು ಬೇಸತ್ತು ಮನೆಗೆ ಹೋಗಿ ಊಟ ಮಾಡಿ ಮಲಗಿದಾಗ ತಾವು ಕೇಳಿದ ಸುಳ್ಳನ್ನೇ **ಕನಕರಿ**ಸುತ್ತಾರೆ!! ಸಾರಾಂಶವೇನೆಂದರೆ ಸಟೆಯೇ ಜನರ ಅವನತಿಗೂ ನನ್ನಿಯೇ ಜನರ ಉನ್ನತಿಗೂ ಮುಖ್ಯಕಾರಣಗಳು. ಸೂರ್ಯಪ್ರಕಾಶ ಬಿದ್ದ ಚಂದ್ರನ ಭಾಗವೇ ನಮಗೆ ಚಂದ್ರನಾಗಿ ಕಾಣುವಂತೆ ಕಾರ್ಯಸ್ವರೂಪವಾದ ಸತ್ಯವೇ ಪ್ರಾಮಾಣಿಕತನವೆನಿಸುತ್ತದೆ. ಸತ್ಯವೂ ಪ್ರಾಮಾಣಿಕತೆಯೂ ಲೋಪ ಹೊಂದಿದ ಪ್ರದೇಶಗಳ ಜನರು

---

* **ಟೆಂಕಿ = ನಾಲ್ಕಾಣೆ.**

ದೀನಾವಸ್ಥೆಯನ್ನು ಹೊಂದುತ್ತಾರೆನ್ನಲಿಕ್ಕೆ ಏನೂ ಸಂಶಯವಿಲ್ಲ. ಆದ್ದರಿಂದ ಸತ್ಯಪಕ್ಷಪಾತವನ್ನು ಪ್ರತಿಯೊಬ್ಬ ಮನುಷ್ಯನೂ ತನ್ನ ಜೀವಕ್ಕಿಂತ ಹೆಚ್ಚೆಂದು ಎಣಿಸಿ, ಭಗೀರಥ ಪ್ರಯತ್ನ ಮಾಡಿ ಕಾಪಾಡಿಕೊಳ್ಳುವುದೇ ಮನುಷ್ಯನ ಮುಖ್ಯ ಧರ್ಮವು.*

೫. **ಸ್ವಾಭಿಮಾನ.** ಸತ್ಯಪಕ್ಷಪಾತವು ಎಲ್ಲ ಸದ್ಗುಣಗಳ ಅಸ್ತಿವಾರವಾಗಿರುವಂತೆ ಸ್ವಾಭಿಮಾನವು ಆ ಗುಣಗಳ ಸುತ್ತಲಿನಗೋಡೆಯಾಗಿರುತ್ತದೆ. ಸತ್ಯವು ನಮಗೆ ಹುಕುಮು ಕೊಡುವ ಯಜಮಾನನೆಂದು ಭಾವಿಸಿದರೆ, ಸ್ವಾಭಿಮಾನವು ನಮ್ಮನ್ನು ತತ್ಪರತೆಯಿಂದ ಸೇವಿಸುವ ಆಳುಮಗನೆಂದು ತಿಳಿಯಬಹುದು. ಸ್ವಾಭಿಮಾನವು ನಮ್ಮ ಶತ್ರುಗಳಾದ ಕ್ರೋಧ ಲೋಭ ಮದ ಮತ್ಸರ ಅಹಂಕಾರಗಳಿಂದ ನಮ್ಮನ್ನು ಸಂರಕ್ಷಿಸುವುದು. ಆದ್ದರಿಂದ ಅದನ್ನು ಬಲು ಎಚ್ಚರದಿಂದಲೂ ಜೋಕೆಯಿಂದಲೂ ಪೋಷಿಸಿ ಜೋಪಾನ ಮಾಡುವುದು ನಮ್ಮ ಕರ್ತವ್ಯವಾಗಿರುತ್ತದೆ.

ತಮ್ಮ ನಿಜವಾದ ಯೋಗ್ಯತೆಗೆ ಸರಿಯಾದದ್ದನ್ನೇ ಮಾಡತಕ್ಕದ್ದೆಂಬ ಸಬಲೇಚ್ಛೆಗೆ (ಕಾರ್ಯಕಾರಿಯಾದ ಇಚ್ಛೆಗೆ) ಸ್ವಾಭಿಮಾನವೆನ್ನುತ್ತಾರೆ. ಸಮಾಜದೊಳಗಿನ ವಿಚಾರವುಳ್ಳ ಸದ್ಗೃಹಸ್ಥರು ತಿಳಿಯುವ ಯೋಗ್ಯತೆಯೇ ಪ್ರತಿಯೊಬ್ಬ ಮನುಷ್ಯನ ನಿಜವಾದ ಯೋಗ್ಯತೆಯು. ಅದಕ್ಕಿಂತ ತನ್ನ ಯೋಗ್ಯತೆಯು ಹೆಚ್ಚಿನದೆಂದು ತಿಳಿಯುವುದೇ ದುರಭಿಮಾನ. ಈ ದುರಭಿಮಾನವು ಸರ್ವಥಾ ತ್ಯಾಜ್ಯವಾದುದು. ನಿಜವಾದ ಸ್ವಾಭಿಮಾನವು ಸರ್ವಥಾ ಗ್ರಾಹ್ಯವಾದುದು.

ಮನುಷ್ಯತ್ವಕ್ಕೆ ಅತ್ಯವಶ್ಯವಾದ ಈ ಅಯ್ದು ಸದ್ಗುಣಗಳನ್ನು ನಮ್ಮ ಚರಿತ್ರನಾಯಕನಾದ ಮಹೇಶನು ವಿಶ್ವಪ್ರಯತ್ನಮಾಡಿ ಕಾಯ್ದುಕೊಂಡು, ಕುಲಶೀಲಜಾತಿಭಾಷಾಸಾಂಪ್ರದಾಯಗಳಿಂದ ತೀರ ಭಿನ್ನನಾದ ಅಕ್ಬರ

---

* ಸತ್ಯದಿಂದಲೆ ಜಗದ ಸಂಸ್ಥಿತಿ ।
ಸತ್ಯದಿಂದಲೆ ಜೀವಸಂಸ್ಥಿತಿ ।
ಸತ್ಯದಿಂದಲೆ ಧರ್ಮ ಸಂಸ್ಥಿತಿ ಮೋಕ್ಷಸಂಸ್ಥಾನ ॥ ಮಹಾಭಾರತ.

ಬಾದಶಹನ ಸೇವೆಯಲ್ಲಿ ಅವನ ಒಲುಮೆಯನ್ನು ಸಂಪಾದಿಸಿದ್ದುದರಿಂದ ಅವನು ಎಲ್ಲ ಭಾರತೀಯರ ಅಂತಃಕರಣಪೂರ್ವಕವಾದ ಸ್ತುತಿಗೆ ಪಾತ್ರನಾಗಿರುತ್ತಾನೆಂದು ಬರೆಯಲಿಕ್ಕೆ ಸಂತೋಷವಾಗುತ್ತದೆ. ಈ ಸೇವಾವೃತ್ತಿಯಲ್ಲಿ ಅವನಿಗೆ ಎಷ್ಟೋ ಕಷ್ಟನಷ್ಟಗಳು ಸಂಭವಿಸಿದವು, ಎಷ್ಟೋ ಸಲ ಅವಮಾನವಾಯಿತು. ಬಾದಶಹನು ಮುಂಗೋಪಿಯಾಗಿದ್ದುದರಿಂದ ಬಾರಿ ಬಾರಿಗೆ ಮುನಿಯುತ್ತಿದ್ದನು; ಬಾದಶಹನು ಅವನನ್ನು ಓಲಗದಿಂದ ಹೊರಗೆ ಕಳುಹಿಸಿದನು; ದಂಡಿಸಿದನು; ಕೆಲಸದಿಂದ ದೂರು ಮಾಡಿದನು (ತೆಗೆದು ಹಾಕಿದನು); ತನ್ನ ರಾಜ್ಯದ ಗಡಿಯನ್ನು ದಾಟಿಸಿದನು; ಮತ್ತು ಅವನ ಹಗೆಗಳಾದ ಮುಸಲ್ಮಾನರ ಮಾತು ಕೇಳಿ ಅವನನ್ನು ಪೀಡಿಸಿದನು. ಈ ಎಲ್ಲ ಹಿಂಸಾನಷ್ಟಗಳನ್ನು ಮಹೇಶನು ಶಾಂತ ಚಿತ್ತದಿಂದ ತಾಳಿಕೊಂಡನೇ ಹೊರತು ತನ್ನ ಸದ್ಗುಣಗಳನ್ನು ಬಿಡಲಿಲ್ಲ. ನಮ್ಮ ಪೂರ್ವಜರಾದ ಮಹರ್ಷಿಗಳ ಮತ್ತು ಪೌರಾಣಿಕ ಮಹಾತ್ಮರ ತರುವಾಯ ಎಷ್ಟು ಕಷ್ಟನಷ್ಟ ದುಃಖಗಳಿಗೆ ಗುರಿಯಾದರೂ ಅವುಗಳನ್ನು ನೈತಿಕ ಧೈರ್ಯದಿಂದಲೂ ಸತ್ಯಪಕ್ಷಪಾತದಿಂದಲೂ ಸಹಿಸಿಕೊಂಡು ತನ್ನ ಮನುಷ್ಯತ್ವವನ್ನು ಕಾಪಾಡಿಕೊಂಡವನು ನಮ್ಮ ಚರಿತ್ರನಾಯಕನೊಬ್ಬನೇ ಎಂದರೆ, ಅತಿಶಯೋಕ್ತಿಯಾಗಲಾರದು. ಅವನ ಸದ್ಗುಣಗಳು ನಮಗೆ ಪರಂಪರಾಗತವಾಗಿ ಬೆಲೆಯುಳ್ಳ ಆಸ್ತಿಗಳಾಗಿರುತ್ತವೆ.

ಎರಡೂ ಕೈ ಕೂಡದೆ ಚಪ್ಪಾಳಿಯಾಗುವುದಿಲ್ಲೆಂಬ ನಾಣ್ನುಡಿಯನ್ನು ಎಲ್ಲರೂ ಕೇಳಿರುವರು. ವಿಭೂತಿಯುಳ್ಳ ಎಲ್ಲ ಸತ್ವಗಳಲ್ಲಿಯೂ ಪರಮೇಶ್ವರನ ತೇಜೋಂಶವಿರುತ್ತದೆಂದು ಭಗವಂತನು ಹೇಳಿರುತ್ತಾನೆ.* ಅಕ್ಬರ ಬೀರಬಲ್ಲರು ವಿಭೂತಿಯುಳ್ಳ ಸತ್ವಗಳೇ ಸರಿ. ಈ ವಿಭೂತಿಯುಳ್ಳ ಸತ್ವಗಳು ಹೆಚ್ಚುಕಡಮೆ ಪ್ರಮಾಣದಿಂದ ಪ್ರತಿಯೊಂದು ಶತಮಾನದಲ್ಲಿಯೂ ಇರುತ್ತವೆ. ಪರಿಸ್ಥಿತಿಯು ಅನುಕೂಲವಾಗಿದ್ದಾಗ ಅವು ಪ್ರಜ್ವಲಿಸುತ್ತವೆ;

---

* ಯದ್ಯದ್ವಿಭೂತಿಮತ್ಸತ್ವಂ ಶ್ರೀಮದೂರ್ಜಿತಮೇವ ವಾ |
ತತ್ತದೇವಾವಗಚ್ಛ ತ್ವಮ್ ಮಮತೇಜೋಂಶಸಂಭವಮ್ || ಶ್ರೀಮದ್ಭಗವದ್ಗೀತಾ.

ಪರಿಸ್ಥಿತಿಯು ಪ್ರತಿಕೂಲವಿದ್ದಾಗ ಅಂತಹ ಸತ್ವಗಳು ಬೂದಿ ಮುಚ್ಚಿದ ಕೆಂಡದಂತೆ ಬೆಳಕಿಗೆ ಬರುವುದಿಲ್ಲ. ಈ ಕಾಲದಲ್ಲಿಯೂ ಗೌತಮ ಬುದ್ಧ ಶಂಕರಾಚಾರ್ಯ ವಿದ್ಯಾರಣ್ಯ ಅಕ್ಬರ ಬೀರಬಲ ಸಿವಾಜಿಯಂತಹ ಮಹಾ ಪುರುಷರು ಕೆಲವರು ಈ ಭರತವರ್ಷವನ್ನು ಅಲಂಕರಿಸುತ್ತಿರಬಹುದು. ಆದರೆ ಪರಿಸ್ಥಿತಿಯು ಪ್ರತಿಕೂಲವಾಗಿದ್ದುದರಿಂದ ಅವರು ಹೆಸರುವಾಸಿ ಯಾಗಲಿಕ್ಕೆ ಮಾರ್ಗವಾಗಲಿಲ್ಲ; ಅಥವಾ ಪ್ರತಿಕೂಲ ಪರಿಸ್ಥಿತಿಯ ಆಘಾತ ದಿಂದ ಎಲ್ಲೆಲ್ಲಿಯೂ ಕೊರಗುತ್ತ ಮರಗುತ್ತ ಕಾಲ ಕಳೆಯುತ್ತಿರಬಹುದು. ಅದೇಕೆ! ಮಹಾತ್ಮಾಗಾಂಧಿ, ಬಾಳಗಂಗಾಧರ ತಿಲಕ ಮುಂತಾದ ಮಹ ನೀಯರು ಗುಜಾರಾತ-ಮಹಾರಾಷ್ಟದಲ್ಲಿ ಹುಟ್ಟದೆ ಕನ್ನಡಿಗರಾಗಿ ಕರ್ನಾಟಕ ದಲ್ಲಿ ಹುಟ್ಟಿದ್ದರೆ, ದ್ವೇಷಾಸೂಯಾಸ್ವಾರ್ಥಪರರಾದ ನಮ್ಮ ಕನ್ನಡ ಬಂಧು ಗಳು ಅವರನ್ನು ಸ್ಮಶಾನ ಘಟಿಕೆಯಂತೆ ತ್ಯಾಜ್ಯರೆಂದು ಎಣಿಸುತ್ತಿರಬಹುದು. ಇಂತಹ ಕರ್ನಾಟಕದ ಪರಿಸ್ಥಿತಿಯಲ್ಲಿ ಮಹಾತ್ಮಾ ಗಾಂಧಿಯಂತಹರು ಪ್ರಬಲ ರಾಗುವ ಬಗೆ ಹೇಗೆ? ಸಾಹಾಯಕರು ಸಿಕ್ಕುವ ಸಂಭವವೆಲ್ಲಿ? ಅವರು ಮಾಡಲಿಚ್ಛಿಸುವ ಸಾರ್ವಜನಿಕವಾದ ಕೆಲಸಗಳಿಗೆ ಬೇಕಾದ ಹಣ ದೊರೆ ಯುವ ಪರಿ ಯಾವುದು?

ಕರ್ಮಧರ್ಮಸಂಯೋಗದಿಂದ ನಮ್ಮ ಮಹೇಶನಿಗೆ ಕೆಲಮಟ್ಟಿಗೆ ಅನುಕೂಲವಾದ ಪರಿಸ್ಥಿತಿಯು ದೊರೆತಿತ್ತು. ೧. ಆ ಕಾಲದ ಭಾರತೀಯರು ದೇಶಾಭಿಮಾನದಿಂದ ಮುಸಲ್ಮಾನರನ್ನು ದ್ವೇಷಿಸುತ್ತಿದ್ದರು. ೨. ಭಾರತೀ ಯರಲ್ಲಿ, ವಿಶೇಷವಾಗಿ ಅವರ ಮುಖ್ಯಸ್ಥರಾದ ಬ್ರಾಹ್ಮಣರಲ್ಲಿ, ಒಕ್ಕಟ್ಟಿತ್ತು. ೩. ಅಕ್ಬರನು ನಿರಕ್ಷರಕುಕ್ಷಿಯಾದರೂ ಬೇರೆಯವರಿಂದ ಗ್ರಂಥಗಳನ್ನು ಓದಿಸಿಕೊಂಡು ಪಂಡಿತರ ವಾದವಿವಾದಗಳನ್ನು ಮನಸ್ಸಿಗೊಟ್ಟು ಕೇಳಿ, ವಿದ್ವಾಂಸರನ್ನು ತನ್ನ ಆಶ್ರಯದಲ್ಲಿಟ್ಟುಕೊಂಡು ವಿದ್ಯಾರ್ಜನೆಯನ್ನು ಮಾ ಡುತ್ತಿದ್ದನು. ೪. ಅವನು ಗುಣಗ್ರಾಹಿಯಾಗಿದ್ದನು. ೫. ಅವನು ಮುಂ ಗೋಪಿಯಾದರೂ ದೀರ್ಘಕೋಪಿಯಾಗಿರಲಿಲ್ಲ. ಆದ್ದರಿಂದ ತನ್ನ ತಪ್ಪು ತಿಳಿದ ಕೂಡಲೆ ತಾನು ತನ್ನ ಸಿಟ್ಟಿನಲ್ಲಿ ನೋಯಿಸಿದವರನ್ನು ಕರೆಯಿಸಿ ಅವರನ್ನು ಸಮಾಧಾನ ಮಾಡಿ ಪ್ರೀತಿಸುತ್ತಿದ್ದನು. ಅಕ್ಬರ-ಮಹೇಶರ

ಮನಸ್ಸು ಕೂಡಿದ್ದುದರಿಂದ ಅವರ ಜಗಳಗಳು ಪ್ರಣಯಕಲಹದಂತೆ ಕ್ಷಣಿಕವಾಗಿ ಪರಿಣಮಿಸುತ್ತಿದ್ದುವು. ಬಾದಶಹನು ಮಹೇಶನ ಬುದ್ಧಿಚಾತುರ್ಯಕ್ಕೂ ವಿನೋದಕ್ಕೂ ಪ್ರಸಂಗಾವಧಾನಕ್ಕೂ ವಾಕ್ಪಾಂಡಿತ್ಯಕ್ಕೂ ಮೆಚ್ಚಿ ಮರುಳಾಗಿ ಮನಸೋತಿದ್ದನು. ಮಹೇಶನು ಕೆಲದಿನ ಇಲ್ಲದೆ ಹೋದ ಕೂಡಲೆ ಅವನ ಮನಸ್ಸು ಅಸ್ವಸ್ಥವಾಗುತ್ತಿತ್ತು, ಅವನಿಗೆ ಹೊತ್ತೇ ಹೋಗುತ್ತಿದ್ದಿಲ್ಲ. ಆದ್ದರಿಂದ ಅವನು ವಿಶ್ವಪ್ರಯತ್ನಮಾಡಿ ಅವನನ್ನು ಹುಡುಕಿಸಿ ಕರೆಯಿಸಿ ರಂಬಿಸಿ (ಒಡಂಬಡಿಸಿ) ಅವನನ್ನು ಮತ್ತೆ ತನ್ನ ಆಶ್ರಯದಲ್ಲಿಟ್ಟುಕೊಳ್ಳುತ್ತಿದ್ದನು.

ಮೇಲಿನ ವಿವರಣೆಯ ಸಮರ್ಥನಾರ್ಥವಾಗಿ ಕೆಲವು ಕಥೆಗಳನ್ನು ಕೊಟ್ಟು ಈ ಅಧ್ಯಾಯವನ್ನು ಮುಗಿಸುವೆವು. ಈ ಕಥೆಗಳನ್ನು ೪ ಪ್ರಕರಣಗಳಲ್ಲಿ ವಿಭಾಗಿಸಿ ೧ನೆಯ ಪ್ರಕರಣದಲ್ಲಿ ಬುದ್ಧಿಚಾತುರ್ಯದ ಕಥೆಗಳನ್ನೂ, ೨ನೆಯ ಪ್ರಕರಣದಲ್ಲಿ ವಿನೋದದ ಕಥೆಗಳನ್ನೂ, ೩ನೆಯ ಪ್ರಕರಣದಲ್ಲಿ ಪ್ರಸಂಗಾವಧಾನದ ಕಥೆಗಳನ್ನೂ, ೪ನೆಯ ಪ್ರಕರಣದಲ್ಲಿ ವಾಕ್ಪಾಂಡಿತ್ಯದ ಕಥೆಗಳನ್ನೂ ಕೊಡುವೆವು.

## ೧ನೆಯ ಪ್ರಕರಣ

### ಬುದ್ಧಿಚಾತುರ್ಯ

### ೧. ನೂರರಲ್ಲಿ ಒಂದು ಭಾಗ ಮಾತ್ರ

ಒಂದು ದಿವಸ ಬಾದಶಹ ಬೀರಬಲ್ಲರು ಏಕಾಂತದಲ್ಲಿ ಮಾತಾಡುತ್ತ ಕುಳಿತಿರುವಾಗ ಈ ರೀತಿ ಪ್ರಸಂಗವು ನಡೆಯಿತು :—

ಬಾದಶಹನು—ಬೀರಬಲ್ಲ, ನೀನು ಎಷ್ಟೋ ಸಾರಿ ನಿನ್ನ ಹೆಂಡತಿಯ ಕಯ್ಯನ್ನು ನೋಡಿರುತ್ತಿ ಮತ್ತು ಮುಟ್ಟಿರುತ್ತಿ, ಅಲ್ಲವೇ?

ಬೀರಬಲ್ಲ—ಸರಕಾರ್, ಅಹುದು, ಎಷ್ಟೋ ಸಾರಿ ನಾನು ಅವಳ ಕಯ್ಯನ್ನು ನೋಡಿರುತ್ತೇನೆ ಮತ್ತು ಮುಟ್ಟಿರುತ್ತೇನೆ.

ಬಾದ.—ಹಾಗಾದರೆ ನೀನು ಅವಳ ಕಯ್ಯಲ್ಲಿ ಎಷ್ಟು ಗಾಜಿನ ಬಳೆಗಳಿರುತ್ತವೆಂಬುದನ್ನು ಹೇಳುವಿಯಾ ?

ಬೀರ.—ಖುದಾವಂದ್ ! ಅದಾವ ದೊಡ್ಡ ಮಾತು ? ಹೇಳುವೆನು.

ಬಾದ.—ತಪ್ಪದೆ ಸರಿಯಾದ ಸಂಖ್ಯೆಯನ್ನು ಹೇಳುವಿಯಾ ?

ಬೀರ.—ಮಹಾರಾಜ ! ಹೇಳುವೆನು.

ಬಾದ.—ನೋಡು, ವಿಚಾರ ಮಾಡು; ನೀನು ಹೇಳಿದ ಸಂಖ್ಯೆಯು ತಪ್ಪಾದರೆ, ಒಂದೊಂದಕ್ಕೆ ೧೦೦೦ ಮೊಹರು ದಂಡ ಕೊಡಬೇಕಾದೀತು.

ಬೀರ.—ತಪ್ಪಾದರೆ ತಾವು ಕಟ್ಟಿದಷ್ಟು ದಂಡ ಕೊಡುವೆನು.

ಬಾದ.—ಹಾಗಾದರೆ ಎಷ್ಟು ಬಳೆಗಳಿರುತ್ತವೆ ಹೇಳು.

ಬೀರ.—ಸರಕಾರ್ ! ತಮ್ಮ ದೃಷ್ಟಿಯು, ತಮ್ಮ ಗಡ್ಡದ ಮೇಲೆ ಯಾವಾಗಲೂ ಇರುತ್ತದಷ್ಟೇ. ಇದಲ್ಲದೆ ತಾವು ಅದನ್ನು ಗಳಿಗ್ಗೊಮ್ಮೆ ಕಯ್ಯಿಂದ ಹಿಡಿಯುತ್ತೀರಿ. ಆದ್ದರಿಂದ ತಮ್ಮ ಗಡ್ಡದ ಕೂದಲುಗಳ ಸಂಖ್ಯೆಯು ತಮಗೆ ಸರಿಯಾಗಿ ಗೊತ್ತಿರಬೇಕು. ತಮ್ಮ ಗಡ್ಡದ ೧೦೦೦ ಕೂದಲುಗಳಿಗೆ ಒಂದರಂತೆ ನನ್ನ ಹೆಂಡತಿಯ ಕಯ್ಯಲ್ಲಿ ಬಳೆಗಳಿರುತ್ತವೆ. ತಾವು ಬೇಕಾದರೆ ಎಣಿಸಿ ನೋಡಬಹುದು.

ಬಾದ.—(ಅಟ್ಟಹಾಸದಿಂದ ನಕ್ಕು) ಶಹಾಬಾಸ್, ಬೀರಬಲ್ಲ, ನಿನ್ನ ಬುದ್ಧಿಗೆ ಎಣೆಯಿಲ್ಲ. ನಾನು ನಿರುತ್ತರನಾದೆನು. ಇಗೊ ! ಈ ವಜ್ರದ ಉಂಗುರವನ್ನು ಉಚಿತವಾಗಿ ತೆಗೆದುಕೊ.

---

## ೨. ಕುಲೀನ ಪತಿದ್ರೋಹಿಯೂ ಕುಲಹೀನಳಾದ ಗುಣವತಿಯೂ ವ್ಯಾಪಾರದ ಗುಟ್ಟುಬಲ್ಲವನೂ ವಿಶ್ವಾಸ ಘಾತಕಿಯೂ ಕಣ್ಣಿದ್ದ ಕುರುಡನೂ

ಅಕ್ಬರ ಬಾದಶಹನ ದರಬಾರಿನ ಜನರ ಬುದ್ಧಿಯನ್ನು ಪರಿಕಿಸುವುದಕ್ಕೋಸರ ಒಮ್ಮೆ ಮಲೆಯಾಳ ದೇಶದ ಅರಸನು ಒಂದು ಥೈಲಿಯನ್ನು*

---

* ಅರಸರು ತಮ್ಮ ಸರಿಕರಿಗೆ ಕಳುಹಿಸುವ ಕಾಗದಗಳನ್ನು ಒಂದು ಚೀಲದಲ್ಲಿ ಹಾಕಿ ಮೊಹರು ಮಾಡುತ್ತಾರೆ. ಆದ್ದರಿಂದ ಥೈಲಿ ಎಂದರೆ ಹೀಗೆ ಕಳುಹಿದ ಕಾಗದವು.

ಬರಿಸಿ ಒಬ್ಬ ನಿಯೋಗಿ (ರಾಯಭಾರಿ)ಯನ್ನು ಅದರೊಡನೆ ಅಕ್ಬರ ಬಾದ ಶಹನ ಬಳಿಗೆ ಕಳುಹಿಸಿದನು. ಆ ಥೈಲಿಯಲ್ಲಿ ಮೇಲೆ ಬರೆದ ೬ ತರದ ಜನ ರನ್ನು ದಯವಿಟ್ಟು ಕಳುಹಿದರೆ ಬಹಳ ಉಪಕಾರವಾಗುವುದೆಂದು ಬರೆ ದಿತ್ತು. ಆ ಕಾಗದವನ್ನು ನೋಡಿದ ಕೂಡಲೆ ಬಾದಶಹನು ಆಶ್ಚರ್ಯಚಕಿತ ನಾಗಿ ತನ್ನ ಸರದಾರರನ್ನೆಲ್ಲ ಕೇಳಲು, ಅವರು ಇಂತಹ ಜನರೆಲ್ಲರೂ ದೊರೆಯುವುದು ಅಸಂಭವವೆಂದು ಏಕಕಂಠವಾಗಿ ಹೇಳಿದರು. ಮುಂದೆ ಕೆಲ ಹೊತ್ತಿನ ಮೇಲೆ ಬೀರಬಲ್ಲನು ದರಬಾರಿಗೆ ಬಂದಾಗ ಬಾದಶಹನು ಅವನನ್ನು ವಿಚಾರಿಸಲು ಕೆಳಗೆ ಬರೆದಿರುವ ಸಂವಾದವು ನಡೆಯಿತು.

ಬೀರ.—ಖುದಾವಂದ್, ಈ ಎಲ್ಲ ಜನರನ್ನೂ ನಾನು ಹುಡುಕಿ ತರುವೆನು.

ಬಾದ.—ಎಂದು ತರುವಿ? ಉಳಿದ ಸರದಾರರು ಈ ಜನರು ದೊರೆಯುವುದು ಅಸಾಧ್ಯವೆಂದು ಅಭಿಪ್ರಾಯಪಡುತ್ತಾರೆ.

ಬೀರ.—ಈ ಪ್ರಪಂಚದಲ್ಲಿ ಯಾವುದೂ ಅಸಾಧ್ಯವಲ್ಲೆಂದು ನನ್ನ ಬುದ್ಧಿಗೆ ತೋರುತ್ತದೆ. ಮೆಯ್ಗಳ್ಳರೂ ಹೆಡ್ಡರೂ ಮಾತ್ರ ಆ ಶಬ್ದವನ್ನು ಉಪಯೋಗಿಸಿ ತಮ್ಮ ದಡ್ಡತನವನ್ನೂ ಸೋಮಾರಿತನವನ್ನೂ ಬಯಲಿಗೆ ತರುತ್ತಾರೆ.

ಬಾದ.—ಹಾಗಾದರೆ, ಇವರನ್ನು ಮಲೆಯಾಳಕ್ಕೆ ಎಂದು ಕಳುಹ ಬಹುದು.

ಬೀರ.—ಮಹಾಸ್ವಾಮಿ! ಇವರು ತಮ್ಮ ಪುಣ್ಯಮಯವಾದ ರಾಜ್ಯ ದಲ್ಲಿ ದೊರೆಯಲಿಕ್ಕಿಲ್ಲ.

ಬಾದ.—ಅವರು ಎಲ್ಲಿ ದೊರೆತಾರು?

ಬೀರ.—ಮಲೆಯಾಳ ದೇಶದಲ್ಲೇ ದೊರೆಯಬಹುದು.

ಬಾದ.—ಹಾಗಿದ್ದರೆ ನೀನು ಖರ್ಚಿಗೆ ಬೇಕಾದಷ್ಟು ಹಣ ತೆಗೆದು ಕೊಂಡು ಮಲೆಯಾಳಕ್ಕೆ ಹೋಗಿ, ಆ ಜನರನ್ನು ದೊರಕಿಸಿ, ಅಲ್ಲಿಯ ಅರಸನಿಗೆ ಅವರನ್ನು ಒಪ್ಪಿಸಿ, ತಲಪಿದ ಬಗ್ಗೆ ಅವನಿಂದ ಉತ್ತರ ತೆಗೆದು ಕೊಂಡು ಬಾ.

ಬೀರ.—ಮಲೆಯಾಳದ ನಿಯೋಗಿಯನ್ನು ಕಳುಹಿಸಿ ಕೊಡಿರಿ. ನಾನು ಪ್ರಯಾಣದ ಸಿದ್ಧತೆಯನ್ನು ಮಾಡಿಕೊಂಡು ೧೫।೨೦ ದಿವಸಗಳ ಮೇಲೆ ಹೊರಡುವೆನು.

ಬಾದ.—ಹಾಗೇ ಆಗಲಿ. ಆತನು ಬೇಡಿದ ಜನರನ್ನು ಸ್ವಲ್ಪ ದಿವಸಗಳಲ್ಲಿ ಕಳುಹಿಸುವೆನೆಂದು ಪತ್ರವನ್ನು ಬರೆಯಿಸಿ ಕೊಟ್ಟು, ಆ ನಿಯೋಗಿಯನ್ನು ನಾಳೆ ಅಪ್ಪಣೆಕೊಟ್ಟು ಕಳುಹಿಸುವೆನು. ನೀನು ಪ್ರಯಾಣಕ್ಕೆ ಸಿದ್ಧ ಮಾಡಿಕೊಂಡು ಬೇಗನೆ ಹೊರಡು.

ಮುಂದೆ ಕೆಲವು ದಿವಸಗಳಾದ ಬಳಿಕ ಬೀರಬಲ್ಲನು ತನ್ನ ಪಯಣಕ್ಕೆ ಬೇಕಾದ ಎಲ್ಲ ಸಾಮುಗ್ರಿಯನ್ನು ಅಣಿಮಾಡಿಕೊಂಡು ನಂಬಿಕಸ್ತರಾದ ಇಬ್ಬರು ಆಳುಗಳನ್ನು ಸಂಗಡ ಕರೆದುಕೊಂಡು ಮಲೆಯಾಳದ ರಾಜಧಾನಿಯಾದ ತಿರುವಾಂಕೋಡಿಗೆ (ತ್ರಾವಣಕೋರ) ಹೋಗಿ ತಲಪಿದನು. ಕೆಲವು ದಿನ ಧರ್ಮಸಾಲೆಯಲ್ಲಿಳಿದುಕೊಂಡು ಒಂದು ದೊಡ್ಡ ಮಹಲನ್ನು ಕೊಂಡು ಅಲ್ಲಿ ಇರಲಾರಂಭಿಸಿದನು. ಇವನಿರುವ ಠೀವಿಯನ್ನೂ ಇವನ ಉದಾರತೆಯನ್ನೂ ಆದರಾತಿಥ್ಯವನ್ನೂ ಊಟೋಪಚಾರಗಳನ್ನೂ ಆಳುಗಾಡಿಕುದುರೆಗಳನ್ನೂ ಹಾಡು-ನಾಚು-ತಮಾಷೆಗಳ ಅಭಿರುಚಿಯನ್ನೂ ಕಂಡು, ದೊಡ್ಡ ದೊಡ್ಡ ಸರದಾರರೂ ಸಾಹುಕಾರರೂ ವ್ಯಾಪಾರಿಗಳೂ ರಾಜಸೇವಕರೂ, ದೀವಿಗೆ ಹುಳುಗಳು ದೀಪದಲ್ಲಿ ಬೀಳುವಂತೆ, ಇವನ ಸ್ನೇಹಪಾಶದಲ್ಲಿ ಸಿಕ್ಕುಬಿದ್ದರು. ಅವರೊಬ್ಬರಿಗೂ ಇವನು ತನ್ನ ಗುಟ್ಟನ್ನು ತಿಳಿಸದೆ, ತಾನು ಕಾಶ್ಮೀರದೇಶದ ಅರಸನ ಮಂತ್ರಿಯೆಂತಲೂ ತನ್ನ ಕುಟುಂಬದ ವಿಯೋಗದ ಮೂಲಕ ಉಂಟಾದ ದುಃಖಶಮನಾರ್ಥವಾಗಿ ತಾನು ಅಲ್ಲಿ ಬಂದು ನಿಂತಿರುತ್ತೇನೆಂತಲೂ ಹೇಳುತ್ತಿದ್ದನು.

ಬೀರಬಲ್ಲನಿಗೂ ಮಲೆಯಾಳದ ಮುಖ್ಯ ಪೋಲಿಸ್ ಅಧಿಕಾರಿಗೂ ಗೆಳೆತನ ಕೂಡಿತು. ಆ ಅಧಿಕಾರಿಯು ಪ್ರಯತ್ನಪಟ್ಟು ತನ್ನ ಹತ್ತಿಹೊಂದಿಕೆಯ (ಆಪ್ತತ್ವದ) ಒಬ್ಬ ಚೆಲುವೆಯಾದ ಹುಡುಗಿಯನ್ನು ಗೊತ್ತುಮಾಡಿ ಬೀರಬಲ್ಲನಿಗೆ ಮದುವೆ ಮಾಡಿ ಕೊಟ್ಟನು. ಅವಳೊಡನೆ ಸಂಸಾರ ಮಾಡುತ್ತ ಕೆಲವು ದಿನ ಹೋದ ಬಳಿಕ ಬೀರಬಲ್ಲನು ಒಂದು ದಿನ ಬೆಳಿಗೆ

ದಯಾರಾಮನೆಂಬ ಒಬ್ಬ ಸಾಹುಕಾರನ ಮನೆಗೆ ಹೋಗಿ "ಅಯ್ಯಾ, ನಮ್ಮ ಕಾಶ್ಮೀರದ ಅರಸನು ತನ್ನ ಮಗಳನ್ನು ತಮ್ಮ ರಾಜನ ಮಗನಿಗೆ ಕೊಡುವುದು ಗೊತ್ತಾಗಿದೆ; ಆದರೆ ತಮ್ಮ ಅರಸನು ವರದಕ್ಷಿಣೆಯ ಹಣವನ್ನು ಈಗಲೇ ಕೊಡಬೇಕೆಂದು ಹಟ ತೊಟ್ಟಿದ್ದಾನೆ. ಆದ್ದರಿಂದ ತಾವು ಹತ್ತು ಸಾವಿರ ರೂಪಾಯಿ ಕಡ ಕೊಟ್ಟರೆ ಬಹಳ ಉಪಕಾರವಾಗುವುದು. ನಾನು ಕಾಶ್ಮೀರಕ್ಕೆ ಹಣದ ಬಗ್ಗೆ ಕಾಗದ ಬರೆದಿದ್ದೇನೆ. ಹಣ ಬಂದ ಕೂಡಲೆ ತಮಗೆ ತಿರುಗಿ ಕೊಡುವೆನು" ಎಂದು ಹೇಳಿಕೊಳ್ಳಲು, ಆ ಸಾಹುಕಾರನು ವ್ಯಾಪಾರದ ರಹಸ್ಯವನ್ನರಿತವನಾದ್ದರಿಂದ ಕೂಡಲೆ ೧೦,೦೦೦ ರೂಪಾಯಿ ಕೊಟ್ಟು ಕಳುಹಿದನು. ಮರು ದಿವಸ ಬೆಳಿಗ್ಗೆ ಬೀರಬಲ್ಲನು ಅದೇ ಊರಲ್ಲಿದ್ದ ಮಥುರಾದಾಸನೆಂಬ ಮದಾಂಧನಾದ ಸಾಹುಕಾರನ ಬಳಿಗೆ ಹೋಗಿ ದಯಾರಾಮನನ್ನು ಕೇಳಿದಂತೆ ಕೇಳಲು, ಅವನು "ನೀವು ಹಣ ತಿರುಗಿ ಕೊಡುವಿರೆಂಬ ಬಗ್ಗೆ ಆಧಾರವೇನು ?" ಎಂಬುದೇ ಮುಂತಾದ ಎಡರುಗಳನ್ನು ತೋರಿಸಿ ಬಡ್ಡಿಯನ್ನು ಹೆಚ್ಚಿಸಿ, ಬಡ್ಡಿಯನ್ನು ಮುರಿದುಕೊಂಡು ೧೦,೦೦೦ ರೂಪಾಯಿಗೆ ಕಾಗದ ಬರಿಸಿಕೊಂಡು ೯,೫೦೦ ರೂಪಾಯಿ ಮಾತ್ರ ಕೊಟ್ಟನು. ಆ ಹಣವನ್ನು ಮನೆಯಲ್ಲಿಟು ಊಟ ಮಾಡಿ ವಿಶ್ರಮಿಸಿಕೊಂಡು, ಅದೇ ನಗರದಲ್ಲಿದ್ದ **ರೂಪವತಿ** ಎಂಬ ಪಾತರದವಳಿಗೆ (ವೇಶ್ಯೆಗೆ) ೧೦ ರೂಪಾಯಿ ಕಳುಹಿಸಿ, ತಾನು ರಾತ್ರಿ ಅಲ್ಲಿಗೆ ಬರುವೆನೆಂದು ಹೇಳಿ ಕಳುಹಿದನು. ಆಕೆಯು ಒಳ್ಳೆಯವಳಾದದ್ದರಿಂದ ಹಣ್ಣು ಹಂಪಲು ಫಲಾಹಾರಾದಿ ಜೀನಸುಗಳನ್ನು ಸಿದ್ಧ ಮಾಡಿಟ್ಟುಕೊಂಡು ರಾತ್ರಿ ೪।೫ ತಾಸಾಗುವ ವರೆಗೂ ಅವನ ದಾರಿ ನೋಡಿ, ಬಾರದ್ದರಿಂದ ನೆಲದ ಮೇಲೆ ಒರಗಿಕೊಂಡಳು. ನಡಿರುಳು ಹೊತ್ತಿಗೆ ಬೀರಬಲ್ಲನು ಹೋಗಿ ಬಾಗಿಲು ತಟ್ಟಲು, ಅವಳು ಎಚ್ಚತ್ತು ಬಾಗಿಲು ತೆಗೆಯಲಿಕ್ಕೆ ತಡವಾದ್ದರಿಂದ ಅವನು ಸಿಟ್ಟುಗೊಂಡು, ಆಕೆಯನ್ನು ಚಬಕದಿಂದ ಚೆನ್ನಾಗಿ ಹೊಡೆದು, ತನ್ನ ಮನೆಗೆ ಹಿಂದಿರುಗಿ ಬಂದನು. ಮರು ದಿವಸ ಬೀರಬಲ್ಲನು ಒಂದು ದೊಡ್ಡ ಕಲ್ಲಂಗಡಿಯ ಹಣ್ಣನ್ನು ಕೊಂಡು ಅದನ್ನು ಸೀಳಿ ಆ ಹೋಳುಗಳಿಗೆ ಕುಂಕುಮವನ್ನು ತೊಡೆದು, ಒಂದು

ಬಿಳಿಯ ಅರಿವೆಯಲ್ಲಿ ಅವನ್ನು ಸುತ್ತಿ, ತನ್ನ ಹೆಂಡತಿಯನ್ನು ಕರೆದು, "ಇಗೋ ನೋಡು, ಯಾರ ಮುಂದೆಯೂ ಹೇಳಬೇಡ, ಕಂಡೆಯಾ!! ಹೇಳಿದರೆ ನನ್ನ ಜೀವ ಉಳಿಯಲಿಕ್ಕಿಲ್ಲ. ಅರಸುಮಗನ ತಲೆಯನ್ನು ಕೊಯ್ದು ತಂದಿರುತ್ತೇನೆ. ಅದನ್ನು ಈ ಸಂದೂಕಿನಲ್ಲಿರಿಸಿ ಬೀಗ ಹಾಕುವೆನು. ಯಾರಿಗೂ ಏನೂ ಉಸುರು ಬಿಡಬೇಡ ಜೋಕೆ! ನಾನು ಹೋಗಿ ಈ ಸಂಗತಿಯು ಹೊರ ಬೀಳದಂತೆ ಬಂದೋಬಸ್ತು ಮಾಡುವೆನು" ಎಂದು ಹೇಳಿ ಹೋದನು.

ಬೀರಬಲ್ಲನು ಹೋದ ಸ್ವಲ್ಪ ಹೊತ್ತಿನ ಮೇಲೆ ಕರ್ಮಧರ್ಮಸಂಯೋಗದಿಂದ ಅಲ್ಲಿಯ ಪೋಲಿಸ್ ಮುಖ್ಯಾಧಿಕಾರಿಯು ಅವನ ಮನೆಗೆ ಬಂದು ಬೀರಬಲ್ಲನ ಹೆಂಡತಿಯೊಡನೆ ಮಾತಾಡ ತೊಡಗಿದನು. ಹೆಂಗಸರ ಬಾಯಲ್ಲಿ ಮಾತು ನಿಲ್ಲುವುದಿಲ್ಲೆಂಬುದು ಅನುಭವಸಿದ್ಧವಾದ ಮಾತೇ ಸರಿ. ಅದರೊಳಗಂತೂ ಬೀರಬಲ್ಲನ ಹೆಂಡತಿಯು ಚಿಕ್ಕವಳು; ಪೋಲಿಸ್ ಮುಖ್ಯಾಧಿಕಾರಿಯು ಆಕೆಯ ದೂರದ ಆಪ್ತನು; ಆದ್ದರಿಂದ ಮುಂದೆ ಹೇಳುವಂತೆ ಅವರೊಳಗೆ ಮಾತು ಕಥೆಗಳು ನಡೆದವು:—

ರಮಾಬಾಯಿ (ಬೀರಬಲ್ಲನ ಹೆಂಡತಿ)—ಅವರು ತಮ್ಮ ಮನೆಯ ಕಡೆಗೆ ಹೋಗಿರ ಬಹುದೆಂದು ತಿಳಿದಿದ್ದೆನು, ಏನೋ ಒಂದು ದೊಡ್ಡ ದುಗುಡಕ್ಕೆ ಈಡಾದಂತೆ ತೋರುತ್ತದೆ.

ಸೋಮಶೇಖರ (ಪೋಲಿಸ ಮುಖ್ಯಾಧಿಕಾರಿ)—ಅದೇನಮ್ಮಾ, ಅಷ್ಟು ದೊಡ್ಡ ಚಿಂತೆ ಬಂದುದು? ಆಹುದು, ನೆನಪಿಗೆ ಬಂತು. ಅದರ ವಿಷಯವಾಗಿ ನಾನು ಕೇಳಿದ್ದೇನೆ. ಅದಕ್ಕೇಕಿಷ್ಟು ಚಿಂತೆ! ನಾನಿದ್ದೇನಲ್ಲ!

ರಮಾಬಾಯಿ—ತಾವೇ ಈ ಕುತ್ತಿನಿಂದ (ಗಂಡಾಂತರದಿಂದ) ಅವರನ್ನು ಪಾರು ಮಾಡಬೇಕು. (ಎಂದು ಅವನ ಕಾಲಿಗೆ ಬೀಳುವಳು).

ಸೋಮಶೇಖರ—ನಿನಗೆ ಅದರ ವಿವರವೆಲ್ಲ ಗೊತ್ತಿದೆಯೇನು? ಎಲ್ಲ ಸಂಗತಿಯೂ ತಿಳಿದರೆ ಏನಾದರು ಉಪಾಯ ಮಾಡಬಹುದು.

ರಮಾಬಾಯಿ—ಅರಸುಮಗನ ತಲೆಯನ್ನು ಮಾತ್ರ ನೋಡಿದೆ. ನೆತ್ತರು ತೊಟ್ಟಿಕ್ಕುತ್ತಿತ್ತು.

ಸೋಮಶೇಖರ—ಹಾಗೋ! ಎಲ್ಲಿ! ಆ ತಲೆ ಎಲ್ಲಿದೆ?

ರಮಾಬಾಯಿ (ಗಂಡನ ಮಾತನ್ನು ನೆನಪಿಗೆ ತಂದುಕೊಂಡು ಎಚ್ಚರದಿಂದ)—ಅದೇನೋ ನನಗೆ ಗೊತ್ತಿಲ್ಲ. ಯಾರದೋ ತಲೆ ಎಂದು ಹೇಳಿದರು. ನಾನು ತಮಗೆ ಅರಸಿನ ಮಗನದೆಂದು ತಪ್ಪಾಗಿ ಹೇಳಿದೆ. ಅದು ಅವನದಿರಲಿಕ್ಕಿಲ್ಲ. ಯಾರದೋ ಒಂದು ತಲೆ, ಯಾರು ಕಡಿದರೋ ಏನೋ? ನಮ್ಮ ಮನೆಯವರೇನು ಕಡಿದದ್ದಲ್ಲ. ಯಾರೋ ಅವರ ಗೊತ್ತಿನವರು ಏನೋ ಮಾಡಿದರಂತೆ.

ಈ ಮಾತನ್ನು ಕೇಳಿ ಸೋಮಶೇಖರನು ದಿಗಿಲುಗೊಂಡನು. ಪೋಲಿಸನವರು ನಂಬಿಕಸ್ಥರಲ್ಲೆಂಬ ಮಾತು ಅನುಭವ ಸಿದ್ಧವಾಗಿರುತ್ತದೆ. ಅವರೊಳಗೆ ಹಲವರು ದೇಶಾಭಿಮಾನಶೂನ್ಯರೂ ಸ್ವಾರ್ಥಪರರೂ ಪೂರ್ವಾಪರವಿಚಾರವಿಲ್ಲದವರೂ ಧರ್ಮರಹಸ್ಯಪರಾಙ್ಮುಖರೂ ಇರುತ್ತಾರೆಂಬುದು ಎಲ್ಲರಿಗೂ ಗೊತ್ತಿರುವ ಮಾತೇ ಸರಿ. ಆದ್ದರಿಂದ ಸೋಮಶೇಖರನು ಅರಸುಮಗನ ತಲೆಯೆಂಬ ಶಬ್ದವನ್ನು ಕೇಳಿದ ಕೂಡಲೆ ಬೀರಬಲ್ಲನಿಗೂ ತನಗೂ ಇದ್ದ ನೆಂಟತನವನ್ನೂ ಗೆಳೆತನವನ್ನೂ ಅವನಿಂದ ತನಗಾದ ಉಪಕಾರವನ್ನೂ ಮರೆತು ಬಿಟ್ಟನು. ಈ ದೊಡ್ಡ ಕೊಲೆಯನ್ನು ಗೊತ್ತು ಹಚ್ಚಿ, ದರಬಾರಿನಲ್ಲಿ ಪ್ರತಿಷ್ಟೆಯನ್ನು ಪಡೆಯಬೇಕೆಂಬ ಲವಲವಿಕೆಯು ಅವನ ಹೃದಯದಲ್ಲೆಲ್ಲಾ ಹರಡಿಕೊಂಡಿತು. ರಮಾಬಾಯಿಯು ಮೊದಲು ತಾನು ನಂಬಿಕೆಯಿಂದ ಹೇಳಿದ ಮಾತನ್ನು ಮರೆ ಮಾಡಲಿಕ್ಕೆ ಮಾಡಿದ ಎತ್ತುಗಡೆಯಿಂದ ಅವನ ತಿಳಿವಳಿಕೆಯು ಕುಗ್ಗಿ ಬೀರಬಲ್ಲನು ಅರಸುಮಗನ ಕೊಲೆಯನ್ನು ದಿಟವಾಗಿ ಮಾಡಿದನೆಂದು ನಂಬಿದನು. ರಾಜಮಂತ್ರಿಗೆ ತಾನು ಕಂಡುಹಿಡಿದ ದೊಡ್ಡ ತಪ್ಪನ್ನು ತಿಳಿಸಬೇಕೆಂಬ ಅವನ ಹವಣಿಕೆಯು ಅವನ ಅರವನ್ನು ಮಸಣಿಸಿ (ಕೆಡಿಸಿ)ದ್ದಲ್ಲದೆ ಪ್ರತ್ಯಕ್ಷವಾದರೂ ಪ್ರಮಾಣಿಸಿ ನೋಡಬೇಕೆಂಬ ನಾಣ್ನುಡಿಯನ್ನು ಅವನ ಕಣ್ಣಿನಿಂದ* ಮರೆ ಮಾಡಿತು. ಆದಕಾರಣ ಅವನು ಲಗುಬಗೆಯಿಂದ ರಮಾಬಾಯಿಯ ಅಪ್ಪಣೆಯನ್ನು ತೆಗೆದುಕೊಂಡು, ನೆಟ್ಟಗೆ ದರಬಾರಿಗೆ

* ಮನಸ್ಸೆಂಬ ಕಣ್ಣಿನಿಂದ.

ಹೋಗಿ ಹೊತ್ತು ಕಾಯ್ದು ಮಂತ್ರಿಗೆ ಅರಸುಮಗನ ಕೊಲೆಯ ಸುದ್ದಿಯನ್ನು ಅರುಹಿದನು. ಅರಸುಮಗನ ಕೊಲೆ ಎಂದ ಕೂಡಲೇ ಪ್ರಧಾನಿಯು ಮತಿಗೆಟ್ಟು ಹವ್ಹಾರಿ (ಮೆಯ್ಮರೆದು) ಆ ನೋವಿನ ಸುದ್ದಿಯನ್ನು ಅರಸನಿಗೆ ತಿಳಿಸಿದನು. ಆ ಕಾಲದ ಅರಸರಂತೂ ವಿಚಾರಗೇಡಿಗಳೇ!! ತನ್ನ ಹಲವು ಹೆಂಡಂದಿರ ನೂರಾರು ಮಕ್ಕಳಲ್ಲಿ ಯಾವನೋ ಒಬ್ಬನ ಕೊಲೆಯಾಗಿರಬಹುದೆಂದು ಊಹಿಸಿ ಸಿಟ್ಟು ಬೆಂಕಿಯಾಗಿ ತಪ್ಪುಗಾರನನ್ನು ಹಿಡಿದು ನಾಳೆ ಗಲ್ಲಿಗೆ ಹಾಕಿರೆಂದು ಹುಕುಮು ಮಾಡಿದನು!!! 'ಎತ್ತು ಈಯಿತೆಂದರೆ, ಕೊಟ್ಟಿಗೆಯಲ್ಲಿ ಕಟ್ಟು' ಎಂಬ ಗಾದೆಯಂತೆ ಆ ಕಾಲದ ಅರಸರ ತೀರ್ಪು ಇತ್ತು!!!

ದರಬಾರಿನಲ್ಲಿ ನಡೆದ ಎಲ್ಲ ಸಂಗತಿಗಳನ್ನು ಬೀರಬಲ್ಲನು ತನ್ನ ಜೀವದ ಗೆಳೆಯರಿಂದ ಕೇಳಿಕೊಂಡು ದಯಾರಾಮ-ಮಥುರಾದಾಸ ಸಾಹುಕಾರರನ್ನೂ ರೂಪವತಿಯನ್ನೂ ತನಗೆ ಬೆಟ್ಟಿಮಾಡಿಸಬೇಕೆಂದು ಅವರೊಡನೆ ಹೇಳಿದನು. ಸೊಕ್ಕಿನವನಾದ ಮಥುರಾದಾಸನು ಮಾತ್ರ "ಆ ಬೀರಬಲ್ಲನು ಮೋಸಗಾರನು; ನಾನು ನನ್ನ ಹಣ ಕೊಟ್ಟ ದಿವಸವೇ ಅದು ಮುಳುಗಿತೆಂದು ತಿಳಿದಿದ್ದೇನೆ; ನನಗೆ ಅವನ ಗೊಡವೆ ಬೇಡ. ನಾನು ಬರುವುದಿಲ್ಲ" ಎಂದು ಹೇಳಿ ಕಳುಹಿದನು. ಉಳಿದವರಿಬ್ಬರೂ ಅಡರಾಸಿ* ಬೀರಬಲ್ಲನನ್ನು ಕಾಣಲಿಕ್ಕೆ ಅವನ ಮನೆಗೆ ಬಂದರು.

ಅಷ್ಟರೊಳಗೆ ಪೋಲಿಸ್ ಮುಖ್ಯಾಧಿಕಾರಿಯಾದ ಸೋಮಶೇಖರನು ತನ್ನ ಒಳ್ಳೆಯ ಅದೃಷ್ಟವಶದಿಂದ ತನಗೆ ಇಂತಹ ದೊಡ್ಡ ತಪ್ಪನ್ನು ಗೊತ್ತುಹಚ್ಚುವ ಸುಸಂಧಿಯು ಒದಗಿತೆಂದು ಉಬ್ಬಿ, ಅರಸನ ಮೆಚ್ಚಿಗೆ ಪಡೆದುದರಿಂದ ತನಗೆ ಕೂಡಲೆ ಸಂಬಳವು ಬಡತಿಯಾಗುವುದು ನಿಶ್ಚಯವೆಂದು ಹಿಗ್ಗಿ, ಅರಕ್ಷಣವನ್ನಾದರೂ ಪೋಲುಗಳೆದರೆ ತನ್ನ ಅಭಿವೃದ್ಧಿಗೆ ಎಡರು ಬರಬಹುದೆಂದೆಣಿಸಿ, ಕೂಡಲೆ ಬೀರಬಲ್ಲನಿದ್ದೆಡೆಯನ್ನು ಗೊತ್ತು ಹಚ್ಚಿ, ಅವನು ಮಾಡಿದ ಉಪಕಾರವನ್ನು ನೆನಪಿಗೆ ತಾರದೆ, ಗೆಳೆತನವನ್ನೂ ನೆಂಟತನವನ್ನೂ ತೀರ ಮರೆತು, ಸ್ವಾರ್ಥಪಿಶಾಚಿಯು ಗಂಟುಬಿದ್ದವನಂತೆ ಅವನ ಕಯ್ಗೂ ಕಾಲಿಗೂ ಬೇಡಿಗಳನ್ನು ತೊಡಿಸಿ, ಅವನನ್ನು ಸೆರೆಯಲ್ಲಿಟ್ಟನು.

---

* ತಾನು ಬಯಸಿದ ವಸ್ತುವನ್ನು ಹೊಂದಲಿಕ್ಕೆ ಅತ್ಯುತ್ಸುಕನಾಗಿ.

ಇತ್ತ ದಯಾರಾಮ ರೂಪವತಿಯರು ಬೀರಬಲ್ಲನನ್ನು ಹುಡುಕಿ ಹುಡುಕಿ ಬೇಸತ್ತು ಕಡೆಗೆ ಸೆರೆಮನೆಯಲ್ಲಿ ವಿಚಾರಿಸಲು ಅಲ್ಲಿ ಅವನನ್ನು ಕಂಡರು. ಅಲ್ಲಿ ಅವರು ಆವನ ಧೈರ್ಯಸ್ಥೈರ್ಯಶಾಂತಿಗಳನ್ನು ನೋಡಿ ಬೆರಗಾಗಿ, ಅವನು ಅಸಾಧಾರಣವಾದ ಪುರುಷರತ್ನವೆಂದು ಮನಗಂಡರು. ಆಗ ಅವನು ತಾನು ಮಾಡಿದ ಹೂಟವನ್ನೆಲ್ಲ ಬಿಚ್ಚಿ ಹೇಳಲು, ಅವರ ಸಂತೋಷವು ಮೇರೆದಪ್ಪಿತು. ಅವರು ಅವನನ್ನು ಬಿಗಿದಪ್ಪಿಕೊಂಡು ಅವನ ಅಮಾನುಷ ಬುದ್ಧಿಚಾತುರ್ಯವನ್ನು ಹೊಗಳಿ, ಅವನನ್ನು ಬಿಡುಗಡೆ ಮಾಡಿಸುವ ಕೆಲಸಕ್ಕೆ ಮುಂದರಿದರು. ರೂಪವತಿಯು ತನ್ನ ಮನೆಗೆ ಹೋಗಿ ತನ್ನ ಉಡಿಗೆ ತೊಡಿಗೆಗಳನ್ನು ಹಾಕಿಕೊಂಡು ತನ್ನ ಮೇಳದವರ ಜತೆಯಲ್ಲಿ ಅರಮನೆಯ ದಾರಿಯನ್ನು ಹಿಡಿದಳು. ಅವಳು ಅರಮನೆಗೆ ಹೋದಾಗ ಅರಸನು ಆಗ ತಾನೆ ಊಟ ಮಾಡಿ ಕುಳಿತಿದ್ದನು. ಆಕೆಯು ಅರಮನೆಯ ಹಾಡುಗಾರ್ತಿಯಾದ್ದರಿಂದ ಒಳಗೆ ಹೋಗಲಿಕ್ಕೆ ಯಾರೂ ಅಡ್ಡಿ ಮಾಡಲಿಲ್ಲ. ಅವಳು ಅರಸನಿದ್ದೆಡೆಗೆ ಹೋಗಿ ಹಾಡುಕುಣಿತಗಳಿಂದ ತನ್ನ ಮಿಗಿಲಾದ ಜಾಣತನವನ್ನು ತೋರಿಸಲು, ಅವನು ಬಲು ಮೆಚ್ಚಿದನು. ಆಗ ರೂಪವತಿಯು "ಮಹಾರಾಜನೇ! ಬಡತೊತ್ತಿನ ಒಂದು ಅರಿಕೆಯನ್ನು ದಯವಿಟ್ಟು ಕೇಳಬೇಕು."

ಅರಸು—ಅದೇನು, ಹೇಳು. ನಿನ್ನ ಜಾಣತನಕ್ಕೆ ನಾನು ಮನ ಸೋತಿರುತ್ತೇನೆ. ನಿನ್ನ ಬಯಕೆಯನ್ನು ಈಡೇರಿಸುವೆನು.

ರೂಪ.—ಈ ನಾಡಿಗೆ ಬೀರಬಲ್ಲನೆಂಬ ಒಬ್ಬ ಪರದೇಶಿಯು ಬಂದಿರು ತ್ತಾನಷ್ಟೆ. ಅವನು—

ಅರ.—ಅವನೇನು? ಅವನು ನನ್ನ ಮಗನ ಕೊಲೆ ಮಾಡಿದ್ದಾನೆ. ಅಂಥವನ ವಿಷಯವಾಗಿ ನೀನು ಹೇಳಬಹುದೇ?

ರೂ.—ಮಹಾರಾಜನೇ! ನನ್ನ ಅರಿಕೆಯನ್ನು ದಯವಿಟ್ಟು ಲಾಲಿಸ ಬೇಕು. ಅವನು ಕೊಲೆಗಡಕನಲ್ಲ. ತಮ್ಮ ಎಲ್ಲ ಮಕ್ಕಳೂ ಜೀವ ದಿಂದಿರುತ್ತಾರೆ.

ಅರ.—ಹಾ! ಎಲ್ಲರೂ ಇದ್ದಾರೆಯೇ? ಯಾರೂ ಸತ್ತಿಲ್ಲವೇ? **ಲಾಲ್‌ಸಿಂಗ್** ಅರಮನೆಯಲ್ಲಿ ಎಲ್ಲ ಹುಡುಗರೂ ಸುಖವಾಗಿರುತ್ತಾರೆಯೋ ಹೇಗೆ, ಕೇಳಿಕೊಂಡು ಬಾ! ರೂಪವತೀ! ನೀನು ಹೇಳಿದ್ದು ದಿಟವಾದರೆ ನೀನು ಹೇಳಿದ ಗೃಹಸ್ಥನನ್ನು ಬಿಟ್ಟುಬಿಡುವೆನು; ಇಷ್ಟೇ ಅಲ್ಲ, ಅವನಿಗೆ ಬಹುಮಾನ ಮಾಡುವೆನು.

ರೂ.—ರಾಜವರೇಣ್ಯರೇ! ಬೀರಬಲ್ಲನು ಕಲ್ಲಂಗಡಿಯ ಹೋಳುಗಳನ್ನು ಬಿಳಿಯ ಅರವಿಯಲ್ಲಿ ಹಾಕಿಟ್ಟುದನ್ನು ಕಂಡು ಯಾರೋ ಕೇಡಿಗರು ಅವನು ಅರಸುಮಗನ ತಲೆಯನ್ನು ತಂದಿರುತ್ತಾನೆಂದು ಹುಟ್ಟಿಸಿರುತ್ತಾರೆ!!!

ಅರ.—ಛೇ!! ನನ್ನ ರಾಜ್ಯದಲ್ಲಿ ಇಷ್ಟು ಅವಿಚಾರವಿರಲಾರದು. ನನ್ನ ಮಂತ್ರಿಗಳೂ ಅಧಿಕಾರಿಗಳೂ ತಂತಮ್ಮ ಕೆಲಸಗಳಲ್ಲಿ ದಕ್ಷರಾಗಿರುತ್ತಾರೆ.

ರೂ.—ರಾಜತಿಲಕರೇ! ದೀವಿಗೆಯ ಕೆಳಗೆ ಕತ್ತಲೆಯೆಂಬ ಗಾದೆಯಂತೆ ಏನೋ ಮಲಾಮತಿ (ಸೋಜಿಗ) ಆಗಿರುತ್ತದೆ. ಅಧಿಕಾರಿಗಳು ಹೇಗೆ ಮೋಸ ಹೋದರೋ ದೇವರೇ ಬಲ್ಲ. ದಿಟವಾಗಿ ಬೀರಬಲ್ಲನು ಕೊಲೆ ಮಾಡಿಲ್ಲೆಂದು ನಾನು ಹೇಳಬಲ್ಲೆನು.

ಲಾಲ್‌ಸಿಂಗ್—ಮಹಾರಾಜರಿಗೆ ಜಯವಾಗಲಿ. ನಾನು ಎಲ್ಲ ರಾಣಿವಾಸಗಳಿಗೂ ಹೋಗಿ ಕೇಳಿ ಬಂದೆನು. ಎಲ್ಲರ ಮಕ್ಕಳೂ ಸುರಕ್ಷಿತವಾಗಿರುತ್ತಾರೆ.

ಅರ.—ಎಲ್ಲ ಹುಡುಗರನ್ನೂ ನೋಡಿದೆಯೇನು?

ಲಾಲ.—ಜೀಯಾ! ಎಲ್ಲ ಹುಡುಗರನ್ನೂ ನಾನು ಕಣ್ಣಾರೆ ನೋಡಿದೆನು. ಅವರು ಸುಖವಾಗಿರುತ್ತಾರೆ. ಒಬ್ಬರ ಕಣ್ಣಾಗಲೀ ಮೂಗಾಗಲೀ ಡೊಂಕಾಗಿಲ್ಲ.

ಅರ.—ಇದೇನು ಸೋಜಿಗ!! ಯಾರಿದ್ದೀರೊ ಅಲ್ಲಿ? ಓಲಗಕ್ಕೆ ಹೋಗುವುದಕ್ಕೆ ಸಿದ್ಧಮಾಡಿರಿ. ಬೇಗನೆ ದರಬಾರಿಗೆ ಹೋಗುವೆನು. ಇದೇನೋ ದೊಡ್ಡ ಪ್ರಮಾದ ಘಟಿಸಿದಂತೆ ತೋರುತ್ತದೆ. ಆ ಬೀರಬಲ್ಲನನ್ನು ಗಲ್ಲಿಗೆ ಹಾಕದೆ ದರಬಾರಿಗೆ ಕರೆತರಿಸುವಂತೆ ಮಂತ್ರಿಗೆ ಹೇಳು.

ಬೇಗನೆ ಒಬ್ಬ ಸವಾರನನ್ನು ಕಳುಹಿಸು. ಪಾಪ ಆ ಬಡ ಪ್ರಾಣಿಯನ್ನು ಎಲ್ಲಿಯಾದರು ಕೊಂದುಬಿಟ್ಟಾರು!! ನಮ್ಮ ರಾಜ್ಯಕ್ಕೆ ಬ್ರಹ್ಮಹತ್ಯ ದೋಷವು ಬಂದೀತು!!!

ಇಷ್ಟರೊಳಗೆ ದಯರಾಮು ಸೆಟ್ಟರು ಎಲ್ಲ ಮಂತ್ರಿಗಳನ್ನೂ ಕಂಡು ಅವರಿಗೆ ಹೇಳಬೇಕಾದುದೆಲ್ಲವನ್ನೂ ಹೇಳಿ ಬೀರಬಲ್ಲನು ನಿರಪರಾಧಿಯೆಂದು ಮನಗಾಣಿಸಿ ಅವನ ಬಿಡುಗಡೆಗೋಸ್ಕರ ನೆರವಾಗಲಿಕ್ಕೆ ಅವರನ್ನೆಲ್ಲ ಒಡಂಬಡಿಸಿ ಓಲಗದಲ್ಲಿಯೇ ಬಂದು ಕುಳಿತಿದ್ದರು. ಜಯಘೋಷದ ಅಬ್ಬರದಲ್ಲಿ ಬಟ್ಟಂಗಿಗಳ ಹೊಗಳಿಕೆಯೊಡನೆ ಅರಸನು ಓಲಗವನ್ನು ಹೊಕ್ಕು ಗದ್ದಿಗೆಯ ಮೇಲೆ ಕುಳಿತನು. ಮಂತ್ರಿಗಳೂ ಉಳಿದ ಸರದಾರರೂ ತಂತಮ್ಮ ವಂದನೆಗಳನ್ನು ಅರ್ಪಿಸಿ, ತಮತಮಗೆ ತಕ್ಕವಾದ ಎಡೆಗಳಲ್ಲಿ ಕುಳಿತರು. ರಾಜಾಜ್ಞೆಯಂತೆ ಭಟರು ಬೀರಬಲ್ಲನನ್ನು ಒದರಿದರು (ಕೂಗಿದರು). ಅವನು ಓಲಗದೊಳಗೆ ಬಂದು ಸಿಂಹಾಸನದ ಮುಂದೆ ಅಡ್ಡಬಿದ್ದು ಎದ್ದು ಕಯ್ಜೋಡಿಸಿಕೊಂಡು ನಿಂತನು. ದರಬಾರೆಲ್ಲ ನಿಶ್ಶಬ್ದವಾಯಿತು. ಮುಂದೆ ಏನು ನಡೆಯುತ್ತದೆಂಬುದನ್ನು ನೋಡುವ ಲವಲವಿಕೆಯು ಎಲ್ಲರ ಮೋರೆಯ ಮೇಲೆ ಕುಣಿಯುತ್ತಿತ್ತು, ಎಲ್ಲರೂ ಬೀರಬಲ್ಲನ ಸಂಪತ್ಔದಾರ್ಯಗಳ ಭಾಗಿಗಳಾಗಿದ್ದುದರಿಂದ ಅವನಲ್ಲಿ ಕನಿಕರವುಳ್ಳವರಾಗಿದ್ದರು; ಅವನು ಬಂಧಮುಕ್ತನಾಗಬೇಕೆಂದು ಎಲ್ಲರೂ ಹಾರೈಸುತ್ತಿದ್ದರು.

ಅರ.—ಏನಯ್ಯಾ ಬೀರಬಲ್ಲ! ನಿನ್ನನ್ನು ಯಾವ ಕಾರಣದಿಂದ ಹಿಡಿದರು ಬಲ್ಲೆಯಾ?

ಬೀ.—ರಾಜಾಧಿರಾಜ! ನಾನು ದೇವರ ಸಾಕ್ಷಿಯಾಗಿ ದಿಟವನ್ನೇ ಹೇಳುತ್ತೇನೆ. ಮೊನ್ನೆ ಪೇಟೆಯಲ್ಲಿ ತಿರುಗಾಡುವಾಗ ನನ್ನ ಗೆಳೆಯನೂ ನಂಟನೂ ಆದ ಈ ಸೋಮಶೇಖರನು ನನ್ನನ್ನು ಕರೆದುಕೊಂಡು ಚೌಕಿಗೆ (ಪೋಲಿಸುಕಚೇರಿಗೆ) ಹೋಗಿ, ಅಲ್ಲಿ ನಾನು ಅರಸುಮಗನ ಕೊಲೆ ಮಾಡಿರುತ್ತೇನೆಂತಲೂ ಆದ್ದರಿಂದ ನನ್ನನ್ನು ಹಿಡಿದು ಬಂದೀಖಾನೆಯಲ್ಲಿಡುತ್ತೇನೆಂತಲೂ ಹೇಳಿದನು. ನಾನು ನಿರಪರಾಧಿಯೆಂದು ಎಷ್ಟು ಪರಿಯಿಂದ ಹೇಳಿ

ದರೂ ಅವನಿಗೆ ಕರುಣೆ ಬರಲಿಲ್ಲ. ನಾನು ಯಾರ ಕೊಲೆಯನ್ನೂ ಮಾಡಿ ಲ್ಲ. ನನ್ನಿಂದ ಯಾವ ತಪ್ಪೂ ಆಗಿಲ್ಲ. ನನ್ನ ಮಾತಿಗೆ ದೇವರೇ ಸಾಕ್ಷಿ.

ಅರ.—(ಸೋಮಶೇಖರನ ಕಡೆ ನೋಡಿ)—ಇವನು ಯಾವ ಅಪ ರಾಧ ಮಾಡಿದನು? ಅದರ ಬಗ್ಗೆ ಸಾಕ್ಷಿಯೇನಿದೆ?

ಸೋಮಶೇಖರ—(ಅಳುವ ದನಿಯಿಂದ), ಮಹಾಪ್ರಭುಗಳೇ! ಇವನ ತಪ್ಪನ್ನು ಹೇಳಲಿಕ್ಕೆ ನನ್ನ ಬಾಯಿ ಬರಲೊಲ್ಲದು. ತಮ್ಮ ಮಗನನ್ನು ಕೊಂದು ಅವನ ರುಂಡವನ್ನು ಬಚ್ಚಿಟ್ಟದ್ದಾನೆ. ಈ ಮಾತು ಇವನ ಹೆಂಡ ತಿಯೂ ನನ್ನ ನಂಟಳೂ ಆದ ರಮಾಬಾಯಿಯಿಂದಲೇ ತಿಳಿಯಿತು. ಕೂಡ ಲೆ ನಾನು ಅದನ್ನು ಖಾವಂದರವರ ಕಿವಿಯಲ್ಲಿ ಹಾಕಿ ಇವನು ಓಡಿಹೋಗುವ ಬೇತಿನಲ್ಲಿ (ವಿಚಾರದಲ್ಲಿ)ದ್ದುದರಿಂದ ಇವನನ್ನು ಕೂಡಲೆ ಹಿಡಿದು ಸೆರೆಯ ಲ್ಲಿಟ್ಟು, ಸ್ವಾಮಿ ಭಕ್ತಿಯ ನಿಸ್ಸೀಮತೆಯನ್ನು ತೋರಿಸಿದೆನು. ಆ ತಲೆಯ ನ್ನೆಲ್ಲಿಟ್ಟದ್ದಾನೆಂಬುದನ್ನು ಅವನನ್ನೇ ಕೇಳಬಹುದು.

ಅರ.—ಬೀರಬಲ್ಲ! ತಲೆಯನ್ನೆಲ್ಲಿಟ್ಟಿರುತ್ತೀ?

ಬೀ.—ಧರ್ಮಸರಕಾರ್! ರುಂಡಗಿಂಡ ನನಗೇನೂ ಗೊತ್ತಿಲ್ಲ. ಯಾವ ರುಂಡವನ್ನೂ ನಾನು ಇದು ವರೆಗೆ ಕಂಡಿಲ್ಲ ಮತ್ತು ಮುಟ್ಟಿಲ್ಲ. ಮೊನ್ನೆ ನಾನು ಒಳ್ಳೆಯ ಒಂದು ಕಲ್ಲಂಗಡಿಯ ಹಣ್ಣನ್ನು ಕೊಂಡು ಅದರ ಹೋಳನ್ನು ನನ್ನ ಪೆಟ್ಟಿಗೆಯಲ್ಲಿಟ್ಟು ಬೀಗ ಹಾಕಿದ್ದು ಮಾತ್ರ ನಿಜ. ಆಗ ಅದನ್ನು ನನ್ನ ಹೆಂಡತಿಯು ನೋಡಿದಳೆಂದು ತೋರುತ್ತದೆ. ಇದರ ಹೊರ ತು—

ಸೋಮ.—ಮಹಾಸ್ವಾಮಿ! ಅದೇ ರುಂಡವಿರಬೇಕು. ಕಲ್ಲಂಗಡಿ ಹೋಳಲ್ಲ. ಇವನ ಹೆಂಡತಿಯು ಮೊದಲು ಅರಸುಮಗನ ರುಂಡವೆಂದು ಹೇಳಿ, ಬಳಿಕ ಅದನ್ನು ಮರೆ ಮಾಡಲಿಕ್ಕೆ ಯತ್ನಿಸಿದಳು. ಆದ್ದರಿಂದ ಅದು ನಿಜವಾಗಿ ತಮ್ಮ ಮಗನ ರುಂಡವಿರಬೇಕೆಂದು ನಿಶ್ಚಯಿಸಿದೆನು. ನಿಸ್ಸಂದೇ ಹವಾಗಿ ಅದು ರಾಜಕುಮಾರನ ರುಂಡ. ಅದಾಗದಿದ್ದರೆ ಕಲ್ಲಂಗಡಿಯ ಹೋಳನ್ನು ಯಾರಾದರೂ ಪೆಟ್ಟಿಗೆಯಲ್ಲಿಟ್ಟು ಬೀಗ ಹಾಕುವುದುಂಟೆ?

ಬೀ.—ಮಹಾಕೃಪಾಸಾಗರರೇ!! ಈ ಸೋಮಶೇಖರನ ಕುತರ್ಕಕ್ಕೆ ಪರಿಮಿತಿಯೇ ಇಲ್ಲ. ಮಹಾಸ್ವಾಮಿಗಳು ಆ ಪೆಟ್ಟಿಗೆಯನ್ನು ತರಿಸಿ ತೆಗಿಸಿ ನೋಡಿದರೆ ಯಾರ ಮಾತು ದಿಟವೆಂಬುದು ಕಾಣುವುದು. ಅಂಗೈಯಲ್ಲಿಯ ಗೆರೆ ನೋಡಲಿಕ್ಕೆ ಕನ್ನಡಿ ಬೇಕೇ?

ಸೋಮ.—ರಾಜಾಧಿರಾಜನೇ! ಆ ಪೆಟ್ಟಿಗೆಯನ್ನು ತರಿಸಬೇಕಲ್ಲದೆ, ಇವನ ಹೆಂಡತಿಯನ್ನೂ ಇಲ್ಲಿಗೆ ಕರೆಕಳಿಸಬೇಕು. ಆಕೆಯೇ ಅರಸು ಮಗನ ರುಂಡವೆಂದು ಹೇಳಿದಳು.

ಕೂಡಲೆ ಆಳುಗಳು ಬೀರಬಲ್ಲನ ಮನೆಗೆ ಹೋಗಿ ಅವನು ಹೇಳಿದ ಪೆಟ್ಟಿಗೆಯನ್ನು ತಂದು ಗದ್ದಿಗೆಯ ಮುಂದೆ ಇರಿಸಿದ್ದಲ್ಲದೆ, ಅವನ ಹೆಂಡತಿಯನ್ನೂ ಕರೆತಂದು ತಕ್ಕ ಸ್ಥಳದಲ್ಲಿ ಕುಳ್ಳಿರಿಸಿದರು. ಎಲ್ಲರೂ ಆ ಪೆಟ್ಟಿಗೆಯಲ್ಲಿ ಏನಿರುವುದೋ ಎಂಬ ಸಂಶಯದಲ್ಲಿ ಮುಳುಗಿದರು. ರಮಾಬಾಯಿಯ ಮೋರೆಯು ಒಣಗಿತ್ತು. ಸೋಮಶೇಖರನು ತನ್ನ ಪಾಡು ಮುಂದೇನಾಗುವುದೋ ಎಂಬ ಸಂಶಯದಿಂದ ತಲ್ಲಣಿಸುತ್ತಿದ್ದನು. ರೂಪವತಿ ದಯಾರಾಮ ಸೆಟ್ಟರು ಸ್ಥಿರಮನಸ್ಕರಾಗಿ ಎದುರು ನೋಡುತ್ತಿದ್ದರು. ಬೀರಬಲ್ಲನು ಮಾತ್ರ ಆತ್ಮವಿಶ್ವಾಸ ಧೈರ್ಯಸ್ಥೈರ್ಯಶಾಂತಿಯುಳ್ಳವನಾಗಿ ನಗೆಮೊಗದಿಂದ ಎಲ್ಲರನ್ನೂ ನೋಡುತ್ತಿದ್ದನು. ಅವನ ಹುರುಪನ್ನು ನೋಡಿ ಎಲ್ಲ ಸಭಿಕರೂ ಬೆರಗಾದರು.

ಅರ.—ಸೋಮಶೇಖರನೇ, ಬೇಗದ ಕೈಯನ್ನು ತೆಗೆದುಕೊಂಡು ಆ ಪೆಟ್ಟಿಗೆಯನ್ನು ತೆರೆ.

ಸೋಮಶೇಖರನು ಪೆಟ್ಟಿಗೆಯನ್ನು ತೆಗೆದು ಕಲ್ಲಂಗಡಿಯ ಹೋಳು ರಕ್ತಮಯವಾದಂತೆ ಅವನ ಸ್ವಾರ್ಥದೃಷ್ಟಿಗೆ ಕಂಡುದರಿಂದ ಉಬ್ಬಿ, ಆ ಗಂಟನ್ನು ಎತ್ತಿ ಸಭಿಕರಿಗೆ ತೋರಿಸಲು, ಎಲ್ಲರ ಬಾಯಿಂದಲೂ ಹಾಹಾಕಾರ ಹೊರಟಿತು. ಅದನ್ನು ಬಿಚ್ಚಿ ನೋಡಲು ಕಲ್ಲಂಗಡಿಯ ಹೋಳುಗಳ ಹೊರತು ಮತ್ತೇನೂ ಇಲ್ಲದುದನ್ನು ಕಂಡು ಅವನು ಹವ್ಹಾರಿ ದಿಗಿಲು ಬಡಿದು ನಿಂತನು. ಮಂತ್ರಿಗಳು ಎಷ್ಟು ಬಾರಿ ಕೇಳಿದರೂ ಅವನ ಬಾಯಿಂದ ಉತ್ತರವೇ ಹೊರಡಲಿಲ್ಲ. ಬಳಿಕ ಕೆಲ ಹೊತ್ತಿನ ಮೇಲೆ ಅವನು ಚೇತರಿಸಿಕೊಂಡು,

ಮಹಾಸ್ವಾಮಿ! ಇವೇನೋ ಕಲ್ಲಂಗಡಿಯ ಹೋಳುಗಳೇ!! ಆದರೆ ಇವನ ಹೆಂಡತಿಯು ತನ್ನ ಗಂಡನು ರುಂಡವನ್ನು ತಂದಿಟ್ಟನೆಂದು ಹೇಳಿ ನನಗೆ ಮೋಸ ಮಾಡಿದಳು.

ಅರ.—(ರಮಾಬಾಯಿಯ ಕಡೆ ನೋಡಿ), ಏನಮ್ಮಾ! ನೀನು ಇವನೊಡನೆ ಹಾಗೆಂದು ಹೇಳಿದೆಯಾ?

ರಮಾ.—ಮಹಾರಾಜನೇ! ನಾನು ಹಾಗೆ ಇವನೊಡನೆ ಎಂದೂ ಹೇಳಲಿಲ್ಲ. ನನಗೆ ಇದಾವುದೂ ಗೊತ್ತಿಲ್ಲ. ಇದೆಲ್ಲವು ಈ ಮಹಾರಾಯನು ಹುಟ್ಟಿಸಿಕೊಂಡು ಹೇಳಿದ ಮಾತೇ. ನಾನು ನನ್ನ ಗಂಡನಿಗೆ ವಿರುದ್ಧವಾಗಿ ಹೇಗೆ ಹೇಳೇನು? ಇವನಿಗೆ ಸೆಟೆಬೇನೆ (ಧನುರ್ವಾಯು ರೋಗ) ಬರಲಿ ಎಂದು ಅಳತೊಡಗಿದಳು.

ಅರ.—ಸೋಮಶೇಖರನೇ, ನನ್ನ ಯಾವ ಮಗನ ಕೊಲೆಯಾಗಿರುತ್ತದೆಂದು ತಿಳಿದೆ?

ಸೋ.—ದಯಾಸಾಗರರೇ! ರಮಾಬಾಯಿಯು ಹೇಳಿದ ಕೂಡಲೆ, ನಾನು ಕೊಲೆ ಮಾಡಿದ್ದು ಸತ್ಯವೆಂದು ನಂಬಿಬಿಟ್ಟೆನು. ಯಾವ ಹುಡುಗನ ಕೊಲೆಯಾಯಿತೆಂಬುದನ್ನು ಇನ್ನೂ ವಿಚಾರಿಸಿಲ್ಲ.

ಅರ.—ಸೋಮಶೇಖರನೇ! ನೀನು ನ್ಯಾಯಕ್ಕೆ ತಕ್ಕ ಸಹಾಯಕನೆಂದು ನಿನ್ನನ್ನು ಪೋಲಿಸ್ ಮುಖ್ಯಾಧಿಕಾರಿಯಾಗಿ ಮಾಡಿದೆವು. ಈಗ ನೀನು ಕೊಲೆಯಾದುದು ಸಟೆಯೊ ದಿಟವೊ ಎಂಬುದನ್ನು ವಿಚಾರ ಮಾಡದೆ ಇವನು ಕೊಲೆಗಡಕನೆಂಬ ನಂಬಿಗೆಯನ್ನು ನಮ್ಮಲ್ಲಿ ಹುಟ್ಟಿಸಿ, ಅನ್ಯಾಯದಿಂದ ಮರಣಶಿಕ್ಷೆಯನ್ನು ಕೊಡಲಿಕ್ಕೆ ನಮ್ಮನ್ನು ಪ್ರೇರೆಪಿಸಿದೆ!!! ನೀನು ವಿಶ್ವಾಸಘಾತುಕನಲ್ಲವೇ? ಕೃತಘ್ನನಲ್ಲವೇ? ನನ್ನ ರಾಜ್ಯಕ್ಕೆ ಕಲಂಕನಲ್ಲವೇ? ಲಾಲ್‌ಸಿಂಗ್?

ಲಾಲ್‌ಸಿಂಗ್—ಜೀ ಮಹಾರಾಜ್!

ಅ.—ನನ್ನ ಯಾವ ಮಗನ ಕೊಲೆಯಾದರೂ ಆಗಿರುತ್ತದೇನು?

ಲಾ.—ಮಹಾರಾಜನೇ! ತಮ್ಮ ಅಪ್ಪಣೆಯಂತೆ ನಾನು ಎಲ್ಲ ಮಾತುಶ್ರೀಯವರನ್ನೂ ಕೇಳಿದೆನು; ಇಷ್ಟೇ ಅಲ್ಲ, ನಾನು ಎಲ್ಲ ಹುಡುಗರನ್ನೂ

ಕಣ್ಣಾರೆ ನೋಡಿ ಬಂದೆನು. ಎಲ್ಲರೂ ಸುರಕ್ಷಿತವಾಗಿರುತ್ತಾರೆ. ಒಬ್ಬನ ಕಣ್ಣು ಮೂಗಾದರೂ ಕೊಂಕಾಗಿಲ್ಲ.

ಅ. —(ಬೀರಬಲ್ಲನ ಕಡೆ ನೋಡಿ), ಬೀರಬಲ್ಲ, ನಮ್ಮ ಅಧಿಕಾರಗಳು ನಿನ್ನನ್ನು ಅನ್ಯಾಯವಾಗಿ ಬಲು ನೋಯಿಸಿದರು. ನಮಗೆ ತಪ್ಪು ತಿಳಿವಳಿಕೆಯನ್ನುಂಟು ಮಾಡಿದ್ದರಿಂದ ನಾವಾದರೂ ಎಣಿಕೆಮಾಡದೆ ಅನ್ಯಾಯದ ತೀರ್ಪನ್ನು ಕೊಟ್ಟೆವು. ಈ ಎಲ್ಲ ತಪ್ಪಿಗೂ ಸೋಮಶೇಖರನೇ ಹೊಣೆಯಾಗಿರುತ್ತಾನೆ. ಅವನು ನಮ್ಮ ಹೆಸರಿಗೆ ಕುಂದು ತಂದನು; ನಮ್ಮ ಮೋರೆಗೆ ಮಸಿ ಹಚ್ಚಿದನು. ನಾವು ನಿನಗಾದ ಹಾನಿಯನ್ನು ಪೂರೈಸಿ ಕೊಡುವೆವು. ನೀನು ಏನು ಬೇಡುತ್ತೀಯೋ ಬೇಡು. ಇದರಲ್ಲಿ ಈ ರೂಪವತಿಯು ನಮಗೂ ನಿನಗೂ ಬಹಳ ಉಪಕಾರ ಮಾಡಿರುತ್ತಾಳೆ.

ಬೀ. —ನನ್ನೊಡೆಯನೆ! ನನಗೆ ಏನೂ ಬೇಕಾಗಿಲ್ಲ. ತಾವು ನನ್ನನ್ನು ಇಷ್ಟು ಗೌರವಿಸಿದ್ದೇ ನನ್ನ ಪೂರ್ವಜನ್ಮದ ಪುಣ್ಯದ ಫಲವು. ನಾನು ಪರದೇಶಿಯು. ನನ್ನ ಒಡೆಯನು ನನಗೆ ಬೇಕಾದ್ದನ್ನು ಕೊಟ್ಟು ಸಲಹುತ ಲಿದ್ದಾನೆ. ತಾವು ಮಾಡಿದ ಮನ್ನಣೆಯ ಬಗ್ಗೆ ನಾನು ತುಂಬಾ ಕೃತಜ್ಞನಾಗಿರುತ್ತೇನೆ.

ಅ. —ನಿಮ್ಮ ಒಡೆಯನಾರು? ನೀನು ಇಲ್ಲಿ ಏಕೆ ಬಂದಿರುತ್ತಿ?

ಬೀ. —ಸ್ವಾಮಿ, ನಾನು ದಿಲ್ಲಿಯ ಚಕ್ರವರ್ತಿಯಾದ ಅಕ್ಬರ ಬಾದಶಹನ ಮಂತ್ರಿಯು. ಅವನು ನನ್ನನ್ನು ಒಂದು ದೊಡ್ಡ ರಾಜಕಾರ್ಯದ ಬಗ್ಗೆ ತಮ್ಮ ಬಳಿಗೆ ಕಳುಹಿಸಿರುತ್ತಾನೆ.

ಅರ. —(ಸೋಜಿಗಗೊಂಡು), ಹಾಗೆಯೇ! ಇದೇನು ಅದ್ಭುತ!

ಮಂತ್ರಿ—ಮಹಾರಾಜನೇ, ಹಿಂದಿನ ವರ್ಷ ನಾವು ದಿಲ್ಲಿಯ ಬಾದಶಹನ ಬಳಿಗೆ ಒಬ್ಬ ರಾಯಭಾರಿಯನ್ನು ಕಳುಹಿಸಿದ್ದು ತಮ್ಮ ನೆನಪಿನಲ್ಲಿರಬಹುದು.

ಅರ. —ಏತಕ್ಕೋಸ್ಕರ? (ಬೀರಬಲ್ಲನನ್ನು ನೋಡಿ), ರಾಜಕಾರ್ಯವೇನು?

ಬೀರಬಲ್ಲನು ತಾನು ಬಾದಶಹನಿಂದ ತಂದ ಮತ್ತು ಪೆಟ್ಟಿಗೆಯಲ್ಲಿಟ್ಟದ್ದ ಥೈಲಿಯನ್ನು ಸಿಂಹಾಸನದ ಮುಂದಿಟ್ಟು ಅಡ್ಡಬಿದ್ದು—ಸ್ವಾಮಿಾ! ಈ ಥೈಲಿಯಲ್ಲಿ ನಾನು ಬಂದ ಕಾರ್ಯವನ್ನು ನನ್ನ ಒಡೆಯರು ಕಾಣಿಸಿದ್ದಾರೆ.

ಮಂತ್ರಿಯು ಆ ಥೈಲಿಯನ್ನು ಬಿಚ್ಚಿ ಅದರ ಒಕ್ಕಣೆಯನ್ನು ಓದಲು, ಎಲ್ಲ ಸಭಿಕರೂ ಬೆರಗಾಗಿ ದಿಗಿಲುಪಟ್ಟರು.

ಅ.—(ಪರಮಾಶ್ಚರ್ಯದಿಂದ) ಬೀರಬಲ್ಲನೇ! ನಿಮ್ಮ ಬಾದಶಹನು ಕಳುಹಿಸಿದ ಪದಾರ್ಥಗಳೆಲ್ಲಿವೆ?

ಬೀ.—ಮಹಾಸ್ವಾಮಿಾ, ತಾವು ಬೇಡಿದ ಎಲ್ಲ ಸಾಮಾನುಗಳನ್ನೂ ಅಣಿಮಾಡಿಕೊಂಡಿದ್ದೇನೆ.

ಅ.—ಅವೆಲ್ಲಿವೆ?

ಬೀ.—ಇಲ್ಲೇ ಇರುತ್ತವೆ.

ಅ.—(ಬೆರಗಾಗಿ), ಅವನ್ನು ಕೊಡು! ತಡವೇಕೆ?

ಬೀ.—ರಾಜಶ್ರೇಷ್ಠನೇ ತಮ್ಮ ಮಂತ್ರಿಯು ಆ ಪದಾರ್ಥಗಳ ಹೆಸರನ್ನು ಓದಿದರೆ ಒಂದೊಂದಾಗಿ ತಮಗೆ ಒಪ್ಪಿಸುವೆನು.

ಮ.—೧ನೆಯ ಪದಾರ್ಥ—ಕುಲೀನಳಾದ ಪತಿದ್ರೋಹಿ.

ಬೀ.—ಮಹಾರಾಜ, ಇಂತಹ ಹೆಂಗಸು ಇಲ್ಲೇ ಕುಳಿತಿರುತ್ತಾಳೆ. (ತನ್ನ ಹೆಂಡತಿಯ ಕಡೆಗೆ ಬೆರಳು ತೋರಿಸಿ), ಈಕೆಯು ಕುಲೀನಳು ಈಕೆಯ ಪೂರ್ವಜರು ದೊಡ್ಡ ಇನಾಮುದಾರರು. ಈಕೆಯ ನಂಟರು ದೊಡ್ಡವರೆಂದೆನಿಸಿಕೊಳ್ಳುತ್ತಾರೆ. ತಮ್ಮ ದರಬಾರಿನಲ್ಲಿ ಪ್ರಮುಖ ಉದ್ಯೋಗಸ್ಥನಾದ ಸೋಮಶೇಖರನಂತೂ ಈಕೆಯ ಸೋದರಮಾವನು. ಇಂತಹ ದೊಡ್ಡಮನೆತನದವಳಾದ ಈ ಕುಲೀನ ಸ್ತ್ರೀಯು ಗಂಡನಾದ ನನ್ನನ್ನು ಕೊಲೆಗೆ ಗುರಿ ಮಾಡಿದಳು!! (ಕಯ್ಯನ್ನು ಜೋಡಿಸಿಕೊಂಡು) ಮಹಾರಾಜನೇ! ತಮ್ಮ ದಾಸಾನುದಾಸನಾದ ನನಗೆ ಅಭಯದಾನವನ್ನು ಕೊಟ್ಟರೆ ನನ್ನದೊಂದು ಗುಟ್ಟನ್ನು ಮಹಾಸ್ವಾಮಿಯವರಿಗೆ ಅರಿಕೆ ಮಾಡುವೆನು. ದಯವಿಟ್ಟು ಅಂಜಬೇಡೆಂದು ಅಪ್ಪಣೆ ಕೊಡಿಸಬೇಕು.

ಅರ.—ಬೀರಬಲ್ಲ, ನಿನ್ನ ಧೈರ್ಯಸಾಹಸಗಳಿಗೆ ನಾನು ತುಂಬಾ ಮೆಚ್ಚಿದ್ದೇನೆ. ನೀನು ಬೆಚ್ಚದೆ ಬೆದರದೆ ಏನೂ ಮರೆ ಮಾಡದೆ ಇದ್ದಕ್ಕಿದ್ದ ಹಾಗೆ ಎಲ್ಲ ಮಾತನ್ನೂ ತಿಳಿಸು. ನಾನು ನಿನ್ನ ಜಾಣತನದ ಮಾತನ್ನು ಕೇಳಲಿಕ್ಕೆ ತವಕಪಡುತ್ತೇನೆ.

ಬೀರ.—ಮಹಾಸ್ವಾಮಿ! ನನ್ನದೊಂದು ತಪ್ಪನ್ನು ಕ್ಷಮಿಸಬೇಕು. ನಾನು ನನ್ನ ಹೆಂಡತಿಯನ್ನು ಪರೀಕ್ಷಿಸುವುದಕ್ಕೋಸ್ಕರ ಒಂದು ಸುಳ್ಳು ಹೇಳಿದ್ದು ನಿಜ. ಅರಿವೆಯಲ್ಲಿದ್ದ ಕಲ್ಲಂಗಡಿ ಹೋಳುಗಳು ಅರಸುಮಗನ ರುಂಡವೆಂದು ಹೇಳಿದ ನನ್ನ ಸುಳ್ಳನ್ನು ಒಡೆಯರು ಕ್ಷಮಿಸಬೇಕು. ಆದರೆ “ಈ ಮಾತನ್ನು ಯಾರಿಗೂ ಹೇಳ ಕೂಡದು, ಹೇಳಿದರೆ ನನ್ನ ಪ್ರಾಣ ಉಳಿಯದು” ಎಂದು ನಾನು ಒತ್ತಿ, ಒತ್ತಿ, ೩|೪ ಸಾರಿ ಈಕೆಗೆ ಸಾರಿ ಹೇಳಿದೆನು. ಹೀಗಿದ್ದರೂ ಈಕೆಯು ನನ್ನ ಗುಟ್ಟನ್ನು ಸೋಮಶೇಖರನೆದುರಿಗೆ ಹೊರಗೆಡವಿದ್ದು ಪತಿದ್ರೋಹವಲ್ಲವೇ?

ಎಲ್ಲರು—ಅಹುದು, ಅಹುದು.

ರಮಾಬಾಯಿ—ಸ್ವಾಮಿಾ—

ಎಲ್ಲರು—ಸುಮ್ಮನಿರು, ಮಾತಾಡಬೇಡ. ಮಂತ್ರಿ—೨ನೆಯದು ಕುಲಹೀನಳಾದ ಗುಣವತಿಯು.

ಬೀ.—ಮಹಾರಾಜನೇ, ಈ ರೂಪವತಿಯೇ ಇಂತಹ ಹೆಂಗಸು (ಆಕೆಯ ಕಡೆ ಬೆರಳು ತೋರಿಸಿ), ಈಕೆಯು ಕುಲಹೀನಳೆಂಬುದನ್ನು ಎಲ್ಲರೂ ಒಡಂಬಡುವರು. ಈಕೆಯ ಮನೆಗೆ ನಾನು ಒಮ್ಮೆ ಹೋಗಿ ೧೦ ರೂಪಾಯಿ ಕೊಟ್ಟು, ಇವಳನ್ನು ಹೊಡೆದು ಬಂದೆನು. ಆದರೆ ಈಕೆಯು ನನಗೆ ಬಂದ ಆಪತ್ತನ್ನು ಕೇಳಿ ಮನನೊಂದು ದಯಾಪರಳಾಗಿ ಕೇವಲ ಪರೋಪಕಾರಬುದ್ಧಿಯಿಂದ ನನ್ನನ್ನು ಉಳಿಸಲಿಕ್ಕೆ ಮನಃಪೂರ್ವಕವಾಗಿ ಮಾಡಿದ ಸಾಹಸವು ಒಡೆಯರಿಗೆ ತುಂಬಾ ಮನವರಿಕೆಯಾಗಿರಬಹುದು. ಈಕೆಯ ಸದ್ಗುಣಗಳನ್ನು ಎಷ್ಟು ಬಣ್ಣಿಸಿದರೂ ಸಾಲದು.

ಎಲ್ಲರು—ಅಹುದಹುದು. ಈಕೆಯು ಬಹಳ ಗುಣವತಿಯು.

ಮಂತ್ರಿ—ಮೂರನೆಯ ಗೃಹಸ್ಥನು ಗುಟ್ಟುಬಲ್ಲ ವ್ಯಾಪಾರಿಯು.

ಬೀರಬಲ್ಲ—ಮಹಾಸ್ವಾಮಿ! ಇಲ್ಲಿ ಕುಳಿತಿರುವ ದಯಾರಾಮ ಸೆಟ್ಟಿಯೇ ವ್ಯಾಪಾರದ ಗುಟ್ಟು ಬಲ್ಲವನು. ನಾನು ಪರದೇಶಿಯಾದರೂ ಈತನು ಧೈರ್ಯಮಾಡಿ ನನಗೆ ಹತ್ತು ಸಾವಿರ ರೂಪಾಯಿ ಸಾಲ ಕೊಟ್ಟು ದಲ್ಲದೆ, ನಾನು ರಾಜಶಾಸನಕ್ಕೆ ಗುರಿಯಾದಾಗ ಕನಿಕರದಿಂದ ನನ್ನನ್ನು ಪಾರು ಮಾಡಲಿಕ್ಕೆ ಬಲು ತೊಂದರೆ ಪಟ್ಟನು. ಈ ಒಳ್ಳೆಯತನದಿಂದ ಅವನ ಹಣವು ಬಡ್ಡಿಸಹಿತವಾಗಿ ಅವನಿಗೆ ಹಿಂತಿರುಗಿ ಬರುವುದಲ್ಲದೆ, ನಾನು ಸಾಯುವ ವರೆಗೂ ಅವನಿಗೆ ಕೃತಜ್ಞನಾಗಿರುವೆನು. ಸಾಲಗಾರರ ಮನೆ ಮುರಿದು ತಮ್ಮ ಹಣವನ್ನು ಮುಟ್ಟಿಸಿಕೊಳ್ಳುವುದಕ್ಕಿಂತ ಅವರಿಗೆ ನೆರವಾಗಿ ಅವರಿಂದ ತಮ್ಮ ದುಡ್ಡು ಬರಮಾಡಿಕೊಳ್ಳುವುದೇ ವ್ಯಾಪಾರದ ಗುಟ್ಟು. ಈ ರಹಸ್ಯವನ್ನು ದಯಾರಾಮ ಸೆಟ್ಟಿಯು ಚೆನ್ನಾಗಿ ಅರಿತಿದ್ದಾನೆ. ಆದರೆ ಮಥುರಾದಾಸನಿಗೆ ಈ ವಿಷಯವೇ ಗೊತ್ತಿಲ್ಲ. ಅವನು ಸಿರಿಯಿಂದ ಸೊಕ್ಕಿ ಉಬ್ಬಿರುತ್ತಾನೆ. ಆದ್ದರಿಂದ ಸಿರಿಯು ಅವನಿಂದ ಬೇಗನೆ ತೊಲಗುವಳು.

ಈ ಮಾತನ್ನು ಕೇಳಿ ಎಲ್ಲರೂ ಹಿಗ್ಗಿ ತಲೆದೂಗಿದರು. "ದಯಾ ರಾಮ ಸೆಟ್ಟಿಗೆ ಜಯವಾಗಲಿ, ಅವನು ಸಾವಿರ ವರುಷ ಬಾಳಲಿ," ಎಂದು ಎಲ್ಲರೂ ಕೂಗಿದರು.

ಮಂತ್ರಿ—ಆನೆಯ ಮತ್ತು ಕಡೆಯ ಪದಾರ್ಥವು ಕಣ್ಣಿದ್ದ ಕುರುಡನು.

ಬೀ.—ಮಹಾರಾಜರೇ, ಇದು ಬಲುಗಡಚಾದ ವಿಷಯವು. ಇದನ್ನು ಹೇಳಲಿಕ್ಕೆ ಹೆದರಿಕೆಯಾಗುತ್ತದೆ. ಆದರೂ ಮಹಾಸ್ವಾಮಿಗಳು ಹೆದರ ಬೇಡೆಂದು ಅಪ್ಪಣೆ ಕೊಡಿಸುವುದರಿಂದಲೂ ಸ್ವಾಮಿಕಾರ್ಯವನ್ನು ಮುಗಿಸು ವುದು ನನ್ನ ಕರ್ತವ್ಯವಾದ್ದರಿಂದಲೂ ಈ ಕಣ್ಣಿದ್ದ ಕುರುಡನನ್ನು ನಾನು ತೋರಿಸಬೇಕಾಗಿದೆ. ಕಂಡುದನ್ನು ಆಡಿದರೆ ಕೆಂಡದಂತಹ ಸಿಟ್ಟು ಎಂಬ ಗಾದೆಯು ಇಲ್ಲಿ ನೆರೆದಿರುವವರೆಲ್ಲರಿಗೂ ಗೊತ್ತಿರುವುದು. ಸರಕಾರದವರು ಜಾತಿ, ಬಣ್ಣ, ನಂಟತನ ಮುಂತಾದವುಗಳ ಕಡೆಗೆ ಏನೂ ಲಕ್ಷ್ಯ ಕೊಡದೆ ಗುಣೈಕಪಕ್ಷಪಾತಿಗಳಾಗಿ ತಮ್ಮ ಅಧಿಕಾರಿಗಳನ್ನು ನೇಮಿಸಿದರೆ ಮಾತ್ರ ಅಂತಹ ಅಧಿಕಾರಿಗಳು ಕುರುಡರಾಗುವುದಿಲ್ಲ. ಹಾಗೆ ಮಾಡದೆ ಕೀಳ್ತರದ

ಜನರನ್ನು ಅವರ ಬಣ್ಣದ ಪಕ್ಷಪಾತದಿಂದಾಗಲಿ ಜಾತಿಯ ಪಕ್ಷಪಾತದಿಂದಾಗಲಿ ಆರಿಸಿದರೆ ಅಧಿಕಾರಮದದಿಂದ ಅವರ ಕಣ್ಣು ಮಬ್ಬಾಗಿ ಅವರು ಕುರುಡರಾಗುವುದೇ ನಿಶ್ಚಯ.

ಜನರು—“ತಿಳಿಯಿತು. ತಿಳಿಯಿತು. ಸೋಮಶೇಖರನೇ ಕಣ್ಣಿದ್ದ ಕುರುಡನು” ಎಂದು ಕೂಗಿದರು.

ಬೀ.—ತಮ್ಮ ಕಾಯಾಸ (ಅನೂಮಾನ)ವು ಸರಿಯಾಗಿರುತ್ತದೆ. ಈ ಮಹಾತ್ಮನು ತನ್ನ ಅಧಿಕಾರದ ಕೊಬ್ಬಿನಿಂದ ಸ್ವಾರ್ಥೈಕದೃಷ್ಟಿಯುವನಾಗಿ ಆಪ್ತತ್ವವನ್ನೂ ಸ್ನೇಹವನ್ನೂ ಉಪಕಾರವನ್ನೂ ಲೆಕ್ಕಿಸದೆ, ಅರಸುಮಗನ ಕೊಲೆಯಾದ್ದು ದಿಟವೋ ಸಟಿಯೋ ಎಂಬುದನ್ನು ಎಣಿಕೆಗೆ ತಾರದೆ ನನ್ನನ್ನು ಮರಣಶಿಕ್ಷೆಗೆ ಗುರಿ ಮಾಡಿದನು!! ಹುಟ್ಟು ಕುರುಡನಾದರೂ ಹೀಗೆ ಮಾಡಬಹುದೇ?



ಜ.—ಎಂದೂ ಮಾಡಲಿಕ್ಕಿಲ್ಲ. ಇವನು ಕಣ್ಣಿನಿಂದ ಮಾತ್ರವೇ ಕುರುಡನಲ್ಲ; ಅಧಿಕಾರದ ಅಮಲಿನಿಂದ ಇವನ ಮನಸ್ಸು ಕುರುಡಾಗಿರುತ್ತದೆ.

ಬೀ.—ಮಹಾರಾಜನೇ, ಈ ಜನರ ಹೇಳಿಕೆಯು ಅಕ್ಷರಶಃ ನಿಜವಾಗಿರುತ್ತದೆ. ತಾವು ಬೇಡಿದ ನಾಲ್ಕು ಪದಾರ್ಥಗಳನ್ನು ಸೇವಾನುಸೇವಕನು ಒಪ್ಪಿಸಿರುತ್ತಾನೆ. ಪರಮಾನುಗ್ರಹದಿಂದ ಅವುಗಳನ್ನು ಸ್ವೀಕರಿಸಿ ತಲಪಿದ ಬಗ್ಗೆ ಪತ್ರವನ್ನು ಬರೆಯಿಸಿ ಕೊಟ್ಟರೆ, ನಾನು ಹಿಂದಿರುಗಿ ಹೋಗಿ, ನಮ್ಮ ದೊರೆಗೆ ಅದನ್ನು ಮುಟ್ಟಿಸಿ, ನನ್ನ ತಲೆಯ ಮೇಲಿರುವ ರಾಜಕಾರ್ಯದ ಹೊರೆಯನ್ನು ಇಳಿಸಿಕೊಳ್ಳುವೆನು. ಪರದೇಶಿಯಾದ ನನ್ನ ಮೇಲೆ ಅನುಗ್ರಹಮಾಡಿ ಬೇಗನೆ ಅಪ್ಪಣೆ ಕೊಡಿಸಬೇಕೆಂದು ಸೆರಗೊಡ್ಡಿ ಬೇಡಿಕೊಳ್ಳುತ್ತೇನೆ.

ಅರಸು—ಬೀರಬಲ್ಲನೇ! ಇತ್ತ ಬಾ, ಮೇಲೆ ಕುಳಿತುಕೊ. ನಿನ್ನ ಚಮತ್ಕಾರವನ್ನು ನೋಡಿ ಬೆರಗಾದೆನು. ನಿನ್ನ ಧೈರ್ಯಸಾಹಸಚಾತುರ್ಯ ದೂರದರ್ಶಿತ್ವಗಳನ್ನು ನೋಡಿ ಬಲುಮೆಚ್ಚಿದೆನು. ನಿನ್ನ ಜಾಣ್ಮೆಗೆ ಎಣೆಯಿಲ್ಲ. ನಿನ್ನ ಬುದ್ಧಿಯು ಬೃಹಸ್ಪತಿಯ ಬುದ್ಧಿಗೆ ಸಮಾನವಾದುದು. ನಿನ್ನಂತಹ ಸೇವಕನಿರುವ ಅಕ್ಬರ ಬಾದಶಹನು ಬಹು ಧನ್ಯನು. ಅವನ

ಪೂರ್ವಜನ್ಮದ ಪುಣ್ಯದಿಂದ ಅವನಿಗೆ ನೀನು ದೊರೆತಿರುತ್ತಿ. ಜಾಣ್ಮೆಯೇ ಎಲ್ಲ ಇಷ್ಟಾರ್ಥಕ್ಕೆ ಮುಖ್ಯ ಸಾಧನವು. ಆ ಜಾಣ್ಮೆಯು ನಿನ್ನಲ್ಲಿ ಮೂರ್ತಿ ಮತ್ತಾಗಿ ನೆಲೆಗೊಂಡಿದೆ. ನೀನು ಮಹಾಪುರುಷನು. ನಿನ್ನನ್ನು ಹೆಚ್ಚು ಬಹುಮಾನ ಕೊಟ್ಟು ನಮ್ಮ ಆಶ್ರಯದಲ್ಲಿಟ್ಟುಕೊಳ್ಳಬೇಕೆಂದು ಆಸೆಪಡು ತ್ತೇವೆ. ನೀನು ಇಲ್ಲಿ ನಿಂತರೆ ನಿನಗೆ ಯಾವ ಕೊರತೆಯೂ ಬಾರದಂತೆ ನೋಡಿಕೊಂಡು ನಡಿಸುವೆವು.

ಬೀ.—ಮಹಾರಾಜನೆ, ನಾನು ತಮಗೆ ಅತ್ಯಂತ ಕೃತಜ್ಞನಾಗಿದ್ದೇನೆ. ತಾವು ಏನು ಕೊಟ್ಟರೂ ನಾನು ನನ್ನ ಒಡೆಯನನ್ನು ಬಿಟ್ಟು ಇರಲಾರೆನು. ದಯವಿಟ್ಟು ಕ್ಷಮಿಸಿರಿ.

ಅ.—ಒಳ್ಳೆಯದು. ನಿನ್ನ ಕೋರಿಕೆಯಂತೆಯೇ ಆಗಲಿ. ನಾವು ಬೇಡಿದ ಎಲ್ಲ ಪದಾರ್ಥಗಳು ಸರಿಯಾಗಿ ತಲಪಿದವು. ಅದರಂತೆ ಪತ್ರ ವನ್ನು ಬರೆದು ನಮ್ಮ ಮಂತ್ರಿಯು ನಿನಗೆ ಕೊಡುವನು. ನೀನು ಇಲ್ಲಿ ನಿಲ್ಲಲಿಕ್ಕೆ ಒಡಂಬಡುವುದಿಲ್ಲವಾದ್ದರಿಂದ ನಮ್ಮ ಪ್ರೀತಿಯ ಗುರುತಿಗಾಗಿ ನಮ್ಮ ಬೆರಳಲ್ಲಿರುವ ಈ ವಜ್ರದುಂಗುರವನ್ನು ನಿನಗೆ ಕೊಡುತ್ತೇವೆ. ಇದನ್ನು ಬೆರಳಲ್ಲಿಟ್ಟುಕೋ.

ಬೀ.—ಮಹಾರಾಜರ ಪ್ರೀತಿಗೆ ಮೇರೆಯೇ ಇಲ್ಲ. ನಾನು ತಮಗೆ ಬಹಳ ಕೃತಜ್ಞನಾಗಿರುತ್ತೇನೆ, ಮಹಾಸ್ವಾಮಿಗಳ ಉಪಕಾರವನ್ನು ಎಂದೂ ಮರೆಯಲಾರೆನು (ಎಂದು ಉಂಗುರವನ್ನು ಬೆರಳಲ್ಲಿಟ್ಟುಕೊಳ್ಳುತ್ತಾನೆ).

ಅರ.—ಬೀರಬಲ್ಲನೇ, ಈ ನಿನ್ನ ಹೆಂಡತಿಯು ಮೋಸ ಹೋದಳು. ಈಕೆಯು ಪತಿದ್ರೋಹಿಯೇ ಸರಿ. ಆದರೆ ಈಕೆಯ ಹೆಡ್ಡತನವನ್ನು ಕ್ಷಮಿಸು. ಈಕೆಯು ಹುಡುಗಿ, ಅನುಭವವಿಲ್ಲದವಳು. ಸೋಮಶೇಖ ರನು ತನ್ನ ನೆಂಟನೆಂಬ ನಂಬಿಕೆಯಿಂದ ಮೊದಲು ತನಗೆ ತಿಳಿದ ಸಂಗತಿ ಯನ್ನು ಹೇಳಿ, ಹಿಂದುಗಡೆ ತಾನು ಹೇಳಿದ್ದನ್ನು ಮುಚ್ಚಿಕೊಳ್ಳಲಿಕ್ಕೆ ಎತ್ತು ಗಡೆ ಮಾಡಿದಳು. ಈಕೆಯು ದಡ್ಡಳು. ಆದರೂ ಚಿಕ್ಕವಳಾದ್ದರಿಂದ ಕ್ಷಮಾರ್ಹಳು. ಈ ರೂಪವತಿಯು ದೇಹವಿಕ್ರಯಿಯಾದರೂ ಸದ್ಗುಣ ವಂತಳೆನ್ನಲಿಕ್ಕೆ ಅಡ್ಡಿಯಿಲ್ಲ. ಈ ದಯಾರಾಮ ಸೆಟ್ಟಿಯು ವ್ಯಾಪಾರದ

ರಹಸ್ಯವನ್ನು ಚೆನ್ನಾಗಿ ಅರಿತವನೇ ಸರಿ. ಆದರೆ ಈ ಸೋಮಶೇಖರನು ಮದಾಂಧನೂ ಕೃತಘ್ನನೂ ವಿಚಾರಶೂನ್ಯನೂ ಆಗಿರುತ್ತಾನೆಂದು ನಾವು ಮನಗಂಡೆವು. ಈ ಹೊತ್ತಿನ ವರೆಗೆ ಇವನು ನಮ್ಮ ಕಯ್ಯಿಂದ ಎಷ್ಟು ಅನ್ಯಾಯ ಮಾಡಿಸಿರುತ್ತಾನೆಯೋ ದೇವರೇ ಬಲ್ಲ. ಇವನು ನಮ್ಮ ಆಡಳಿತಕ್ಕೆ ಕುಂದು ತಂದನು. ಆದ್ದರಿಂದ ಇವನನ್ನು ನಾವು ಕೆಲಸದಿಂದ ದೂರ ಮಾಡಿರುತ್ತೇವೆ.

ಈ ತೀರ್ಪನ್ನು ಕೇಳಿ ಎಲ್ಲ ಸಭಿಕರೂ ಪೂಜ್ಯಬುದ್ಧಿಯಿಂದ ಎದ್ದು ನಿಂತು "ಮಹಾರಾಜರಿಗೆ ಜಯವಾಗಲಿ" ಎಂದು ಮೂರು ಸಾರಿ ಒತ್ತಿ ಕೂಗಿದರು. ಬಳಿಕ ದರಬಾರು ಬರಖಾಸ್ತಾಯಿತು.



ಬೀರಬಲ್ಲ

## ೩. ಪ್ರಧಾನರಸ, ಜೀವನಾಧಾರ, ಕೃತಜ್ಞತೆ, ಕೃತಘ್ನತೆ.

ಒಂದು ದಿವಸ ಅಕ್ಬರ ಬಾದಶಹನು ಓಲಗದಲ್ಲಿರುವಾಗ ರಾಜ್ಯದ ಕೆಲಸವು ಬೇಗನೆ ಮುಗಿದುದರಿಂದ ಅವನಿಗೆ ತುಸು ಬಿಡುವು ದೊರೆಯಿತು.

ಆಗ ಅವನು ಸಭಿಕರನ್ನು ನೋಡಿ “ಗೆಳೆಯರೆ, ನನಗೆ ನಾಲ್ಕು ಪದಾರ್ಥಗಳನ್ನು ನೋಡಬೇಕೆಂದು ಕುತೂಹಲವಿದೆ. ತಮ್ಮಲ್ಲಿ ಯಾರಾದರು ಅವುಗಳನ್ನು ತಂದು ತೋರಿಸಿದರೆ, ನಾನು ಅವರ ಉಪಕಾರವನ್ನು ಎಣಿಸುವೆನಲ್ಲದೆ ಅವರಿಗೆ ಬಹುಮಾನವನ್ನು ಕೊಡುವೆನು. ಆ ಪದಾರ್ಥಗಳಾವುವೆಂದರೆ—೧. ಪ್ರಧಾನರಸ, ೨. ಜೀವನಾಧಾರ, ೩. ಕೃತಜ್ಞತೆ, ೪ ಕೃತಘ್ನತೆ.

ಈ ಮಾತನ್ನು ಕೇಳಿ ಸರದಾರರು ಬೆರಗಾಗಿ ಒಬ್ಬರ ಮೋರೆಯನ್ನೊಬ್ಬರು ನೋಡ ತೊಡಗಿದರು. ಯಾರೂ ಬದಲು ಹೇಳದೆ ಇರುವುದನ್ನು ಕಂಡು, ಬಾದಶಹನು ಬೀರಬಲ್ಲನ ಕಡೆ ನೋಡಿದನು.

ಬೀರ.—ಖುದಾವಂದ! ತಾವು ಬೇಡುವ ಪದಾರ್ಥಗಳು ಸುಲಭಸಾಧ್ಯವಾಗಿರುತ್ತವೆ. ಅವುಗಳನ್ನು ಹೊಂದುವುದಕ್ಕೆ ತೊಂದರೆ ಏನೂ ಇಲ್ಲ.

ಬಾದ.—(ಸೋಜಿಗಗೊಂಡು) ಹಾಗೆಯೋ! ಹಾಗಾದರೆ ಅವುಗಳನ್ನು ನಾಳೆ ತಂದು ತೋರಿಸುವೆಯಾ?

ಬೀ.—ಏಕೆ ಆಗಬಾರದು? ನಾಳೆಯೇ ತಂದು ತಮಗೆ ತೋರಿಸುವೆನು.

ದರಬಾರು ಮುಗಿದ ಬಳಿಕ ಬೀರಬಲ್ಲನು ಮನೆಗೆ ಹೋಗಿ ೨ ಜಳಜಳ ಕುಪ್ಪಿಗಳನ್ನು ತರಿಸಿ, ಒಂದರಲ್ಲಿ ಉಪ್ಪನ್ನೂ ಮತ್ತೊಂದರಲ್ಲಿ ನೀರನ್ನೂ ಹಾಕಿ ಮರುದಿವಸ ದರಬಾರಿಗೆ ಹೋಗಿ ಬಾದಶಹನ ಮುಂದೆ ಆ ಎರಡು ಕುಪ್ಪಿಗಳನ್ನು ಇಟ್ಟು ಕೈಮುಗಿದು, “ಜೀಯಾ! ಮೊದಲನೆಯ ಕುಪ್ಪಿಯಲ್ಲಿ ಉಪ್ಪಿರುತ್ತದೆ.” ‘ಷಣ್ಣಾಂ ರಸಾನಾಮ್ ಲವಣಂ ಪ್ರಧಾನಂ’ ಎಂದು ಶಾಸ್ತ್ರವು ಹೇಳುವುದರಿಂದ ಇದೇ ತಾವು ಬೇಡಿದ ಪ್ರಧಾನರಸವು. ಎರಡನೆಯ ಕುಪ್ಪಿಯಲ್ಲಿ ನೀರು ಇರುತ್ತದೆ. ಇದು ಜೀವನಾಧಾರವೆಂಬುದಕ್ಕೆ ಎಲ್ಲರೂ ಒಡಂಬಡುವರು. ಬೇನೆ ಬಂದಾಗ ಅನ್ನ ಹೋಗದಿದ್ದರೂ ಜೀವ ಹಿಡಿಯಲಿಕ್ಕೆ ನೀರು ಬೇಕಾಗುತ್ತದೆ. ಆದ್ದರಿಂದ ಸಂಸ್ಕೃತದಲ್ಲಿ

ನೀರಿಗೆ ಜೀವನವೆಂಬ ಹೆಸರುಂಟು ಆದಕಾರಣ ತಾವು ಬೇಡಿದ ಪ್ರಧಾನ ರಸ—ಜೀವನಾಧಾರವೆಂಬ ಎರಡು ಪದಾರ್ಥಗಳನ್ನೂ ತಮಗೆ ಒಪ್ಪಿಸಿ ದಂತಾಯಿತು.

ಬಾದ.—(ಬೆರಗಾಗಿ, ತಲೆದೂಗಿ) ಉಳಿದ ಎರಡು ಪದಾರ್ಥಗಳೆಲ್ಲಿ?

ಬೀ.—ದೊರೆಗಳೇ, ಆ ಎರಡು ಜೀನಸುಗಳೂ ಇಲ್ಲಿಯೇ ಇರುತ್ತವೆ. ಇಲ್ಲಿ ಮಲಗಿರುವ ತಮ್ಮ ನಾಯಿಯು ಕೃತಜ್ಞೆಯ ಕುರುಹಾಗಿರುತ್ತದೆ. ಒಡೆಯನು ಅದನ್ನು ಎಷ್ಟು ಹೆದರಿಸಿದರೂ ಹೊಡೆದರೂ ಅದು ತನಗೆ ಅನ್ನ ಹಾಕಿದವನನ್ನು ಎಂದೂ ಮರೆಯದು. ಕೃತಜ್ಞತೆಯು ಅದರ ಜೀವದಲ್ಲಿ ಬೆರೆತುಕೊಂಡಿರುವುದರಿಂದ ಅದು ತನ್ನ ಒಡೆಯನಿಗಾಗಿ ಪ್ರಾಣವನ್ನಾದರೂ ಕೊಡಲಿಕ್ಕೆ ಅನುವಾಗಿರುತ್ತದೆ.

ಬಾದ.—ಅಹುದು, ಬೀರಬಲ್ಲ, ಅಹುದು. ಈ ನಾಯಿಯಂತಹ ಕೃತಜ್ಞತೆಯುಳ್ಳ ಮತ್ತಾವ ಪ್ರಾಣಿಯನ್ನೂ ನಾನು ಇದು ವರೆಗೆ ನೋಡಿಲ್ಲ. ಮತ್ತು ಕೇಳಿಲ್ಲ. ಆದರೆ ಕೃತಘ್ನನನ್ನು ತೋರಿಸಲಿಲ್ಲವಲ್ಲಾ!

ಬೀ.—ಮಹಾರಾಜನೇ, ಬಡಸೇವಕನನ್ನು ಕ್ಷಮಿಸಬೇಕು. ಈ ದರಬಾರಿನಲ್ಲೇ ಎಷ್ಟೋ ಜನರು ಕೃತಘ್ನರಿರುತ್ತಾರೆ. ಅವರೊಳಗೆ ಕೆಲ ವರು ತಮ್ಮ ಸಮೀಪದ ನಂಟರು. ಅವರ ಹೆಸರನ್ನು ಹೇಳಿದರೆ ಅವರು ನನ್ನ ಮೇಲೆ ನಂಜುಕಾರುವರು, ನನ್ನ ಕೇಡು ಬಗೆಯುವರು, ನನ್ನ ಪೀಳಿಗೆ ಯನ್ನೇ ಹಾಳು ಮಾಡುವರು. ಆದ್ದರಿಂದ ದಯವಿಟ್ಟು ಅವರ ಹೆಸ ರನ್ನು ನನ್ನ ಬಾಯಿಂದ ಆಡಿಸಬೇಡರಿ. ನಾನು ಬಡವ, ದಿಕ್ಕಿಲ್ಲದವ.

ಬಾದ.—(ಕುತೂಹಲ ಹೆಚ್ಚಿ) ಬೀರಬಲ್ಲನೇ, ಹೆದರಬೇಡ. ನಾನಿ ರುವ ವರೆಗೆ ಯಾರೂ ನಿನ್ನ ಕೂದಲನ್ನೂ ಕೊಂಕುಮಾಡಲಾರರು. ಆ ಕೃತಘ್ನರನ್ನು ತೋರಿಸು.

ಬೀರ.—ಮಹಾರಾಜನೇ ನಾನು ಬಡಹಾರವನು. ಅವರಾದರೋ ತಮ್ಮ ನಂಟರು. ತಮ್ಮ ಹೆದರಿಕೆಗೋಸ್ಕರ ಅವರು ಹಗೆಯನ್ನು ಹೊರಗೆ ತೋರಿಸದಿದ್ದರೂ, ಮನಸ್ಸಿನಲ್ಲಿ ಕುದಿದು, ಪರ್ಯಾಯದಿಂದ ತಮ್ಮ ಕಿವಿ

ಯೂದಿ ನನ್ನನ್ನು ಕೆಡಿಸಬಹುದು. ಆದ್ದರಿಂದ ಆ ಕೆಲಸವೊಂದನ್ನು ದಯ ವಿಟ್ಟು ಹೇಳಬೇಡರಿ.

ಬಾದ.—ನೀನು ದೊಡ್ಡ ಎದೆಗಾರನು. ತೋಫಿನ (ಫಿರಂಗಿಯ) ಗುಂಡಿಗೂ ಹೆದರದವನು. ಈಗ ಇಷ್ಟು ಅಂಜುವುದನ್ನು ನೋಡಿ ಆಶ್ಚರ್ಯ ಗೊಳ್ಳುತ್ತೇನೆ. ಅವರು ನಿನ್ನ ವಿರುದ್ಧವಾಗಿ ಏನು ಹೇಳಿದರೂ ನಾನು ಕೇಳುವುದಿಲ್ಲವೆಂದು ಕುರಾಣದ* ಆಣೆಯಿಟ್ಟು ಹೇಳುತ್ತೇನೆ. ಇನ್ನಾದರೂ ಧೈರ್ಯಮಾಡುವಿಯಾ? ಬೆದರಬೇಡ. ನಿನಗೆ ಎಳ್ಳಷ್ಟಾದರೂ ಕೇಡಾಗ ಗೊಡುವುದಿಲ್ಲ. ತಟ್ಟನೆ ಹೇಳು.

ಬೀ.—ಮಹಾಸ್ವಾಮಿಾ, ನನಗೆ ಹಾನಿತಟ್ಟದಂತೆ ಮಾಡುವುದು ತಮ್ಮನ್ನು ಕೂಡಿದೆ. ತಾವು ಹಟ ಹಿಡಿದುದರಿಂದ ಹೇಳುತ್ತೇನೆ ಕೇಳಿರಿ. ಅಳಿಯಂದಿರೆಲ್ಲರು ಕೃತಘ್ನರೇ ಸರಿ. (ಬಾದಶಹನ ಅಳಿಯನ ಕಡೆಗೆ ಬೊಟ್ಟು ತೋರಿಸಿ) ಇಲ್ಲಿ ಕುಳಿತಿರುವ ತಮ್ಮ ಅಳಿಯನು ಕೃತಘ್ನತೆಯ ಮೂರ್ತಿ ಎನ್ನಲಿಕ್ಕೆ ಏನೂ ಅಡ್ಡಿಯಿಲ್ಲ. ಅವನಿಗೆ ತಾವು ಎಷ್ಟು ಕೊಟ್ಟರೂ ಕೊಂಡರೂ ಆದರೋಪಚಾರಮಾಡಿದರೂ ಅನುವುತನುವು† ನೋಡಿದರೂ ಅದನ್ನೆಲ್ಲಾ ಕೂಡಲೆ ಮರೆತು "ನನಗೆ ಏನು ಕೊಟ್ಟಿದ್ದಾರೆ? ಏನು ಮಾಡಿದ್ದಾರೆ? ಇವರ ಹಂಗು ನನಗೇನು? ಇವರು ನನ್ನವರೆಂದು ನಾನು ಏಕೆ ಹುರುಡುಪಡೆಯಬೇಕು?" ಎಂದು ಯಾವಾಗಲು ಗುಣಗುಟ್ಟುವು ದನ್ನು ತಾವು ಕೇಳಿರಬಹುದು. ಅಳಿಯನಿಗಿಂತ ಹೆಚ್ಚು ಕೃತಘ್ನನನ್ನು ಕಲ್ಪನೆ ಮಾಡುವುದು ಅಸಂಭವವೆಂದು ತೋರುತ್ತದೆ.

ಬೀರಬಲ್ಲನ ಈ ಮಾತನ್ನು ಕೇಳಿ ಎಲ್ಲರೂ ಗಹಗಹಿಸಿ ನಕ್ಕರು. ಬಾದಶಹನು ಅತಿ ಸಂತುಷ್ಟನಾಗಿ,

ಬೀರಬಲ್ಲನೇ, ನಿನ್ನ ಬುದ್ಧಿಗೆ ಮೆಚ್ಚಿದೆನು. ನಿನ್ನ ಜಾಣ್ಮೆಗೆ ಎಣೆ ಯಿಲ್ಲ. (ಮೊಹರಿನ ಚೀಲವನ್ನು ಕೊಟ್ಟು) ಇಗೋ, ಈ ಬಹುಮಾನ ವನ್ನು ತೆಗೆದುಕೊ. ನೀನು ನರೋತ್ತಮನೇ ಸರಿ. ನಾನು ಅತಿ ಸಂತುಷ್ಟ ನಾದೆನು. ಈ ವಿಷಯವಾಗಿ ನಿನಗೆ ಯಾರೂ ಕೇಡು ಬಗೆಯ ಕೂಡ

---

* ಕುರಾಣ = ಮಹಮ್ಮದಿಯರ ಧರ್ಮಗ್ರಂಥ. † ಅನುವು = ವಿಪತ್ತು, ತನುವು = ಸಂತೋಷ.

ದೆಂದು ನಾನು ಸಾರಿ ಹೇಳುತ್ತೇನೆ. ನಿನಗೆ ಯಾರೂ ಏನೂ ಅಪಾಯ ವನ್ನು ಮಾಡ ಕೂಡದು. ಹಾಗೆ ಮಾಡಲು ಎತ್ತುಗಡೆ ಮಾಡಿದವರಿಗೆ ಮರಣಶಿಕ್ಷೆಯು ನಿಶ್ಚಯವೆಂದು ತಿಳಿ.

ಹೀಗೆ ಹೇಳಿ ಬಾದಶಹನು ದರಬಾರು ಮುಗಿಸಿ ಬೀರಬಲ್ಲನನ್ನು ತನ್ನ ಸಂಗಡ ಕರೆದುಕೊಂಡು ಅರಮನೆಗೆ ಹೊರಟು ಹೋದನು.

## ೪. ಸೋಜಿಗದ ಬೇಡಿಕೆ

೧೫೬೯ನೆಯ ಅಗಸ್ಟು ೩೦ನೆಯ ತಾರೀಖಿನ ದಿವಸ **ಜೋಧ ಬಾಯಿ**ಯು ಫತ್ತೇಪುರ ಸಿಕ್ರಿಯಲ್ಲಿ ಗಂಡುಮಗನನ್ನು ಹೆತ್ತಳೆಂಬ ಸುದ್ದಿಯು ದಿಲ್ಲಿಗೆ ಬಂತು. ಆಗ ಬಾದಶಹನು ಹೊಟ್ಟೆ ಹಿಡಿಯಲಾರದಷ್ಟು ಹಿಗ್ಗಿ ದನು. ಪಟ್ಟಣದಲ್ಲಿ ಬಂಡಿ ಬಂಡಿಯಿಂದ ಸಕ್ಕರೆ ಹಂಚಿದರು. ಊರಲ್ಲೆಲ್ಲ ಸೊಡರು ಹಬ್ಬವಾಯಿತು. ಎಲ್ಲೆಲ್ಲಿ ನೋಡಿದರೂ ಹಬ್ಬದ ಗುರುತುಗಳೇ ಕಾಣುತ್ತಿದ್ದವು. ಒಂದು ದಿನ ನಡುಹಗಲಲ್ಲಿ ಎಲ್ಲ ಬಡಬಗ್ಗರಿಗೂ ಊಟ ಹಾಕಬೇಕೆಂತಲೂ ಮತ್ತೊಂದು ದಿನ ಸಂಜೆಯಲ್ಲಿ ಎಲ್ಲ ಸರದಾರರಿಗೂ ರಾಯಭಾರಿಗಳಿಗೂ ದೊಡ್ಡ ಊಟ ನಾಚು ಹಾಡುಮಾಡಿಸಬೇಕೆಂತಲೂ ಗೊತ್ತಾಯಿತು. ಮೇಲಾದ ಹಾಡು ನಾಚಿನವರನ್ನು ಕೂಡಲೆ ಕಳುಹಿಕೊಡ ಬೇಕೆಂದು ಎಲ್ಲ ಸುಬೇದಾರರಿಗೂ ಆಜ್ಞಾಪತ್ರಗಳು ಹೊರಟವು. ಹೆಸರು ವಾಸಿಯಾದ ಗಾಯಕರೂ ನರ್ತಕಿಯರೂ ಬಂದು ಸೇರಿದರು. ಗೊತ್ತು ಮಾಡಿದ ದಿನ ಭೋಜನಸಮಾರಂಭವು ಮುಗಿಯಿತು. ಬೆಲೆಯುಳ್ಳ ಸಾರಾಯಗಳ ಪೀಪೆಗಳು ಹಾರಿ ಹೋದವು. ಕುಣಿತಹಾಡುಗಳಿಗೆ ಮೊದ ಲಾಯಿತು. ಶ್ರೋತೃಗಳೆಲ್ಲ ಸಾರಾಯಿಯ ಅಮಲಿನಿಂದಲೂ ನಾಚಿನ ಚತುರತೆಯಿಂದಲೂ ನರ್ತಕಿಯರ ಅಂದಚಂದಗಳಿಂದಲೂ ಗಾಯನದ ಇಂಪಾದ ಸ್ವರದಿಂದಲೂ ಬೆರಗಾಗಿ ತಲ್ಲೀನರಾದರು. 'ಅಚ್ಛಾ' 'ವಾಹವಾ' 'ಶಹಬಾಸ್' ಎಂಬ ಶಬ್ದಗಳು ನರ್ತಕಿಯರ ಮೇಲೆ ಹೂಮಳೆಯಂತೆ ಒಂದೇ ಸವನೆ ಸುರಿದವು. ಬಾದಶಹನು ಬಲು ಮೆಚ್ಚಿ ಎಲ್ಲರಿಗಿಂತ ಹೆಚ್ಚು ಜಾಣೆಯಾದ ಒಬ್ಬ ನರ್ತಕಿಯನ್ನು ಕುರಿತು, "ನಾನು ನಿನ್ನ ಜಾಣತನಕ್ಕೆ ತುಂಬಾ ಮೆಚ್ಚಿದೆನು. ನಿನಗೆ ಬೇಕಾದುದನ್ನು ಬೇಡು" ಎಂದನು.

ನರ್ತಕಿ—ಪ್ರಭುವರ್ಯರೇ! ತಾವು ಮೆಚ್ಚಿದಿರೆಂದು ಹೇಳಿದ್ದನ್ನು ಕೇಳಿ ಧನ್ಯಳಾದೆನು. ಸಾಮಾನ್ಯವಾಗಿ ಜನರು ಆನಂದಭರದಲ್ಲಿ ಆಡಿದಂತೆ ಮಾಡುವುದಿಲ್ಲ. ಮಹಾರಾಜರು ಇಷ್ಟು ಹೊಗಳಿದ್ದೇ ನನಗೆ ಸಾಕು.

ಬಾದ.—ನಾನು ಸಾಮಾನ್ಯ ಜನರಂತಲ್ಲ. ಆಡಿದಂತೆ ಮಾಡಲಿಕ್ಕೆ ತಪ್ಪುವವನಲ್ಲ. ಬೇಕಾದ್ದನ್ನು ಬೇಡು, ಕೊಡುವೆನು.

ನರ್ತ.—ಮಹಾಪ್ರಭೋ! ತಮ್ಮ ಹೆಸರು ಎಲ್ಲ ಕಡೆಯಲ್ಲಿಯೂ ಹಬ್ಬಿರುತ್ತದೆ. ತಾವು ಎಷ್ಟೋ ಜನರಿಗೆ ಅನ್ನಅರಿವೆಯುಂಬಳಿಗಳನ್ನು ಕೊಟ್ಟು ಸಲಹುತ್ತಿರುವಿರೆಂಬುದನ್ನು ಕೇಳಿ ಬಲ್ಲೆನು. ಆದರೆ ಅವೆಲ್ಲ ದೇವರ ಕೃಪೆಯಿಂದ ನನಗೂ ಉಂಟು. ಅವು ನನಗೆ ಬೇಡ.

ಬಾದ.—ನಿನಗೆ ಬಯಕೆಯಾದ್ದನ್ನು ಕೇಳು. ನೀನು ಕೇಳಿದ್ದು ಸಾಧ್ಯವಿದ್ದರೆ ಕೊಡುವೆನು.

ನರ್ತ.—ನನ್ನ ಬಯಕೆಯು ತಮಗೆ ಅಸಾಧ್ಯವಲ್ಲ. ಆದರೆ ತಾವು ಅದನ್ನು ಪುರೈಸುವಿರೋ ಇಲ್ಲವೋ ಎಂಬ ಬಗ್ಗೆ ಸಂಶಯವುಂಟು.

ಬಾದ.—ಸಂಶಯಪಡಬೇಡ. ಸಾಧ್ಯವಿದ್ದರೆ ನಾನು ನಿಶ್ಚಯವಾಗಿ ನಿನ್ನ ಕೋರಿಕೆಯನ್ನು ಈಡೇರಿಸುವೆನು.

ನರ್ತ.—ಮಹಾಸ್ವಾಮಿ, ತಾವು ತರುವಾಯ ಹಿಂತೆಗೆದರೆ ಅಥವಾ ಸಿಟ್ಟಾದರೆ ನನಗೆ ಕೇಡು ಉಂಟಾಗುವುದು. ಆದ್ದರಿಂದ ನನಗೆ ಹೇಳಲಿಕ್ಕೆ ಧೈರ್ಯಸಾಲದು.

ಬಾದ.—ನೀನು ಹೆದರಲಿಕ್ಕೆ ಏನೂ ಕಾರಣವಿಲ್ಲ. ಈ ಅಕ್ಬರ ಬಾದಶಹನು ಒಂದೇ ಮಾತಿನವನು. ಕೊಟ್ಟ ಮಾತಿಗೆ ತಪ್ಪುವವನಲ್ಲ. ಅಂಜದೆ ನಿನ್ನ ಇಚ್ಛೆಯನ್ನು ತಿಳಿಸು. ಅದನ್ನು ದಿಟವಾಗಿ ನಾನು ಪೂರ್ಣ ಮಾಡುವೆನು. ಅಂಜಬೇಡ, ಹೇಳು.

ನರ್ತ.—ಮಹಾರಾಜಾ! ಹಾಗಾದರೆ ಹೇಳುವೆನು. ನನ್ನ ಹುಚ್ಚು ಕೋರಿಕೆಗಾಗಿ ಕ್ಷಮಿಸಬೇಕು. ನನ್ನಲ್ಲಿ ಬಹಳ ದಿವಸದಿಂದ ಒಂದು ಬಯಕೆಯು ನೆಲೆಗೊಂಡಿರುತ್ತದೆ. ಅದನ್ನು ತಮ್ಮಂತಹ ಮಹಾಪ್ರಭು

ಗಳು ಪೂರ್ಣವಾದ ಬಲ್ಲರೇ ಹೊರತು, ಬೇರೆಯವರಿಂದ ಆಗದು. ನನ್ನ ಪೂರ್ವಜನ್ಮದ ಪುಣ್ಯದಿಂದ ಈ ಸುಸಂಧಿಯು ಈಗ ಒದಗಿರುತ್ತದೆ. ತಮ್ಮ ಸಿಂಹಾಸನದ ಮೇಲೆ ಮಲವಿಸರ್ಜನ ಮಾಡಬೇಕೆಂಬ ಬಯಕೆಯು ನನ್ನನ್ನು ಬಹಳ ದಿವಸದಿಂದ ಪೀಡಿಸುತ್ತದೆ. ನನ್ನನ್ನು ಕ್ಷಮಿಸಿ ಈ ಬಯಕೆಯನ್ನು ಪೂರ್ಣ ಮಾಡುವುದಕ್ಕೆ ಮಹಾರಾಜರೇ ಸಮರ್ಥರು.

ಈ ಅಪೂರ್ವದ ಬೇಡಿಕೆಯನ್ನು ಕೇಳಿ ಎಲ್ಲರೂ ಬೆರಗಾಗಿ ದಿಗಿಲುಗೊಂಡು ಹವ್ಹಾರಿ ಸುಮ್ಮನೇ ಕುಳಿತರು. ಬಾದಶಹನು ಮೋರೆ ಕೆಳಗೆ ಮಾಡಿದನು. ಯಾರಿಗೂ ಏನು ಹೇಳಲಿಕ್ಕೂ ಹೊಳೆಯಲಿಲ್ಲ. ಎಲ್ಲರೂ ದೆವ್ವಬಡಿದಂತೆ ಕುಳಿತರು. ಆಗ

ನರ್ತಕಿ— ಮಹಾಪ್ರಭೋ, ಏಕೆ ಸುಮ್ಮನಾದಿರಿ. ತಾವು ಒಂದೇ ಮಾತಿನವರು, ಆಡಿದಂತೆ ಮಾಡುವವರು, ನನ್ನಿಯು ತಮಗೆ ಹರಣಕ್ಕಿಂತ ಹೆಚ್ಚು. ಹೀಗಿದ್ದು ಈ ಬಡವಿಯ ಈ ಸಣ್ಣ ಬಯಕೆಯನ್ನು ಪೂರೈಸಲಿಕ್ಕೆ ತಡವೇಕೆ?

ಬಾದಶಹನು ನರ್ತಕಿಯ ಈ ಮರ್ಮಭೇದಕವಾದ ಮಾತನ್ನು ಕೇಳಿ, ಮನದಲ್ಲಿ ತಲ್ಲಣಿಸಿ, ಏನು ಹೇಳಬೇಕೆಂಬುದು ತೋರದೆ, ಕಕ್ಕವಿಕ್ಕಿಯಾಗಿ ಬೀರಬಲ್ಲನ ಕಡೆ ನೋಡಿದನು.

ಬೀರ.— ಪ್ರಭುವರರೇ! ಇದಕ್ಕೇಕಿಷ್ಟೊಂದು ಚಿಂತೆ! ಬೇಡಿದ್ದನ್ನು ಕೊಡುವೆವೆಂದು ತಾವು ಮಾತು ಕೊಟ್ಟಿರುತ್ತೀರಿ. ಇನ್ನು ಹಿಂದೆಗೆದರೆ, ಅಪಕೀರ್ತಿಗೆ ಗುರಿಯಾಗುವಿರಿ. ಅಪಕೀರ್ತಿಗಿಂತಲೂ ಸಾವೇ ಮೇಲು. ತಾವು ಉಮ್ಮಳಿಸುವ ಕಾರಣವಿಲ್ಲ. ನಾಳೆ ದರಬಾರಿಗೆ ಬಂದು ಸಿಂಹಾಸನದ ಮೇಲೆ ಮಲವಿಸರ್ಜನೆಯನ್ನು ಮಾಡಬಹುದೆಂದು ಆಕೆಗೆ ಹೇಳಿಬಿಡಿರಿ. ನಾನು ಆ ಸಂಬಂಧದ ಎಲ್ಲ ಏರ್ಪಾಡನ್ನೂ ಕಯ್ಗೊಳ್ಳುವೆನು. ತಾವು ಹಳಹಳಿಸುವ ಕಾರಣವಿಲ್ಲ.

ಬೀರಬಲ್ಲನ ಈ ಧೈರ್ಯದ ಮಾತುಗಳನ್ನು ಕೇಳಿ ಬಾದಶಹನು ಧೈರ್ಯಗೊಂಡು, ನರ್ತಕಿಗೆ— ನಾನು ಮಾತು ಕೊಟ್ಟಂತೆ ನಿನ್ನ ಬಯಕೆ

ಯನ್ನು ಈಡೇರಿಸುವೆನು. ನಾಳೆ ದರಬಾರಿಗೆ ಬಾ. ನಾನು ಆಡಿದಂತೆ ಮಾಡುವೆನು.

ನರ್ತ. — ರಾಜಾಧಿರಾಜರಿಗೆ ಜಯವಾಗಲಿ!! ಹರಿಶ್ಚಂದ್ರ-ಧರ್ಮ ರಾಜರ ತರುವಾಯ ತಾವೇ ಸತ್ಯವಂತರು, ದಿಟವಾದಿಗಳು. ತಾವು ದೇವತಾಂಶಸಂಭೂತರೆನ್ನಬಹುದು. ನನ್ನ ಬಹುದಿವಸದ ಕೋರಿಕೆಯನ್ನು ಪೂರ್ಣಮಾಡಿದ್ದರಿಂದ ನಾನು ಧನ್ಯಳಾದೆನು. ತಾವು ಹಿಂದೆಗೆಯು ವಿರೆಂದು ಕಾಯಾಸ ಕಟ್ಟಿದ್ದೆನು. ತಾವು ಹಾಗೆ ಮಾಡದ್ದರಿಂದ ತಮ್ಮ ಸ್ವಾಭಿಮಾನವನ್ನು ಎಷ್ಟು ಹೊಗಳಿದರೂ ಸಾಲದು. ನಾನು ಹೋಗಿ ನಾಳೆ ದರಬಾರಿಗೆ ಬರುವೆನು. ಅಪ್ಪಣೆ ದಯಪಾಲಿಸಬೇಕು.

ಆ ನರ್ತಕಿಯೂ ಉಳಿದ ಎಲ್ಲ ಸರದಾರರೂ ಹೋದ ಬಳಿಕ ಅಕ್ಬರ ಬೀರಬಲ್ಲರಿಬ್ಬರೇ ಉಳಿದರು.

ಅಕ್ಬರ — ಬೀರಬಲ್ಲನೇ! ಇದೊಂದು ದೊಡ್ಡ ಕುತ್ತು ಬಂತು. ಇಂತಹ ದೊಡ್ಡ ಇಕ್ಕಟ್ಟು ನನಗೆ ಎಂದೂ ಒದಗಿದ್ದಿಲ್ಲ. ಕಾಳಗಗಳಲ್ಲಿ ಜೀವದ ಮೇಲಿನ ಗಂಡಾಂತರಗಳೆಷ್ಟೋ ಬಂದವು. ದ್ರೋಹಿಗಳೂ ಹಗೆಗಳೂ ಎಷ್ಟೋ ಸಾರಿ ನನ್ನ ಪ್ರಾಣವನ್ನು ಹೀರಲಿಕ್ಕೆ ಎತ್ತುಗಡೆ ಮಾಡಿದರು. ಆದರೆ ನಾನು ಈ ಹುಚ್ಚು ಮುಂಡೆಯ ಬೇಡಿಕೆಗೆ ಹೆದರಿದಷ್ಟು ಎಂದೂ ಹೆದರಲಿಲ್ಲ. ಇದೆಂತಹ ಅಡನಾಡಿ ಬೇಡಿಕೆ! ನನ್ನ ಸಿಂಹಾಸನದ ಮೇಲೆ ಮಲವಿಸರ್ಜನೆ ಮಾಡಿದರೆ ಈ ರಂಡೆಗೆ ಏನು ಬರುವುದು? ಬಹಳ ಹಣ ಬೇಡಬಹುದು, ದರಬಾರಿನಲ್ಲಿ ಊಳಿಗ ಬೇಡಬಹುದು, ಅಥವಾ ಉಂಬಳಿ ಬೇಡಬಹುದೆಂದು ನಾನು ಊಹಿಸಿದ್ದೆನು. ಆದರೆ ಈ ಬೋಸಡಿಯು (ನೀಚಳು) ಎಂತಹ ಬೇಡಿಕೆಯನ್ನು ಬೇಡಿದಳು ನೋಡು. ಅವಳು ಮಲವಿಸರ್ಜನ ಮಾಡಿದ ಸಿಂಹಾಸನದ ಮೇಲೆ ನಾನು ಹೇಗೆ ಕೂಡಲಿ? ಅದರಲ್ಲಿ ಕೂಡುವುದು ಎಷ್ಟು ನಾಚಿಕೆಯ ಮಾತು!!!

ಬೀರ. — ಖುದಾವಂದ್. ಜನರು ಭಿನ್ನರುಚಿಯವರೆಂಬುದು ತಾವು ಅರಿತ ಮಾತೇ ಸರಿ. ಒಬ್ಬೊಬ್ಬರಿಗೆ ಒಂದೊಂದು ತರದ ಬಯಕೆ. ಆ ಬಯಕೆಗಳಿಗೆ ಕಟ್ಟೇ ಇಲ್ಲ. ಹಿಂದಕ್ಕೆ ಹರಿಶ್ಚಂದ್ರಕರ್ಣ ಮುಂತಾದವರು

ತಮ್ಮ ನಾಲಗೆಯನ್ನು ಕಾಯ್ದುಕೊಳ್ಳಲಿಕ್ಕೆ ಎಷ್ಟು ನೋವುಗೊಂಡರೆಂಬುದು ತಮಗೆ ಗೊತ್ತುಂಟು. ತಾವು ತಮ್ಮ ಮಾತನ್ನು ನಡಿಸಿದರೆ ಹೆಸರ ಪಡೆಯುವಿರಿ.

ಬಾದ.—ಬೀರಬಲ್ಲನೇ ಈ ಮುಂಡೆಗೆ ನಮ್ಮ ದ್ರೋಹಿಗಳಾರಾದರು ಹೀಗೆ ಕೇಳಬೇಕೆಂದು ಕಲಿಸಿಕೊಟ್ಟಿರಬಹುದೇನು ?

ಬೀರ.—ಮಹಾರಾಜನೇ ! ಕಲಿಸಿದ್ದರೂ ಕಲಿಸಿರಬಹುದು. ಆ ಬಗ್ಗೆ ವಿಚಾರಮಾಡುವುದು ಈಗ ವ್ಯರ್ಥಶ್ರಮವೆಂದು ನನ್ನ ಅಲ್ಪ ಮತಿಗೆ ತೋರುತ್ತದೆ. ಒದಗಿದ ಪರಿಣಾಮವನ್ನು ಹೋಗಲಾಡಿಸಿ ಬಳಿಕ ಕಾರಣ ವನ್ನು ಹುಡುಕಿ ಅದನ್ನು ಇಲ್ಲದಂತೆ ಮಾಡುವುದು ಅರಿತವರ ಕೆಲಸವು. ದೇವರು ನಮ್ಮ ಸತ್ವವನ್ನು ಪರಿಕಿಸಲಿಕ್ಕೆ ತರತರದ ಹಂಚಿಕೆ (ಉಪಾಯ) ಗಳನ್ನು ಮಾಡುತ್ತಾನೆ. ಅವನೇ ಈ ನರ್ತಕಿಗೆ ಪ್ರೇರಿಸಿರಬಹುದು; ಇಲ್ಲವೆ, ತಮ್ಮ ದ್ರೋಹಿಗಳ ಮುಖಾಂತರವಾಗಿ ಪ್ರೇರೇಪಿಸಿರಬಹುದು. ಹೇಗೇ ಆಗಿರಲಿ. ತಾವು ತಮ್ಮ ವಚನವನ್ನು ಪಾಲಿಸಬೇಕಲ್ಲವೇ ?

ಬಾದ.—ಪಾಲಿಸಲೇ ಬೇಕು ಮತ್ತು ಸಿಂಹಾಸನವನ್ನು ಹೊಲಸು ಮಾಡಗೊಡಬಾರದು. ಹೀಗೆ ಯಾವದಾದರೊಂದು ಹರವನ್ನು ಹುಡುಕಿ ತೆಗೆ. ನನ್ನ ಮಾನವು ಹೋಗುವ ಹೊತ್ತು ಬಂದಿದೆ. ಅದನ್ನು ಕಾಪಾಡುವುದೂ ಬಿಡುವುದೂ ನಿನ್ನನ್ನು ಕೂಡಿದೆ. ನನ್ನ ಗದ್ದಿಗೆಯ ಮಾನ ವನ್ನು ರಕ್ಷಿಸು.

ಬೀರ.—ಮಹಾಪ್ರಭೋ ! ಇಂತಹ ಇಕ್ಕಟ್ಟಿನಿಂದ ದೇವರೇ ಪಾರು ಮಾಡಬೇಕು. ಅವನು ಭಕ್ತಾಭಿಮಾನಿಯೂ ಭಕ್ತವತ್ಸಲನೂ ಭಯ ಕೃದ್ಭಯನಾಶನೂ ಶರಣುಜನವರದನೂ ಆಗಿರುತ್ತಾನೆ. ನಾನು ಈಗ ಏನೂ ಹೇಳಲಾರೆನು. ಪರಮೇಶ್ವರನನ್ನು ಧ್ಯಾನಿಸಿ ಮಲಗುವೆನು. ನಾಳೆ ದೇವರು ಏನು ಬುದ್ಧಿ ಕೊಡುತ್ತಾನೆಯೋ ನೋಡೋಣ. ಈಗ ರಾತ್ರಿ ಬಹಳ ಹೊತ್ತಾಯಿತು. ಹೋಗಲಿಕ್ಕೆ ಅಪ್ಪಣೆ ದಯಪಾಲಿಸಿರಿ.

ಬಾದ.—ಒಳ್ಳೇಯದು ಹೋಗು. ಹೇಗಾದರೂ ಮಾಡಿ ನನ್ನ ಮಾನವನ್ನು ಕಾಯಿ. ನಿನ್ನ ಹೊರತು ನನಗೆ ಗತಿಯಿಲ್ಲ. ದೇವರಲ್ಲಿ ನಿನ್ನ ಭಕ್ತಿಯು ಹಿರಿದಾದ್ದರಿಂದ ಅವನು ನಿನ್ನಿಂದಲೇ ನನ್ನನ್ನು ಕಾಪಾಡುವನು.

ಬೀರಬಲ್ಲನು ಮನೆಗೆ ಹೋಗಿ ಮಲಗಿಕೊಂಡನು. ೨, ೩ ತಾಸು ಹೊತ್ತು ಏರಿದ ಮೇಲೆ ಎದ್ದು ಮುಖಮಾರ್ಜನ ಸ್ನಾನಸಂಧ್ಯಾಜಪಾದಿಗಳನ್ನು ಮುಗಿಸಿಕೊಂಡು, ದೇವರ ಮುಂದೆ ಕುಳಿತು ಆ ಜಗತ್ಪಾಲಕನನ್ನು ಅನನ್ಯ ಭಾವದಿಂದ ನೆನೆದು, ಆ ಕಾಲಕ್ಕೆ ಒದಗಿದ ಕೋಟಲೆಯಿಂದ ದೊರೆಯನ್ನು ಕಾಪಾಡಬೇಕೆಂದು ಬೇಡಿಕೊಂಡನು. ಕೂಡಲೆ ಅವನಿಗೊಂದು ಹರವು ಹೊಳೆಯಿತು. ಅವನಿಗೆ ಹಿಡಿಯಲಾರದಷ್ಟು ಹಿಗ್ಗು ಉಂಟಾಯಿತು. ನಿಸ್ಸೀಮ ಭಕ್ತಿಯಿಂದ ದೇವರನ್ನು ಕೊಂಡಾಡಿ, ಪೊಡಮಟ್ಟು, ಗಂಧಪುಷ್ಪಾಕ್ಷತಾಕರ್ಪುರಾರ್ತಿಕ್ಯದಿಂದ ದೇವರನ್ನು ಪೂಜಿಸಿ, ಊಟ ಮಾಡಿ, ವೀಳೆಯವನ್ನು ಸವಿದು, ಸರಿಯಾದ ಹೊತ್ತಿಗೆ ದರಬಾರಿಗೆ ಹೋದನು. ಏನು ಮಾಡಬೇಕೆಂದು ಮನಸ್ಸಿನಲ್ಲಿ ಕುದಿಯುತ್ತಿರುವ

ಬಾದಶಹನು—ಬೀರಬಲ್ಲ, ಇತ್ತ ಬಾ (ಕಿವಿಯಲ್ಲಿ) ಗಂಡೊ ಹೆಣ್ಣೊ?

ಬೀರ.—ದಯಾಸಾಗರನೇ! ತಮ್ಮ ಕೃಪೆಯೊಂದಿರುವಾಗ, ಹೆಣ್ಣಿನ ಮಾತೇ ಎತ್ತಬೇಡರಿ. ಗಂಡೇ ಸರಿ. ಅದರ ಕಳವಳವೇ ತಮಗೆ ಬೇಡ.

ಬಾದ.—ಶಹಬಾಸ್, ದೇವರು ದೊಡ್ಡವನು. ಇದ್ದರೆ ನಿನ್ನಂತಹ ಗೆಳೆಯನಿರಬೇಕು. ಪಾರಾದೆನು. ನಿನಗೆ ಏನು ಕೊಟ್ಟರೂ ಸಾಲದು.

ಮುಂದೆ ಕೆಲಹೊತ್ತಿನ ಮೇಲೆ ತನ್ನ ಬಯಕೆಯು ಕೈಗೂಡಿ ತಾನು ಕೃತಕೃತ್ಯಳಾಗುವೆನೆಂಬ ಉಬ್ಬಿನಿಂದ ನರ್ತಕಿಯು ದರಬಾರಿಗೆ ಬಂದು ಗದ್ದಿಗೆಗೆ ಎರಗಿ ಕೈಜೋಡಿಸಿಕೊಂಡು "ಮಹಾರಾಜರೇ ತಮ್ಮ ಅಪ್ಪಣೆಯಂತೆ ಬಂದಿರುತ್ತೇನೆ. ಕನಿಕರದಿಂದ ನನ್ನ ಬಯಕೆಯನ್ನು ಪೂರೈಸಬೇಕೆಂದು ಬೇಡಿಕೊಂಡಳು. ಅದನ್ನು ಕೇಳಿ ಬಾದಶಹನು ಬೀರಬಲ್ಲನ ಕಡೆ ನೋಡಿ ಸನ್ನೆ ಮಾಡಿದನು.

ಬೀರ.—(ನರ್ತಕಿಯ ಕಡೆ ನೋಡಿ) ಏನಮ್ಮಾ, ಮಹಾರಾಜರು ಈಡೇರಿಸುವುದಕ್ಕೆ ಒಪ್ಪಿದ ನಿನ್ನ ಬಯಕೆಯಾವುದು?

ನರ್ತ.—ಸ್ವಾಮೀ! ಮಹಾರಾಜರ ಗದ್ದಿಗೆಯ ಮೇಲೆ ಮಲ ವಿಸರ್ಜನೆ ಮಾಡುವುದೇ ಮಹಾರಾಜರು ಪೂರೈಸುವುದಕ್ಕೆ ಒಡಂಬಟ್ಟ ನನ್ನ ಬಯಕೆಯು.

ಬೀರ.—ಮಲವಿಸರ್ಜನೆ ಮಾಡುವುದಷ್ಟೇ ನಿನ್ನ ಬಯಕೆಯೋ?

ನರ್ತ.—ಅಷ್ಟೇ ಸ್ವಾಮೀ, ಮತ್ತೇನೂ ಇಲ್ಲ.

ಬೀರ.—ಇದರಿಂದ ನಿನಗೆ ಫಲವೇನು?

ನರ್ತ.—ನನ್ನ ಕೋರಿಕೆಯು ಈಡೇರಿದ್ದೊಂದೇ ಫಲವು, ಮತ್ತೇನೂ ಇಲ್ಲ.

ಬೀರ.—ಯಾವ ರಾಜದ್ರೋಹಿಗಳು ನಿನಗೆ ಹೀಗೆ ಬೇಡಲಿಕ್ಕೆ ಕಲಿಸಿದರು?

ನರ್ತ.—ಇದೇನು ಸ್ವಾಮಿ! ರಾಜದ್ರೋಹದ ಮಾತೇಕೆ? ನನಗೆ ಯಾರೂ ಕಲಿಸಿಲ್ಲ. ಇದು ನನ್ನ ಸ್ವಂತ ಕೋರಿಕೆಯೇ ಸರಿ.

ಬೀರ.—ಗದ್ದಿಗೆಯ ಮೇಲೆ ಮಲವಿಸರ್ಜನೆ ಮಾಡುವುದರಿಂದ ಅರಸರಿಗೆ ಅವಮಾನ ಮಾಡಿದಂತಾಗುವುದಿಲ್ಲವೇ?

ನರ್ತ.—ಸ್ವಾಮೀ, ಅವಮಾನಗಿವಮಾನ ನಾನರಿಯೆ. ನಾನು ಹೆಂಗಸು, ಬಾಲೆ. ಅಷ್ಟೆಲ್ಲ ಅರಿವು ನನಗೆಲ್ಲಿ ಬರುವುದು? ನನ್ನ ಬಯಕೆಯನ್ನು ಪೂರೈಸುವುದೂ ಬಿಡುವುದೂ ಮಹಾರಾಜರ ಕಯ್ಯಲ್ಲಿದೆ. ಅವರು ಪೂರ್ಣಮಾಡುತ್ತೇವೆಂದು ಮಾತು ಕೊಟ್ಟಿರುತ್ತಾರೆ. ಆದ್ದರಿಂದ ಮಲವಿಸರ್ಜನೆ ಮಾಡಲಿಕ್ಕೆ ಬೇಗನೆ ನನಗೆ ಅಪ್ಪಣೆ ಕೊಡಿರಿ. ಇಲ್ಲವಾದರೆ ಇಲ್ಲೆಂದು ಹೇಳಿರಿ. ಉಳಿದ ಎಣಿಕೆ ನನಗೇಕೆ?

ಬೀರ.—ಏನಮ್ಮಾ, ಸಿಟ್ಟು ಮಾಡಬೇಡ. ತಾಳ್ಮೆಯನ್ನು ಹೊಂದು. ನಿನಗೆ ಬೇಕಾದಷ್ಟು ಹೊನ್ನು ಮುತ್ತುರತ್ನಗಳನ್ನು ಕೇಳು, ಮಾನಮಿರಾಸಿಗಳನ್ನು ಕೇಳು, ಉಂಬಳಿಜಹಗೀರುಗಳನ್ನು ಕೇಳು, ಬಾದಶಹರು ಸಂತೋಷದಿಂದ ಕೊಡುವರು. ಹಟ ಹಿಡಿದು ಬಾದಶಹರಿಗೆ ಅವಮಾನ ಮಾಡುವ

ಈ ಕೆಟ್ಟ ಬಯಕೆಯನ್ನು ಬಿಡು. ಹೀಗೆ ಮಾಡುವುದರಿಂದ ನಿನಗೆ ಮೇಲಾಗುವುದು.

ನರ್ತ.— ಬಯಕೆಯ ಪೂರೈಕೆಗಿಂತ ಹೆಚ್ಚಿನ ಮೇಲು ನನಗಾವುದೂ ತೋರುವುದಿಲ್ಲ. ನನಗೆ ನಿಮ್ಮ ಹೊನ್ನುಮುತ್ತುಗಳು ಬೇಡ, ಮಾನಮಿರಾಸಿ ಬೇಡ, ಉಂಬಳಿ ಬೇಡ, ಬೇಗನೆ ನನಗೆ ಅಪ್ಪಣೆ ಕೊಡಿರಿ.

ಬೀರ.— ಅಮ್ಮಾ, ದುಡುಕಬೇಡ, ಬಾದಶಹರು ನಿನ್ನ ಬಯಕೆಯನ್ನು ಪೂರೈಸಲಿಕ್ಕೆ ಸಿದ್ಧರಾಗಿರುತ್ತಾರೆ. ಎಲ್ಲ ಸಭಾಸದರ ಎದುರಿಗೆ ನೀನು ಮಲವಿಸರ್ಜನೆಯನ್ನು ಮಾಡಬೇಕು.

ನರ್ತ.— ಸ್ವಾಮಿಾ, ಇದು ನ್ಯಾಯವೇ? ಎಲ್ಲರ ಮುಂದೆಯೂ ಕುಳಿತುಕೊಳ್ಳುವುದು ಹೇಗೆ?

ಬೀರ.— ನಾವೆಲ್ಲರೂ ನೋಡಬೇಡವೇ? ನೀನು ಅಲ್ಲಿ ಬೇರೆ ಏನೂ ಮಾಡಕೂಡದು.

ನರ್ತ.— ಒಳ್ಳೆಯದು ಸ್ವಾಮಿಾ, ತಾವು ಹಟಹಿಡಿದರೆ ಎಲ್ಲರ ಮುಂದೆಯೂ ಗಟ್ಟಿದೆಮಾಡಿ ಕೂಡ್ರುವೆನು, ಉಪಾಯವಿಲ್ಲ.

ಬೀರ.— ನೀನು ಮಲವಿಸರ್ಜನೆ ಮಾತ್ರ ಮಾಡಬಹುದು. ಮತ್ತೇನಾದರು ಮಾಡಿದರೆ ಬಾದಶಹರು ನೀನು ರಾಜದ್ರೋಹಿಯೆಂದು ಎಣಿಸಿ ನಿನ್ನ ಆಸ್ತಿಯನ್ನೆಲ್ಲ ಕಿತ್ತುಕೊಳ್ಳುವರಲ್ಲದೆ ನಿನ್ನನ್ನು ಮರಣಶಿಕ್ಷೆಗೆ ಗುರಿಮಾಡುವರು.

ನರ್ತ.— ಸ್ವಾಮಿಾ ಮತ್ತೇನೂ ಮಾಡುವುದಿಲ್ಲ. ಮಲವಿಸರ್ಜನೆ ಮಾತ್ರ ಮಾಡುವೆನು.

ಬೀರ.— ಬಾ, ಗದ್ದಿಗೆಯ ಮೇಲೆ ಕೂಡು. ಮತ್ತೇನೂ ಮಾಡಕೂಡದೆಂಬುದನ್ನು ಮರೆಯಬೇಡ.

ನರ್ತ.— ಮತ್ತೇನು ಮಾಡುವುದಿಲ್ಲೆಂದು ಹೇಳಿ ಮುಂದಕ್ಕೆ ಬರುವಳು.

ಬೀರ.— ಸ್ವಲ್ಪ ತಡೆ, ಇನ್ನೊಂದು ಮಾತುಂಟು.

ನರ್ತ.— ಮತ್ತೇನು ಮಾತು ಸ್ವಾಮಿಾ?

ಬೀರ.—ನಿನಗೆ ಮಲವಿಸರ್ಜನೆ ಮಾಡಲಿಕ್ಕೆ ಮಾತ್ರ ಅಪ್ಪಣೆಯನ್ನು ಬಾದಶಹರು ದಯಪಾಲಿಸಿದ್ದಾರೆ; ನೀನು ಅದನ್ನು ಮಾಡಬಹುದು. ಮೂತ್ರವಿಸರ್ಜನೆಯನ್ನು ಮಾಡಕೂಡದು, ಬಲು ಎಚ್ಚರಿಕೆ!

ನರ್ತ.—ಇದೇನು ಸ್ವಾಮೀ! ಮೂತ್ರವಿಸರ್ಜನೆ ಮಾಡದೆ ಮಲ ವಿಸರ್ಜನೆ ಮಾಡುವ ಬಗೆ ಹೇಗೆ? ಮೂತ್ರದ ಕೂಡ ಮಲ.

ಬೀರ.—ಅದೇನೋ ನಾವರಿಯೆವು. ನಿನಗೆ ಮಲವಿಸರ್ಜನೆ ಮಾಡ ಲಿಕ್ಕೆ ಮಾತ್ರ ಅಪ್ಪಣೆಯುಂಟು.

ನರ್ತ.—ಸಾಕು, ಬಿಡಿರಪ್ಪಾ, ನಾನು ಮನೆಗೆ ಹೋಗುವೆನು.

ಬೀರ.—ತಡೆ, ನೀನು ರಾಜದ್ರೋಹದ ಎಣಿಕೆಯನ್ನು ಮಾಡಿದ್ದರಿಂದ ನಿನ್ನ ಆಸ್ತಿಯನ್ನೆಲ್ಲ ಸರಕಾರಕ್ಕೆ ಜಮಾ ಮಾಡಿರುತ್ತದೆ, ನಿನಗೆ ದೇಹಾಂತ ಶಿಕ್ಷೆಯನ್ನು ವಿಧಿಸಿರುತ್ತೇವೆ. (ಅರಸಾಳುಗಳ ಕಡೆಗೆ ನೋಡಿ) ಈಕೆ ಯನ್ನು ಗಲ್ಲಿನ ಕಂಬಕ್ಕೆ ಒಯ್ಯಿರಿ.

ನರ್ತ.—ಅಯ್ಯೋ! ಕೆಟ್ಟೆ. (ಎಂದು ನೆಲಕ್ಕೆ ಬೀಳುವಳು).

ಬಾದಶಹ—ಬೀರಬಲ್ಲ! ನಿನ್ನ ಅರಿವಿಗೆ ಎಣೆಯಿಲ್ಲ. ಈ ಇಕ್ಕಟ್ಟಿ ನಲ್ಲಿ ನಮ್ಮ ಗದ್ದಿಗೆಯ ಮಾನವನ್ನುಳಿಸಿದೆ. ಆದ್ದರಿಂದ ನಾವು ನಿನಗೆ ಆಜನ್ಮ ಋಣಿಯಾಗಿದ್ದೇವೆ. ನಿನ್ನ ಉಪಕಾರವನ್ನು ಈ ಹುಟ್ಟಿನಲ್ಲಿ ತೀರಿಸ ಲಾರೆವು. ಈ ನರ್ತಕಿಯು ನಮಗೆ ದ್ರೋಹವನ್ನು ಬಗೆದುದರಿಂದ ನೀನು ಕೊಟ್ಟ ಶಿಕ್ಷೆಗೆ ಪಾತ್ರಳಾಗಿರುತ್ತಾಳೆ. ಆದರೂ ಅರಸರಿಗೆ ಕ್ಷಮೆಯೇ ಭೂಷಣವಾದ್ದರಿಂದ ಈಕೆಯು ತನಗೆ ಹೀಗೆ ಬೇಡಲಿಕ್ಕೆ ಕಲಿಸಿದವರ ಹೆಸರನ್ನು ಮರೆಮಾಡದೆ ಸರಿಯಾಗಿ ಹೇಳಿದರೆ, ನಾವು ಈಕೆಯ ತಪ್ಪನ್ನು ಕ್ಷಮಿಸಿ ಪ್ರಾಣದಾನ ಮಾಡುವೆವು.

ಬಾದಶಹನ ಬಾಯಿಂದ ಮೇಲೆ ಹೇಳಿದ ಮಾತು ಹೊರಟ ಕೂಡಲೆ ಎಲ್ಲ ಸಭಾಸದರೂ ಹಿಗ್ಗಿ “ಅಲ್ಲಾಹು ಅಕ್ಬರ” “ಬಾದಶಹರಿಗೆ ಜಯವಾ ಗಲಿ” ಎಂದು ಒತ್ತಿ ಜಯಘೋಷ ಮಾಡಿದರು. ಎಲ್ಲರಿಗೂ ಆನಂದಾತಿರೇಕ ವಾಯಿತು. “ಶಹಬಾಸ್ ಬೀರಬಲ್ಲ” ಎಂಬ ಶಬ್ದಗಳು ಎಲ್ಲರ ಬಾಯಿಂ

ದಲೂ ಹೊರಟವು. ಬಾದಶಹನು ಎದ್ದು ಹೋದನು, ಒಡ್ಡೋಲಗವು ಮುಗಿಯಿತು.

## ೫. ಬಿದಿಗೆಯ ಚಂದ್ರನು

ಒಂದು ಸಂದರ್ಭದಲ್ಲಿ ಬೀರಬಲ್ಲನು ಏನೋ ಕಾರಣದಿಂದ ಕಾಬೂಲಿಗೆ ಹೋಗ ಬೇಕಾಯಿತು. ಅಲ್ಲಿ ಅಕ್ಬರ ಬಾದಶಹನ ಚಿಕ್ಕಪ್ಪನ ಮಕ್ಕಳು ಆಳುತ್ತಿದ್ದರು. ಅವನು ಬಂದ ಕೂಡಲೆ ಅಲ್ಲಿಯುವರು ಅವನು ಗುಪ್ತಚಾರನೆಂದು ಸುದ್ದಿ ಹುಟ್ಟಿಸಿದರು. ಅದು ಅಮೀರನ ಕಿವಿಗೆ ಮುಟ್ಟಿತು. ಆದ್ದರಿಂದ ಅವನು ಒಂದು ದಿವಸ ದರಬಾರಿನಲ್ಲಿ

ಬೀರಬಲ್ಲ! ನೀನು ಇಲ್ಲಿಗೆ ಬಂದು ಒಂದು ತಿಂಗಳಾಯಿತು. ಪ್ರಜಾರಂಜನಕಾರ್ಯದಲ್ಲಿ ನನಗೂ ನಿಮ್ಮ ಬಾದಶಹನಿಗೂ ಏನು ಹೆಚ್ಚು ಕಡಮೆಯುಂಟು ?

ಬೀರ.—ತಾವು ಪೂರ್ಣಿಮೆಯ ಚಂದ್ರನಂತಿರುತ್ತೀರಿ. ತಮ್ಮನ್ನು ನೋಡಿ ಎಲ್ಲರೂ ಹಿಗ್ಗುತ್ತಾರೆ.

ಅಮೀರ.—ಒಳ್ಳೆಯದು. ನಿಮ್ಮ ಬಾದಶಹನು ಹೇಗಿರುತ್ತಾನೆ?

ಬೀರ.—ನಮ್ಮ ಬಾದಶಹನು ಬಿದಿಗೆಯ ಚಂದ್ರನಂತಿರುತ್ತಾನೆ. ಅವನು ತಮಗೆ ಸಾಟಿಯಾಗಲಾರನು.

ಅಮೀರ.—ನಾವು ನಿನ್ನ ಬಾದಶಹನಿಗಿಂತ ಹೆಚ್ಚಿನವರೇನು ?

ಬೀರ.—ಹೆಚ್ಚಿನವರೊ ಕಡಮೆಯವರೊ ತಾವೇ ವಿಚಾರ ಮಾಡಿರಿ. ನನ್ನ ಬಾಯಿಂದಲೇಕೆ ಅದನ್ನು ಹೇಳಿಸುವುದು! ತಾವು ಹುಣ್ಣಿಮೆಯ ಚಂದ್ರನಂತಿರುತ್ತೀರೆಂಬುದನ್ನು ನಾನು ಮೊದಲೇ ಅರಿಕೆ ಮಾಡಿದ್ದೇನೆ.

ಈ ಮಾತುಕಥೆ ನಡೆದ ಕೆಲ ದಿನಗಳಾದ ಬಳಿಕ ಬೀರಬಲ್ಲನು ತಿರುಗಿ ದಿಲ್ಲಿಗೆ ಬಂದು ಯಾರೊಡನೆಯೋ ಮಾತಾಡುವಾಗ ಮೇಲೆ ಹೇಳಿದ ಅಮೀರನ ಪ್ರಶ್ನವನ್ನೂ ತಾನು ಅದಕ್ಕೆ ಹೇಳಿದ ಜಾಣ್ಮೆಯ ಬದಲನ್ನೂ ಹೇಳಿಬಿಟ್ಟನು. ಅದು ಕರ್ಣೋಪಕರ್ಣವಾಗಿ ಬಾದಶಹನ ಕಿವಿಗೆ ಬಿತ್ತು. ಬೀರಬಲ್ಲನ ಹಗೆಗಳು ಅಮೀರನ ಮುಂದೆ ಬಾದಶಹನನ್ನು ಕೀಳು ಮಾಡಿದನೆಂದು

ಬೀರಬಲ್ಲನನ್ನು ಹಳಿಯತೊಡಗಿದರು. ಈ ಸುದ್ದಿಯು ಬಾದಶಹನಿಗೆ ಮುಟ್ಟಿತು. ಅವನಿಗೆ ಬೀರಬಲ್ಲನ ಜಾಣ್ಮೆಯು ಗೊತ್ತಿದ್ದರೂ ಅರಿವುಗೇಡಿಗಳ ತಿಳಿವಳಿಕೆಯನ್ನು ಹೋಗಲಾಡಿಸುವುದಕ್ಕೆ ಒಂದು ದಿನ ಓಲಗದಲ್ಲಿ—

"ಬೀರಬಲ್ಲ! ಕಾಬೂಲಿಗೆ ನೀನು ಹೋದಾಗ ಅಮೀರನು ನನ್ನ ಬಗ್ಗೆ ಏನು ಕೇಳಿದನು? ನೀನು ಅವನಿಗೆ ಏನು ಹೇಳಿದೆ?" ಎಂದು ಕೇಳಿದನು.

ಬೀರ.—ಖುದಾವಂದ್! ಅಮೀರನು ತಾನು ಹೇಗೆ, ನೀವು ಹೇಗೆಂದು ಕೇಳಲು, ಅವನು ಹುಣ್ಣಿಮೆಯ ಚಂದ್ರನಂತೆಯೂ ತಾವು ಬಿದಿಗೆಯ ಚಂದ್ರನಂತೆಯೂ ಇರುತ್ತೀರೆಂದು ಹೇಳಿದೆನು. ನಾನು ಹೇಳಿದ್ದು ಅಕ್ಷರಶಃ ದಿಟವಾಗಿರುತ್ತದೆ.

ಬಾದ.—ಹೀಗೆ ಹೇಳುವುದರಿಂದ ನನ್ನ ಯೋಗ್ಯತೆಯನ್ನು ಕಡಮೆ ಮಾಡಿದೆಂದು ಕೆಲವರು ಸರದಾರರು ತಿಳಿಯುತ್ತಾರೆ. ಅವರ ತಿಳಿವಳಿಕೆ ಸರಿಯಾದ್ದೇ?

ಬೀರ.—ಮಹಾರಾಜ! ಈ ಹುಳುಕು ಸರದಾರರ ಹೆಡ್ಡತನಕ್ಕೆ ಕಡೆಮೊದಲೇ ಇಲ್ಲ. ಬಿದಿಗೆಯ ಚಂದ್ರನು ಹುಣ್ಣಿಮೆಯ ಚಂದ್ರನಿಗಿಂತ ಹೆಚ್ಚು ಮುರುಕದವನೆಂಬುದು ಈ ಮುಡ್ಡಿಗಳಿಗೆ ಹೊಳೆಯಲಿಲ್ಲವಲ್ಲ!! ಬಿದಿಗೆಯ ಚಂದ್ರನನ್ನು ಎಲ್ಲರೂ ಎದುರುನೋಡುತ್ತಾರೆ, ಅವನು ದಿನ ದಿನಕ್ಕೆ ಬೆಳೆಯುತ್ತಾನೆ. ಆಳುಗಳೆಲ್ಲ ಸಂಬಳದ ದಿನವೆಂದು ಅದನ್ನು ಹಾರೈಸುತ್ತಾರೆ. ಕಾಬೂಲಿನ ಅಮೀರನು ತಾನು ದೊಡ್ಡವನೆಂದು ನಟಿಸಬಹುದು; ತಾನು ಹುಣ್ಣಿಮೆಯ ಚಂದ್ರನಂತೆ ಪರಿಪೂರ್ಣನೆಂದು ಉಬ್ಬಬಹುದು; ತನಗೆ ಯಾರೂ ಸರಿಯಿಲ್ಲೆಂದು ಹಮ್ಮು ಪಡಬಹುದು. ಆದರೆ ಅರಸರಿಗೆ ಪ್ರಜಾರಂಜನವೇ ದೊಡ್ಡಕಸುವು; ಜನರ ಅಕ್ಕರೆಯೇ ಹೆಚ್ಚಿನಲಂಕಾರ; ಜನರ ನಂಬಿಕೆಯೇ ಭದ್ರವಾದ ಕೋಟೆ; ಜನರ ಪೂಜ್ಯಬುದ್ಧಿಯೇ ದೊಡ್ಡದಳವು. ತಾವು ಬಿದಿಗೆಯ ಚಂದ್ರನಂತೆ ಇವೆಲ್ಲವುಗಳನ್ನೂ ಹೊಂದಿರುವುದರಿಂದ ಸೊಕ್ಕಿನಿಂದ ಉಕ್ಕುತ್ತಿರುವ ಅಮೀರನು ತಮ್ಮ ಪಾಸಂಗಕ್ಕೆ (ಪಾಸಟಿಗೆ) ಹತ್ತಲಾರನು. ಹೀಗಿದ್ದು ತಿಳಿಗೇಡಿಗಳು ಅರ್ಥಕ್ಕೆ ಅನರ್ಥ

ವನ್ನು ಕಲ್ಪಿಸಿದರೆ ನನ್ನದೇನು ತಪ್ಪು? ಇದ್ದ ಸಂಗತಿಯನ್ನು ಖಾವಂದರ ವರಿಗೆ ಅರಿಕೆಮಾಡಿದ್ದೇನೆ.

ಈ ಸಂವಾದವನ್ನು ಕೇಳಿ ಎಲ್ಲ ಕುಹಕರೂ ಸುಮ್ಮನಾದರು. ಬಾದ ಶಹನು ಸಂತುಷ್ಟನಾಗಿ ಬೀರಬಲ್ಲನ ಚಾತುರ್ಯಕ್ಕೆ ಮೆಚ್ಚಿದನು.

## ೬. ಅಡಿಗಳ ಸೊಬಗು

ಒಂದು ದಿನ ನಡುಹಗಲಲ್ಲಿ ಬಾದಶಹನೂ ಅವನ ಅಕ್ಕರದ ಬೇಗ ಮ್ಮಳೂ ತೂಗುಮಂಚದ ಮೇಲೆ ಕುಳಿತು ತೂಗಿಕೊಳ್ಳುತ್ತಿರುವಾಗ—

ಬೇಗಮ್ಮಳು—ಪ್ರಾಣನಾಥಾ! ನನ್ನ ಅಡಿಗಳು ಎಷ್ಟು ಚೆಲುವಾಗಿವೆ ನೋಡಿರಿ. ಅವು ಹೂವಿನಂತೆ ಮೆತ್ತಗಾಗಿಯೂ ಬಿಳಿಯ ಮಲದಂತೆ ಶುಭ್ರವಾಗಿಯೂ ಚಿಕ್ಕಿಗಳಂತೆ ತಳತಳಿಸುವುಗಳಾಗಿಯೂ ಚಂದ್ರನಂತೆ ಅಂದ ವಾಗಿಯೂ ಇರುತ್ತವೆ. ತಮ್ಮವು ಎಷ್ಟು ಒರಟಾಗಿ ಕಾಣುತ್ತವೆ!

ಬಾದ.—ನನ್ನ ಅಡಿಗಳೇ ಹೆಚ್ಚು ಸೊಬಗುಳ್ಳವು. ಅವು ದೊಡ್ಡ ವಾಗಿಯೂ ಗಟ್ಟಿಯಾಗಿಯೂ ಕೆಂಬಣ್ಣದವಾಗಿಯೂ ಕಣ್ಣಿಗೆ ಅಂದವನ್ನು ಬೀರುತ್ತವೆ. ನಿನ್ನ ಪಾದಗಳಲ್ಲಿ ನೆತ್ತರಿಲ್ಲ, ಕಸುವಿಲ್ಲ, ಸೊಬಗಿಲ್ಲ.

ಬೇಗ.—ತಮ್ಮ ಕಣ್ಣುಗಳು ಕೆಟ್ಟಿವೆ. ತಮಗೆ ಯಾವುದು ಮೇಲು ಯಾವುದು ಬೀಳು ಎಂಬುದು ತಿಳಿಯಲೊಲ್ಲದು. ಸಣ್ಣದೂ ಮೆತ್ತಗೂ ಇರುವ ಅಡಿಗಳು ಮೇಲಲ್ಲವೆ?

ಬಾದ.—ನಿಸ್ಸತ್ವದಿಂದ ಬಿಳುಪಾದ ಪಾದಗಳಿಂದ ಉಪಯೋಗವೇನು?

ಬೇಗ.—ವಿಷಯಾಂತರ ಮಾಡಬೇಡರಿ. ನಾವು ಚಂದದ ಬಗ್ಗೆ ಈಗ ಮಾತಾಡುತ್ತಿದ್ದೇವೆ; ಉಪಯೋಗವು ನಮ್ಮ ಗುರಿಯಲ್ಲ.

ಬಾದ.—ಉಪಯೋಗದಿಂದಲೇ ಚೆಲುವಿಕೆಯು ಗೊತ್ತುಮಾಡಲ್ಪಡು ತ್ತದೆ. ಕುದುರೆಯು ಉಪಯುಕ್ತ ಪ್ರಾಣಿಯಾದ್ದರಿಂದ ಅದು ಸುಂದರ ವಾಗಿ ತೋರುತ್ತದೆ. ಕರಡಿಯು ಉಪಯುಕ್ತವಾಗದ್ದರಿಂದ ಅಸಹ್ಯ ಪ್ರಾಣಿ ಯೆಂದು ಎಣಿಸಲ್ಪಡುತ್ತದೆ.

ಬೇಗ.—ಪ್ರಿಯನೇ! ಅದು ಹೇಗೆ? ಚಿನ್ನಬೆಳ್ಳಿ ಮುತ್ತುರತ್ನಗಳ ಉಪಯೋಗವೇನು? ಉಪಯೋಗವಿಲ್ಲದಿದ್ದರೂ ಅವು ಎಷ್ಟು ಚಂದವಾಗಿ ಕಾಣಿಸುತ್ತವೆ! ಅವು ಅಂದವಾದುವೆಂದು ಜನರು ಅವುಗಳಿಗೆ ಎಷ್ಟು ಮೋಹಗೊಳ್ಳುತ್ತಾರೆ!!

ಬಾದ.—ಅವುಗಳ ಉಪಯೋಗವಿಲ್ಲವೇನು? ಇಷ್ಟು ಮೆಯ್ಮೇಲೆ ಹೇರಿಕೊಂಡಿರುವೆ. ಅದು ಉಪಯೋಗವಲ್ಲವೇ? ಉಪಯೋಗವುಂಟೆಂದೇ ಅವುಗಳ ಸೌಂದರ್ಯ.

ಬೇಗಮ್ಮಳ ಮಾತು ನಿಂತಿತು. ಆಕೆಗೆ ಏನು ಹೇಳಬೇಕೆಂಬುದು ಹೊಳೆಯಲಿಲ್ಲ. ಬಾದಶಹನು ತನ್ನನ್ನು ಮಂಕುಮಾಡಿದನೆಂದೆಣಿಸಿ ಬೇಗಮ್ಮಳು ತನ್ನ ದಾಸಿಯರನ್ನು ಕರೆದು, ಯಾರ ಪಾದಗಳು ಚೆಲುವಾಗಿರುತ್ತವೆಂದು ಕೇಳಿದಳು. ಅವರು ಬೆರಗಾಗಿ, ಯಾರವೆಂದೂ ಹೇಳಿದರೂ ಒಬ್ಬರು ಸಿಟ್ಟಾಗುವರೆಂಬ ಹೆದರಿಕೆಯಿಂದ ತುಟಿಯನ್ನು ಅಗಲಿಸದೆ ದೆವ್ವ ಬಡಿದವರಂತೆ ಸುಮ್ಮನೆ ನಿಂತರು. ಆಗ ಕರ್ಮಧರ್ಮಸಂಯೋಗದಿಂದ ಬೀರಬಲ್ಲನು ಅಲ್ಲಿಗೆ ಬಂದನು. ಬೇಗಮ್ಮಳು ಅಡರಾಸಿ ಅವನನ್ನು ಅದೇ ಪ್ರಶ್ನೆವನ್ನು ಕೇಳಿದಳು. ಬೀರಬಲ್ಲನು ಬೆರಗಾದರೂ ದಿಗಿಲುಬಡೆದು ಸುಮ್ಮನೆ ನಿಲ್ಲದೆ, ರಾಣಿಗೆ ಬದಲು ಹೇಳಿದನು.

ಬೀರ.—ಬೇಗಮ್ಮ ಸಾಹೇಬ್; ತಮ್ಮ ಪಾದಗಳು ಹೆಚ್ಚು ಸುಂದರವಾಗಿರುತ್ತವೆಂಬ ಬಗ್ಗೆ ಏನೂ ಅಡ್ಡಿಯಿಲ್ಲ. ಆದರೆ ಆ ಸೌಂದರ್ಯವು ಬಾದಶಹರ ಒಲುಮೆಯಿಂದ ಉಂಟಾಗಿರುತ್ತದೆಂಬ ಮಾತನ್ನು ಮರೆಯಕೂಡದು.

ಬೇಗ.—ನಲ್ಲನೇ ಕೇಳು, ನನ್ನ ಮಾತು ಗೆದ್ದಿತು. ಬೀರಬಲ್ಲ! ನೀನು ಸರಿಯಾಗಿ ತೀರ್ಪು ಮಾಡಿದೆ.

ಬಾದ.—ಪ್ರಿಯೆ! ಬೀರಬಲ್ಲನು ಹೇಳಿದ ಮತ್ತೊಂದು ಮಾತು ಕೇಳಿಸಲಿಲ್ಲವೇನು?

ಬೇಗ.—ಕೇಳಿಸಿತು. ಕಾರಣವೇನಾದರೂ ಇರಲಿ. ನನ್ನ ಅಡಿಗಳು ಹೆಚ್ಚು ಚೆಲುವಾಗಿವೆ. (ದಾಸಿಯ ಕಡೆಗೆ ನೋಡಿ) ಬಂಡಾರಗಾರ

ನನ್ನು ಕರೆ, ಬೇಗನೆ ಕರೆ. ಬೀರಬಲ್ಲನಿಗೆ ಮುಚ್ಚು (ಬಹುಮಾನ) ಕೊಡಿಸಬೇಕಾಗಿದೆ.

ದಾಸಿಯು ಓಡುತ್ತ ಹೋಗಿ ಬಂಡಾರಗಾರನನ್ನು ಕರೆದುಕೊಂಡು ಬಂದಳು.

**ಬಂಡಾರಗಾರ.** — ಮಹಾರಾಜ ಮಹಾರಾಣಿಯವರಿಗೆ ಜಯವಾಗಲಿ. ಏನು ಹುಕುಮು ?

**ಬೇಗ.** — ಬಂಡಾರಗಾರ, ಬೀರಬಲ್ಲನಿಗೆ ೧೦೦ ಜೋಡು ಕೊಡು.

**ಬಂಡಾ.** — ಹುಕುಮನ್ನು ತಲೆಯ ಮೇಲೆ ಹೊತ್ತೆನು. ಕೊಡುವೆನು. (ಎಂದು ಸಲಾಮು ಮಾಡಿ ಹಿಂದಿರುಗಿ ಹೋಗುತ್ತಾನೆ).

**ಬೀರ.** — ಬೇಗಮ್ಮ ಸಾಹೇಬ್! ಕೋಶಾಧ್ಯಕ್ಷನು ತಮ್ಮ ಮೋರೆಯ ಮೇಲೆ ಜೋಡು ಕೊಡುತ್ತೇನೆಂದು ಹೇಳಿ ಹೋದನು.

**ಬೇಗ.** — ಬೀರಬಲ್ಲ, ಏನೆನ್ನುತ್ತೀ? ಅವನು ನನ್ನ ಮೋರೆಯ ಮೇಲೆ ಜೋಡು ಕೊಡುವನೇ ?

**ಬೀರ.** — ಬೇಗಮ್ಮ ಸಾಹೇಬ್ ತಡೆಯಿರಿ. ಸಿಟ್ಟಾಗಬೇಡರಿ. ತಾವು ನನಗೆ ಜೋಡು ಕೊಡಲಿಕ್ಕೆ ಅಪ್ಪಣೆ ಕೊಟ್ಟಿರಿ. ಅವನು ತಮ್ಮ ಎದುರಿಗೆ ಕೊಡಲೊಪ್ಪಿದನು. ಹಿಂದಿನಿಂದ ಅವನು ಹಾಗೆ ಮಾಡುವಂತೆ ತೋರುವುದಿಲ್ಲೆಂದು ಮಾತ್ರ ನಾನು ಹೇಳಿದೆನು. ತಾವು ಜೋಡು ಕೊಡಲಿಕ್ಕೆ ಹೇಳಿದ್ದರಿಂದ ನಾನೇ ಸಿಟ್ಟಾಗಬೇಕು. ತಾವು ಮುನಿಯುವುದೇಕೆ ?

**ಬೇಗ.** — ಬೀರಬಲ್ಲ! ನಾನು ದೋತರದ ಜೋಡನ್ನು ಕೊಡಲಿಕ್ಕೆ ಹೇಳಿದೆನೇ ಹೊರತು, ಕಾಲಿನ ಜೋಡಲ್ಲ. ದಾಸೀ ಹೋಗು, ಬಂಡಾರಗಾರನಿಗೆ ಒಲ್ಲಿಯ ಜೋಡನ್ನು ಕೊಡಲಿಕ್ಕೆ ಹೇಳಿದೆನೆಂದು ತಿಳಿಸು. ಮುಚ್ಚೆಯ ಜೋಡಲ್ಲ, ಕಂಡೆಯಾ.

**ಬೀರ.** — ಮಹಾರಾಣಿಯವರಿಗೆ ಜಯವಾಗಲಿ! ಕೋಶಾಧ್ಯಕ್ಷನು ಮುಚ್ಚೆಯ ಜೋಡನ್ನು ಕೊಡ ಹೇಳಿದಿರೆಂದು ತಿಳಿದುಕೊಂಡಂತೆ ಅವನ

ಮೋರೆಯ ಲಕ್ಷಣದಿಂದ ಕಂಡಿತು. ಆದ್ದರಿಂದ ಅವನು ಹಿಂದಿನಿಂದ ಕೊಡಲೆಳಿಸುವದಿಲ್ಲೆಂದು ಅರಿಕೆ ಮಾಡಿದೆನು.

**ಬಾದ.**—ಬೀರಬಲ್ಲ! ನೀನು ಮಾಡಿದ ಅನುಮಾನ (ತರ್ಕವು) ಸರಿಯಾದ್ದು. ಈಕೆಯ ಮನಸ್ಸಿನಲ್ಲಿ ಅದೇ ಇತ್ತು. ನೀನು ಅದನ್ನು ಈಕೆಯ ಮೇಲೆ ತಿರುಗಿಸಿದ್ದರಿಂದ ಈಗ ತಿದ್ದಿಕೊಂಡಳು.

**ಬೀರ.**—ಜೀಯಾ, ಮಹಾರಾಣಿಯವರಿಗೆ ನನ್ನ ಮೇಲೆ ಯಾವಾಗಲೂ ಬಹಳ ಸಿಟ್ಟು. ನಾನೇನು ತಪ್ಪು ಮಾಡಿದ್ದೇನೋ ತಿಳಿಯದು.

**ಜೋಧ.**—ಬೀರಬಲ್ಲ! ಹೀಗೆ ಅನ್ಯಾಯದ ಮಾತಾಡಬೇಡ. ನಾನು ಸಿಟ್ಟಾಗಲಿಕ್ಕೆ ಕಾರಣವೇನು?

**ಬಾದ.**—ಹೆಂಗಸರಲ್ಲಿ ಹೊಟ್ಟೆಕಿಚ್ಚು ಬಹಳ.

**ಜೋಧ.**—ನೀವು ಗಂಡಸರೆಲ್ಲ ಒಂದೇ. ಹೆಂಗಸರನ್ನು ನಿಷ್ಕಾರಣವಾಗಿ ಹಳಿಯುವಿರಿ.

ಎಲ್ಲರೂ ಗಹಗಹಿಸಿ ನಕ್ಕರು.

## ೭. ಬಾದಶಹನ ಹೆಮ್ಮೆ

ಒಂದು ದಿವಸ ಬಾದಶಹನು ಎಲ್ಲರಿಗಿಂತ ಮೊದಲೇ ಓಲಗಕ್ಕೆ ಬಂದು, ಪ್ರತಿಯೊಬ್ಬ ಸರದಾರನು ಬಂದ ಕೂಡಲೆ ಅವನಿಗೆ ಕೆಳಗೆ ಕೊಟ್ಟಿರುವ ಪ್ರಶ್ನವನ್ನು ಕೇಳಲು ಮೊದಲುಮಾಡಿದನು.

"ದೇವರು ಶಿಕ್ಷಿಸಲಾರದಂತಹ ತಪ್ಪುಗಾರನನ್ನು ನಾನು ಶಿಕ್ಷಿಸಬಲ್ಲೆನೆಂಬ ಮಾತು ದಿಟವೋ ಸಟಿಯೋ? ಕಾರಣ ಸಹಿತವಾಗಿ ಉತ್ತರ ಕೊಡಿರಿ."

ಪ್ರತಿಯೊಬ್ಬ ಸರದಾರನೂ ಪ್ರಶ್ನವನ್ನು ಕೇಳಿ ದಿಗಿಲುಗೊಂಡು ಏನು ಬದಲು ಹೇಳಬೇಕೆಂಬುದು ಗೊತ್ತಾಗದೆ, ಒಬ್ಬರನ್ನೊಬ್ಬರು ಮಿಕಿಮಿಕಿ ನೋಡುತ್ತ ಸುಮ್ಮನೆ ಕುಳಿತನು. ಕೊನೆಗೆ ಬೀರಬಲ್ಲನು ಓಲಗಕ್ಕೆ ಬಂದ ಕೂಡಲೆ ಬಾದಶಹನು ಅದೇ ಪ್ರಶ್ನವನ್ನು ಹಾಕಿದನು.

ಬೀರ. — ಖುದಾವಂದ್, ತಾವು ಹೇಳುವುದು ಸರಿಯಾಗಿರುತ್ತದೆ. ದೇವರು ಕೊಡಲಾರದಂತಹ ಶಿಕ್ಷೆಯನ್ನು ತಾವು ಕೊಡಬಹುದು.

ಬಾದ. — ಬೀರಬಲ್ಲ! ಏನು ಹೇಳುತ್ತೀ? ನಾನು ದೇವರಿಗಿಂತ ಹೆಚ್ಚಿನವನೇನು ?

ಬೀರ. — ಮಹಾರಾಜ! ನಾನು ಹಾಗೆ ಎಲ್ಲಿ ಹೇಳಿದೆನು ?

ಬಾದ. — ಹಾಗಾದರೆ ಮತ್ತೇನು? ದೇವರಿಗೆ ಯಾವುದು ಅಶಕ್ಯವು? ನಾನು ದೇವರೇನು?

ಬೀರ. — ತಾವು ದೇವರಲ್ಲದಿದ್ದರೂ ದೇವರ ಕಲೆಯಾಗಿರುತ್ತೀರಿ. "ನಾ ವಿಷ್ಣುಃ ಪೃಥ್ವೀಪತಿಃ" ಎಂದು ಶಾಸ್ತ್ರ ಪ್ರಮಾಣವುಂಟು. ಅರಸರು ವಿಷ್ಣುವಿನ ಅಂಶರಾಗಿರುತ್ತಾರೆ. ತಾವು ಹಿರಿಯರಸರಾದ್ದರಿಂದ ತಮ್ಮಲ್ಲಿ ದೇವರ ದೊಡ್ಡದಾದ ಅಂಶವಿರುತ್ತದೆ.

ಬಾದ. — ನೀನು ಏನು ಹೇಳಿದರೂ ನಾನು ಎಷ್ಟು ದೊಡ್ಡವನಾದರೂ ದೇವರ ಅಂಶವೇ ಸರಿ. ಆ ಸರ್ವಶಕ್ತನಾದ ಪರಮೇಶ್ವರನಿಗಿಂತ ಹೆಚ್ಚು ಸಾಮರ್ಥ್ಯವು ನನ್ನಲ್ಲಿರುವ ಬಗೆ ಹೇಗೆ? ನಾನು ನಿಮಗೆ ಎಷ್ಟು ದೊಡ್ಡವನಾದರೂ ದೇವರಿಗಿಂತ ತೀರ ಸಣ್ಣವನಲ್ಲವೇ? ಅವನು ಮಾಡಲಾರದ್ದನ್ನು ನಾನು ಹೇಗೆ ಮಾಡುವೆನು ?

ಬೀರ. — ತಾವು ದೇವರಿಗಿಂತ ತೀರ ಸಣ್ಣವರೆಂಬುದು ದಿಟವಾದ ಮಾತೇ ಸರಿ. ಆದರೂ ಪರಿಸ್ಥಿತಿಯ ಮೂಲಕವಾಗಿ ಅವನು ಮಾಡಲಾರದ್ದನ್ನು ತಾವು ಮಾಡಬಹುದು.

ಬಾದ. — ಇದೇನು ನಿನ್ನ ಸೋಜಿಗದ ಮಾತು? ಅವನು ಮಾಡದ್ದನ್ನು ನಾನು ಹೇಗೆ ಮಾಡಲಾಪೆನು ?

ಬೀರ. — ಮಹಾ ಸ್ವಾಮಿ! ದೇವರ ಶಕ್ತಿಯು ಅಗಾಧವಾದ್ದು. ಅವನ ಆಡಳಿತಕ್ಕೆ ಎಲ್ಲೆಯೇ ಇಲ್ಲ. ತಮ್ಮ ಅಧಿಕಾರಕ್ಕೆ ಪರಿಮಿತಿಯುಂಟು. ಆದ್ದರಿಂದ ಅವನು ಮಾಡಲಾರದ್ದನ್ನು ತಾವು ಮಾಡಬಹುದು.

ಬಾದ.—ಇದೇನು ಹುಚ್ಚುತನ ನಿನ್ನದು? ನನಗೆ ತಿಳಿಯುಲೊಲ್ಲದು. ಇಡೀ ಸೃಷ್ಟಿಯ ಒಡೆಯನಾದ ಪರಮೇಶ್ವರನಿಗೆ ಯಾವುದು ತಾನೇ ಅಸಾಧ್ಯ? ನಾನು ಮಾಡಲಾರದ್ದನ್ನು ನನ್ನ ಸುಬೇದಾರನು ಮಾಡ ಬಲ್ಲನೇ?

ಬೀರ.—ಖುದಾವಂದ್, ತಮ್ಮ ಸುಬೇದಾರರ ಸಂಬಂಧವು ಬೇರೆ, ತಮ್ಮ ಮತ್ತು ದೇವರ ಸಂಬಂಧವು ಬೇರೆ. ಆದ್ದರಿಂದ ತಾವು ಮಾಡಲಾರದ ಕೆಲಸವನ್ನು ತಮ್ಮ ಸುಬೇದಾರನು ಮಾಡಲಾರನು.

ಬಾದ.—ಬೇರೆ ಹೇಗೆ? ದೇವರ ಅಧಿಕಾರದ ಅಂಶವು ನನ್ನಲ್ಲಿದ್ದಂತೆ ನನ್ನಧಿಕಾರದ ಅಂಶವು ನನ್ನ ಸುಬೇದಾರನಲ್ಲಿರುತ್ತದೆ. ಆದ್ದರಿಂದ ಎರಡೂ ಸಂಬಂಧಗಳು ಒಂದೇಯಾಗಿರುತ್ತವೆ. ಏನೂ ಹೆಚ್ಚುಕಡಮೆ ತೋರುವುದಿಲ್ಲ.

ಬೀರ.—ಒಡೆಯರೇ, ಈ ಭೇದವು ಬಹಳ ಸೂಕ್ಷ್ಮವಾದ್ದರಿಂದ ತಮಗೆ ಕೂಡಲೆ ಹೊಳೆಯಲೊಲ್ಲದು. ತಾವು ಹೆಚ್ಚು ವಿಚಾರ ಮಾಡಿದರೆ ತಿಳಿಯುವುದು.

ಬಾದ.—(ವಿಚಾರಮಾಡಿ) ಬೀರಬಲ್ಲ! ಎಷ್ಟು ಎಣಿಕೆ ಮಾಡಿದರೂ ನಿನ್ನ ಗೂಢಾರ್ಥವು ನನಗೆ ತಿಳಿಯುಲೊಲ್ಲದು. ಅದನ್ನು ನೀನೇ ಬಿಚ್ಚಿ ಹೇಳು. (ಸರದಾರರ ಕಡೆಗೆ ನೋಡಿ) ತಮಗೇನಾದರೂ ಅರ್ಥವಾಗುವು ದೇನು?

ಸರದಾರರು—ನಮಗೇನೂ ತಿಳಿಯುಲೊಲ್ಲದು. ದೊರೆಗಳಿಗೆ ತಿಳಿ ಯದ್ದು ನಮಗೆ ಹೇಗೆ ಗೊತ್ತಾಗುವುದು? ಬೀರಬಲ್ಲನೇ ತಿಳಿಸಿ ಹೇಳಲಿ.

ಬೀರ.—ಪ್ರಭುವರ್ಯರೇ, ಚಿತ್ತಯಿಸಿರಿ. ದೇವರು ಇಡೀ ಜಗತ್ತಿನ ಒಡೆಯನಲ್ಲವೇ?

ಬಾದ.—ಹೌದು. ನಾಸ್ತಿಕರ ಹೊರತು ಎಲ್ಲರೂ ಈ ಮಾತನ್ನು ಒಪ್ಪಿಕೊಳ್ಳುವರು. ಮುಂದೆ?

ಬೀರ.—ನವಖಂಡ ಪೃಥ್ವಿಯಲ್ಲಿ ಒಂದಾದ ಈ ಭರತಖಂಡದ ಒಂದು ಭಾಗದ ಮಾತ್ರ ಒಡೆಯರು ತಾವಲ್ಲವೇ?

ಬಾದ.—ಹೌದು. ಭರತಖಂಡದ ದೊಡ್ಡ ಭಾಗದ ಒಡೆಯನೆಂದು ಕೆಲವರು ಹೇಳಬಹುದು.

ಬೀರ.—ಸಣ್ಣದೇ ಆಗಲಿ, ದೊಡ್ಡದೇ ಆಗಲಿ, ಭರತಖಂಡದ ಭಾಗವೇ ಅಲ್ಲವೆ ತಮ್ಮ ರಾಜ್ಯವು?

ಬಾದ.—ಹೌದು, ಭಾಗವೇ ಸರಿ.

ಬೀರ.—ದೇವರು ಸ್ವರ್ಗ ಮರ್ತ್ಯ ಪಾತಾಳ—ಈ ಮೂರು ಲೋಕಗಳನ್ನು ಆಳುವದಿಲ್ಲವೇ? ಅವನ ಆಡಳಿತಕ್ಕೆ ಒಳಗಾಗದ ರಾಜ್ಯವೇ ಇಲ್ಲವಲ್ಲವೇ?

ಬಾದ.—ಸರಿ, ರಾಜ್ಯವೇ ಇಲ್ಲ. ಸರ್ವ ಸೃಷ್ಟಿಗೂ ಅವನು ಒಡೆಯನಾಗಿರುವನು.

ಬೀರ.—ಯಾವನಾದರೂ ಒಂದು ದೊಡ್ಡ ತಪ್ಪು ಮಾಡಿದರೆ, ತಾವು ಅವನಿಗೆ ಗಡಿದಾಟಿಸುವ ಶಿಕ್ಷೆಯನ್ನು ಕೊಡಬಹುದಲ್ಲವೇ?

ಬಾದ.—ಹೌದು, ಕೊಡಬಹುದು.

ಬೀರ.—ದೇವರಿಗೆ ಇಂತಹ ಶಿಕ್ಷೆಯನ್ನು ಕೊಡಲಿಕ್ಕೆ ಬರುವುದೇ? ಅವನ ರಾಜ್ಯಕ್ಕೆ ಪರಿಮಿತಿಯೇ ಇಲ್ಲವಲ್ಲಾ!!!

ಬಾದ.—ಸರಿಯಾದ ಮಾತು, ದೇವರು ಅಂತಹ ಶಿಕ್ಷೆಯನ್ನು ಕೊಡಲಾರನು.

ಬೀರ.—ಅಂದಬಳಿಕ ದೇವರು ಶಿಕ್ಷಿಸಲಾರದಂತಹ ತಪ್ಪುಗಾರನನ್ನು ತಾವು ಶಿಕ್ಷಿಸಬಲ್ಲಿರೆಂಬುದಕ್ಕೆ ಸಂಶಯವೇನು?

ಬಾದ.—ಬೀರಬಲ್ಲ! ನಿನ್ನ ಅಪ್ರತಿಮವಾದ ಜಾಣ್ಮೆಗೆ ನಾನು ಮೆಚ್ಚಿ ಮರುಳಾದೆನು. ನಿನ್ನ ಅಮಾನುಷಬುದ್ಧಿಯನ್ನು ಎಷ್ಟು ಕೊಂಡಾಡಿದರೂ ಸಾಲದು. ನಾನು ದೇವರಿಗಿಂತ ಅತ್ಯಲ್ಪನಾದ್ದರಿಂದ ದೇವರು ನನ್ನಿಂದಾಗಬಹುದಾದ ಅತ್ಯಲ್ಪ ಕೆಲಸವನ್ನು ಮಾಡಲಾರನೆಂದು ಸಪ್ರಮಾಣವಾಗಿ

ಸಿದ್ಧಮಾಡಿ ತೋರಿಸಿದೆ. ಇದರಿಂದ ನನ್ನ ಕೊಬ್ಬು ಕಡಮೆಯಾಯಿತು. ನಾನು ನಿನಗೆ ಅತ್ಯಂತವಾಗಿ ಕೃತಜ್ಞನಾಗಿದ್ದೇನೆ. ಈ ಕೃತಜ್ಞತೆಯನ್ನು ತೋರಿಸುವ ಉದ್ದೇಶದಿಂದ ಈ ನನ್ನ ಮುತ್ತಿನ ಕಂಠಿಯನ್ನು ನಿನಗೆ ಮೆಚ್ಚುಗೊಡುತ್ತೇನೆ; ಸ್ವೀಕರಿಸಿ ನನ್ನನ್ನು ಉಪಕರಿಸು.

ಬೀರಬಲ್ಲನು ಅತ್ಯಾದರದಿಂದ ಆ ಮುತ್ತಿನ ಕಂಠಿಯನ್ನು ಸ್ವೀಕರಿಸಿ ಬಾದಶಹನ ಕೊಡುಗೈಯನ್ನು ಕೊಂಡಾಡಿದನು. ಇಡೀ ಓಲಗವು ಬೀರಬಲ್ಲನ ಅಸದೃಶವಾದ ಬುದ್ಧಿಸಾಮರ್ಥ್ಯವನ್ನು ಮಿತಿಮೀರಿ ಹೊಗಳಿತು. ಒಡ್ಡೋಲಗವು ಮುಗಿಯಿತು.

## ೮. ಮೈಮರಿಸಿಕೊಂಡ ಅರಸನನ್ನು ಗೊತ್ತುಹಚ್ಚಿದ್ದು

ಒಮ್ಮೆ ಯಾವುದೋ ಒಂದು ಕೆಲಸದ ನಿಮಿತ್ತವಾಗಿ ಅಕ್ಬರ ಬಾದಶಹನು ಬೀರಬಲ್ಲನನ್ನು ಅಹಮ್ಮದನಗರದ ಅರಸನ ಬಳಿಗೆ ಕಳುಹಿದನು. ಬೀರಬಲ್ಲನು ಅಲ್ಲಿಗೆ ಹೋಗಿ ಅರಸನನ್ನು ಕಾಣಲಿಕ್ಕೆ ಅಪ್ಪಣೆಯನ್ನು ಬೇಡಿದನು. ಬೀರಬಲ್ಲನು ಬಲು ಜಾಣನೆಂದು ಹೆಸರುವಾಸಿಯಾಗಿದ್ದುದನ್ನು ಅಹಮ್ಮದನಗರದರಸನು ಕೇಳಿದ್ದುದರಿಂದ ಅವನ ಬುದ್ಧಿಯನ್ನು ಪರೀಕ್ಷಿಸುವುದಕ್ಕೋಸ್ಕರ ಅವನು ತನ್ನ ೭೮ ಮಂದಿ ಸರದಾರರಿಗೆ ತನ್ನಂತೆಯೇ ಪೋಷಾಕು ಮಾಡಿಸಿ, ಓಲಗಕ್ಕೆ ಹೋಗದೆ ಅರಮನೆಯ ಒಂದು ಕೋಣೆಯಲ್ಲಿ ತನ್ನ ಸರದಾರರೊಳಗೆ ಬೆರೆತು ಕುಳಿತುಕೊಂಡು, ಬೀರಬಲ್ಲನನ್ನು ಒಳಗೆ ಬಿಡಹೇಳಿದನು. ಬೀರಬಲ್ಲನು ಒಳಗೆ ಹೋಗಿ ನೋಡಲು ೭೯ ಜನ ಅರಸರು ಕಣ್ಣಿಗೆ ಬಿದ್ದರು. ಅವರ ಉಡಿಗೆತೊಡಿಗೆಗಳು ಒಂದೇ ತೆರನಾಗಿ ಇದ್ದುದರಿಂದ ಬೀರಬಲ್ಲನು ಭೀತಿಗೊಂಡು ಅರಕ್ಷಣ ನಿಂತು ಅವರೊಳಗೆ ಇಂತಹನೇ ಅರಸನೆಂದು ನಿಶ್ಚಯಿಸಿ, ಅವನ ಮುಂದೆ ಅಡ್ಡಬಿದ್ದು ಕೈಜೋಡಿಸಿಕೊಂಡು ನಿಂತನು. ಅರಸನೂ ಅವನ ವೇಷಧಾರಿಯಾದ ಸರದಾರರೂ ಬೆರಗಾಗಿ ಅವನನ್ನು ಮಿಕಿಮಿಕಿ ನೋಡತೊಡಗಿದರು.

ಬೀರ.—(ಅರಸನ ಕಡೆಗೆ ನೋಡಿ) ಮಹಾರಾಜನೇ! ನಾನು ಅಕ್ಬರ ಬಾದಶಹನಿಂದ ಬಂದ ನಿಯೋಗಿಯು.

ಅರಸು — ಈ ಮೇಲಿನ ಆಸನದಲ್ಲಿ ಕುಳಿತುಕೊಳ್ಳಿರಿ. ಬಾದಶಹರಿಗೆ ಕ್ಷೇಮವಷ್ಟೇ.

ಬೀರ. — (ಆಸನದಲ್ಲಿ ಕುಳಿತು) ಎಲ್ಲವೂ ಕ್ಷೇಮವು. ಅವರು ತಮ್ಮ ಕುಶಲವನ್ನು ಕೇಳಿಕೊಂಡು ಬರಲಿಕ್ಕೆ ನನ್ನನ್ನು ಕಳುಹಿದ್ದಾರೆ. ತಮ್ಮಲ್ಲಿ ಎಲ್ಲವೂ ಕುಶಲವೇ ?

ಅರಸು — ಬಾದಶಹರ ಅನುಗ್ರಹಕ್ಕಾಗಿ ನಾವು ಅವರಿಗೆ ಅತ್ಯಂತ ಕೃತಜ್ಞರಾಗಿರುತ್ತೇವೆ. ಆದರೆ ಈಗ ತಮ್ಮನ್ನೊಂದು ಮಾತು ಕೇಳಬೇಕೆಂದು ತವಕಪಡುತ್ತೇವೆ.

ಬೀರ. — ಮಹಾರಾಜರೇ ! ಬೇಕಾದ್ದನ್ನು ಕೇಳಬಹುದು. ಇಲ್ಲಿರುವ ವರೆಗೆ ನಾನು ತಮ್ಮ ದಾಸಾನುದಾಸನಾಗಿದ್ದೇನೆ. ತಾವು ಕೇಳಿದ್ದಕ್ಕೆಲ್ಲ ನನಗೆ ತಿಳಿದ ಮಟ್ಟಿಗೆ ಹೇಳುವೆನು.

ಅರಸು — ತಾವು ಅಮಾನುಷಬುದ್ಧಿಯುಳ್ಳವರೆಂದು ಹೆಸರಾಗಿರುತ್ತೀರಿ. ಅದನ್ನು ಮನಗಾಣಬೇಕೆಂದು ನಾನು ಈ ಸರದಾರರಿಗೆ ನನ್ನ ವೇಷವನ್ನು ಹಾಕಿ ಕುಳ್ಳಿರಿಸಿಕೊಂಡಿದ್ದೆನು. ತಮಗೆ ತೊಂದರೆ ಕೊಡುವ ಬಯಕೆಯಿಂದಲೇ ನಾನು ಅವರ ನಟ್ಟನಡುವೆ ಒಂದು ಪಕ್ಕದಲ್ಲಿ ಕುಳಿತಿದ್ದೆನು. ತಮ್ಮನ್ನು ಮೋಸಗೊಳಿಸಲಿಕ್ಕೆ ಇಷ್ಟು ಎತ್ತುಗಡೆ ಮಾಡಿದ್ದರೂ ತಾವು ನನ್ನನ್ನು ಕೂಡಲೆ ಹೇಗೆ ಗುರುತಿಸಿ ವಂದಿಸಿದಿರೆಂಬುದನ್ನು ತಿಳಿದುಕೊಳ್ಳುವ ಕುತೂಹಲವು ನನ್ನಲ್ಲಿ ಹುಟ್ಟಿದೆ. ನಾನು ಬೇಕೆಂದು ಕೊಟ್ಟ ತೊಂದರೆಯನ್ನು ಕ್ಷಮಿಸಿ ನನ್ನ ಬಯಕೆಯನ್ನು ಪೂರೈಸಬೇಕೆಂದು ಕೋರುತ್ತೇನೆ.

ಬೀರ. — ಮಹಾರಾಜರೇ, ಬೆಂಕಿಯನ್ನು ಮುಚ್ಚಿಡಬಹುದೇ? ಮೋಡಗಳು ಎಷ್ಟು ಮುಸುಕಿದರೂ ಸೂರ್ಯಚಂದ್ರರ ತೇಜಸ್ಸು ಮುಚ್ಚುವುದೇ? ರತ್ನವು ಎಲ್ಲಿ ಬಿದ್ದರೂ ತನ್ನ ಹೊಳಪನ್ನು ತೋರಿಸದೆ ಬಿಟ್ಟೀತೇ? ಮಹಾಸ್ವಾಮಿಾ! ತಾವು ಎಷ್ಟು ಮರೆಮಾಡಲಿಕ್ಕೆ ಯತ್ನಿಸಿದರೂ ತಮ್ಮ ರಾಜತೇಜವು ಅಡಗಲಿಲ್ಲ. ತಮ್ಮ ರಾಜವರ್ಚಸ್ಸಿನಿಂದಲೇ ನಾನು ತಮ್ಮನ್ನು ಗುರುತಿಸಿದೆನೇ ಹೊರತು ನನ್ನಲ್ಲಿ ಮತ್ತಾವ ಸಾಧನವೂ ಇದ್ದಿಲ್ಲ.

ಅರಸು— ಬೀರಬಲ್ಲನೇ! ಇದೇನು ಸೋಜಿಗದ ಮಾತು? ನನ್ನಲ್ಲಿ ಅದಾವ ರಾಜಲಕ್ಷಣವುಂಟು? ನಮ್ಮೆಲ್ಲರ ಉಡುಪಿನಲ್ಲಿಯೂ ಏನೂ ಭೇಧ ವಿಲ್ಲ. ಇದಲ್ಲದೆ ನನ್ನ ಸರದಾರರು ನನಗಿಂತಲೂ ಹೆಚ್ಚು ಚೆಲುವರಾಗಿ ರುತ್ತಾರೆ.

ಬೀರ.— ಸೊಬಗಿನ ಮೇಲೂ ಬೀಳೂ ಒತ್ತಟ್ಟಿಗಿರಲಿ. ತಮ್ಮ ರಾಜ ತೇಜದ ಹೊರತು ಮತ್ತೊಂದು ಅನುಕೂಲದ ಸಂಗತಿಯು ನನಗೆ ನೆರ ವಾಯಿತು. ತಮ್ಮನ್ನು ಗುರುತಿಸಲಿಕ್ಕೆ ಅದರಿಂದ ಹೆಚ್ಚು ಸಹಾಯವಾ ಯಿತು. ಅದೇನೆಂದರೆ, ತಾವು ನನ್ನ ಕಡೆ ನೋಡುತ್ತಿದ್ದಿರಿ, ತಮ್ಮ ಸರ ದಾರರು ತಮ್ಮ ಕಡೆ ನೋಡುತ್ತಿದ್ದರು. ಆದ್ದರಿಂದ ತಾವೇ ಮುಖ್ಯ ರೆಂದು ಅನುಮಾನ ಮಾಡಲಿಕ್ಕೆ ನನಗೆ ಒಳ್ಳೆಯ ಅನುಕೂಲವಾಯಿತು.

ಅರಸು— ಬೀರಬಲ್ಲನೇ! ನಿನ್ನ ಬುದ್ಧಿಗೆ ಎಣೆಯಿಲ್ಲ. ನಿನ್ನ ಜಾಣ್ಮೆಗೆ ಎಲ್ಲೆಯಿಲ್ಲ. ಅಕ್ಬರ ಬಾದಶಹರ ಪೂರ್ವಜನ್ಮದ ಪುಣ್ಯದಿಂದ ನೀನು ಅವ ರಿಗೆ ದೊರೆತಿರುತ್ತಿ. ನಿನ್ನ ಅಮಾನುಷ ಬುದ್ಧಿಶಕ್ತಿಯನ್ನು ಎಷ್ಟು ಹೊಗಳಿ ದರೂ ಸಾಲದು. ನಾವು ನಿನಗೆ ಅಂತಃಕರಣಪೂರ್ವಕವಾಗಿ ಧನ್ಯವಾದ ವನ್ನು ಅರ್ಪಿಸುತ್ತೇವೆ. ದೇವರು ನಿನಗೆ ಕಲ್ಯಾಣ ಮಾಡಲಿ.

ಬೀರ.— ಮಹಾಪ್ರಸಾದ; ಮಹಾರಾಜರಿಗೆ ನಾನು ಅತ್ಯಂತ ಕೃತಜ್ಞ ನಾಗಿರುತ್ತೇನೆ.

## ೯. ಶೌಚಕೂಪದಲ್ಲಿಟ್ಟ ಅಕ್ಬರನ ಭಾವಪಠ

ಒಮ್ಮೆ ಯಾವುದೋ ಒಂದು ರಾಜಕಾರ್ಯದ ನಿಮಿತ್ತವಾಗಿ ಅಕ್ಬರ ಬಾದಶಹನು ಬೀರಬಲ್ಲನನ್ನು ಇರಾಣದ ರಾಜಧಾನಿಯಾದ ತೆಹರಾನಕ್ಕೆ ಕಳುಹಿದನು. ಅಲ್ಲಿಯ **ಶಹನು** ಅವನಿಗೆ ಆತಿಥ್ಯ ಮಾಡಿಟ್ಟುಕೊಂಡು, ಒಂದು ದಿನ ಅವನಿಗೆ ತನ್ನ ಅರಮನೆಯನ್ನೂ ಹೂದೋಟವನ್ನೂ ಅದರ ನೆರೆಯಲ್ಲಿದ್ದ ಶೌಚಕೂಪವನ್ನೂ ತೋರಿಸಿದನು. ಆ ಶೌಚಕೂಪದಲ್ಲಿ ತೂಗಿ ಟ್ಟಿದ್ದ ಅಕ್ಬರ ಬಾದಶಹನ ಭಾವಪಠವನ್ನು ತೋರಿಸಿ “ಬೀರಬಲ್ಲ! ಇದು ಯಾರ ಚಿತ್ರ? ಗೊತ್ತಿದೆಯೊ?” ಎಂದು ಕೇಳಿದನು.

ಬೀರ.—ಜೀಯಾ, ಇದು ನಮ್ಮೊಡೆಯನಾದ ಅಕ್ಬರ ಬಾದಶಹನ ಚಿತ್ರವು.

ಶಹ—ಇದನ್ನು ಇಲ್ಲೇಕೆ ತೂಗುಹಾಕಿಸಿದ್ದೇನೆಂಬುದನ್ನು ಹೇಳ ಬಲ್ಲೆಯಾ?

ಬೀರ.—ಮಹಾಸ್ವಾಮಿ, ಹೇಳಬಲ್ಲೆನು. ಆದರೆ

ಶಹ—ಆದರೆ ಏನು?

ಬೀರ.—ತಾವು ಸಿಟ್ಟಾಗುವುದಿಲ್ಲೆಂದು ಮಾತು ಕೊಟ್ಟರೆ ಹೇಳುವೆನು.

ಶಹ—ಅದಕ್ಕೇಕೆ ಸಿಟ್ಟು? ನಾನು ಮುನಿಯುವುದಿಲ್ಲ. ಹೆದರ ಬೇಡ ಹೇಳು.

ಬೀರ.—ಮಹಾರಾಜರೇ, ನನ್ನ ದಿಟ್ಟತನವನ್ನು ಹೊಟ್ಟೆಯೊಳಗಿಟ್ಟು ಕೊಳ್ಳಿರಿ. ತಮಗೆ ಮಲಬದ್ಧತೆಯ ವಿಕಾರ ಉಂಟೇನು?

ಶಹ—ಹೌದು. ತುಸು ಉಂಟು. ಆದರೆ ಅದು ಇದಕ್ಕೇನು ಸಂಬಂಧ?

ಬೀರ.—ತಾವು ಇಲ್ಲಿ ಕುಳಿತು ನಮ್ಮ ಬಾದಶಹನ ಚಿತ್ರವನ್ನು ನೋಡಿದ ಕೂಡಲೆ ಅವನ ಹೆದರಿಕೆಯಿಂದ ತಮ್ಮ ಮಲಬದ್ಧತೆಯು ಓಡಿ ಹೋಗುತ್ತದೆಂದು ನನ್ನ ಅಲ್ಪಮತಿಗೆ ತೋರುತ್ತದೆ.

ಶಹ—(ನಕ್ಕು) ಬೀರಬಲ್ಲ, ನೀನು ಅತಿ ಜಾಣನು!! ಅಕ್ಬರನಿಗೆ ನಾವು ಹೆದರುವುದೇ? ಅವನ ತಂದೆಯು ನಮ್ಮ ನೆರವಿನಿಂದ ಮರಳಿ ತನ್ನ ಹಿಂದುಸ್ಥಾನದ ರಾಜ್ಯವನ್ನು ಪಡೆಯಲಿಲ್ಲವೇ? ಅದು ನಿನಗೆ ಗೊತ್ತಿಲ್ಲವೇ?

ಬೀರ.—ಹೌದು ಸ್ವಾಮಿ, ಅದು ನನಗೆ ಗೊತ್ತುಂಟು. ಈಗ ಕಾಲವು ತಿರುಗಿರುತ್ತದೆ. ಹುಮಾಯುನ ಬಾದಶಹರ ಅಳುದಕ್ಕಿ ಕಾಲವು ಈಗಿಲ್ಲ. ನಮ್ಮೊಡೆಯನು ತನ್ನ ಧೈರ್ಯಸಾಮರ್ಥ್ಯ ಬುದ್ಧಿಸಾಹಸಗಳಿಂದ ತನ್ನ ರಾಜ್ಯವನ್ನು ಬೆಳಿಸಿ ಬಲಾಢ್ಯನಾದ ಚಕ್ರವರ್ತಿಯಾಗಿರುತ್ತಾನೆ. ಅವನನ್ನು ಕೆಣಕುವವರು ಈ ಹೊತ್ತಿಗೆ ಯಾರೂ ಇಲ್ಲೆಂದು ಹೇಳಿದರೆ ಅತಿಶಯೋಕ್ತಿ ಯಾಗಲಾರದು.

ಶಹ—ಅಕ್ಬರನು ನಮಗಿಂತಲೂ ಬಲಾಢ್ಯನೇನು? ನಮ್ಮ ರಾಷ್ಟ್ರದ ಮೇಲೆ ದಂಡೆತ್ತಿ ಬರುವನೇನು?

ಬೀರ.—ನಮ್ಮೊಡೆಯನು ತಮಗಿಂತ ಬಲಾಢ್ಯನೋ ದುರ್ಬಲನೋ ನನಗೆ ತಿಳಿಯದು. ಅವನು ತಮ್ಮ ಉಪಕಾರವನ್ನು ಯಾವಾಗಲೂ ನೆನಿಸುತ್ತಾನೆಂಬುದು ಮಾತ್ರ ನನಗೆ ಗೊತ್ತುಂಟು. ಅವನೆಂದೂ ತಮ್ಮ ಹಗೆಯನ್ನು ಬಗೆಯಲಾರನು.

ಶಹ—ಬೀರಬಲ್ಲ, ಕಪ್ಪೆಯು ತನ್ನ ಹೊಟ್ಟೆಯನ್ನು ಎಷ್ಟು ಉಬ್ಬಿಸಿದರೂ ಎತ್ತಿಗೆ ಸರಿಯಾಗಲಾರದು; ಮೆಣಸು ಎಷ್ಟು ಹುಳಿತರೂ ಜೋಳಕ್ಕಿಂತ ಹೆಚ್ಚಿನದೇ? ಅಕ್ಬರನು ಎಷ್ಟು ಬೆಳೆದರೂ ನಮಗೆ ಸಾಟಿಯಾಗಲಾರನು. ಇದಲ್ಲದೆ ನೀನು ಹೇಳಿದಂತೆ ಅವನು ನಮ್ಮಿಂದ ಉಪಕೃತನು; ನಮ್ಮ ಆಶ್ರಿತನು; ನಮ್ಮ ಹಿತಚಿಂತಕನು.

ಬೀರ.—ಹಾಗಾದರೆ ತಾವು ಅವನಿಗೆ ಹೆದರುವುದೇಕೆ?

ಶಹ—ನಾವೆಲ್ಲಿ ಹೆದರುತ್ತೇವೆ?

ಬೀರ.—ಈ ಎಡೆಯಲ್ಲಿ ತೂಗಿಟ್ಟ ಚಿತ್ರವೇ ತಮ್ಮ ಅಂಜಿಕೆಯನ್ನು ಹೊರಪಡಿಸುತ್ತದೆ.

ಶಹ—ಬೀರಬಲ್ಲ! ನಿನ್ನ ಕಾಯೂಸವು ತೀರ ತಪ್ಪು. ಅದನ್ನು ಇಲ್ಲಿ ತೂಗಿಟ್ಟ ಕಾರಣವು ಬೇರೆ. ನಿನಗೆ ಅದು ಹೊಳೆಯಲೊಲ್ಲದು.

ಬೀರ.—ನನ್ನ ಕಾಯೂಸವು ತಪ್ಪಾದ್ದಕ್ಕೆ ನಾನು ಸಂತಸಪಡುತ್ತೇನೆ. ನಿಜವಾದ ಕಾರಣವನ್ನು ತಾವು ದಯವಿಟ್ಟು ತಿಳಿಸಿದರೆ ಬಡವನಿಗೆ ಉಪಕಾರ ಮಾಡಿದಂತಾಗುವುದು.

ಶಹ—ಅದನ್ನು ಹೇಳುವುದರಿಂದ ಪ್ರಯೋಜನವೇನು? ಅದನ್ನು ಬಚ್ಚಿಡುವುದು ಸರಿಯಾದ ಕೆಲಸವೆಂದು ತೋರುತ್ತದೆ. ಅದನ್ನು ಹೊರಗೆಡುವುದು ಈಗ ಸಮವಾಗಲಾರದು.

ಬೀರ.—ರಾಜಾಧಿರಾಜರೇ! ತಾವು ಬಲಿಷ್ಠರು, ಅಕ್ಬರ ಬಾದಶಹನ ತಂದೆಗೆ ದೊಡ್ಡ ಉಪಕಾರ ಮಾಡಿದವರು. ತಾವು ಈ ಕಾರಣವನ್ನು

ಬಚ್ಚಿಡಲು ಎತ್ತುಗಡೆ ಮಾಡುವುದೇಕೆ? ತಾವು ಹಾಗೆ ಮಾಡಿದರೆ ನಮ್ಮೊಡೆಯನನ್ನು ತಾವು ಪ್ರೀತಿಸುವುದಿಲ್ಲೆಂದು ಸ್ಪಷ್ಟವಾಗಿ ತೋರುವ್ರದಿಲ್ಲವೇ? ಇದರಿಂದ ತಮ್ಮಿಬ್ಬರೊಳಗೆ ಒಡಕು ಹುಟ್ಟಬಹುದಲ್ಲವೇ? ಗೆಳೆತನದ ಬದಲು ಹಗೆತನವು ಮೊಳೆಯಲಿಕ್ಕಿಲ್ಲವೇ? ಇಂತು ನಿಷ್ಕಾರಣವಾಗಿ ಕೆಣಕುವುದು ರಾಜನೀತಿಗೆ ವಿರುದ್ಧವಲ್ಲವೇ? ಉಗುರಲ್ಲಿ ಹೋಗುವುದಕ್ಕೆ ಕೊಡಲಿ ಏಕೆ? ತಾವು ಬಲ್ಲವರು, ಅಕ್ಬರನಲ್ಲಿ ಮರುಕುಳ್ಳವರು. ಕಾರಣವನ್ನು ದಯವಿಟ್ಟು ಹೇಳಿರಿ. ಅದು ಸರಿಕಂಡರೆ ನಮ್ಮೊಡೆಯನಿಗೆ ಅದನ್ನು ದೂರ ಮಾಡಲಿಕ್ಕೆ ಅರಿಕೆ ಮಾಡಿಕೊಳ್ಳುವೆನು. ಅದು ತಪ್ಪು ತಿಳಿವಳಿಕೆಯ ಪರಿಣಾಮವಾಗಿದ್ದರೆ ತಾವು ಈ ಚಿತ್ರವನ್ನು ತಕ್ಕ ಎಡೆಯಲ್ಲಿರಿಸಬಹುದು.

ಶಹ—ಬೀರಬಲ್ಲ! ನೀನು ಹೇಳಿದ ಮಾತು ಸರಿಯೆಂದು ತೋರುತ್ತದೆ. ನಾನು ಹಟ ಹಿಡಿಯುವುದಿಲ್ಲ. ನನ್ನ ಕಾರಣವನ್ನು ತಿಳಿಸುವೆನು. ಅದು ಸರಿಯಾದ್ದೆಂದು ನೀನು ನಿಶ್ಚಯವಾಗಿ ಒಪ್ಪಿಕೊಳ್ಳುವೆ. ನಿಮ್ಮ ಬಾದಶಹನಿಗೆ ನಮ್ಮ ಕೋರಿಕೆಯನ್ನು ತಿಳಿಸಿ ಅದರಂತೆ ನಡೆಯಲಿಕ್ಕೆ ಅವನಿಗೆ ಬುದ್ಧಿ ಹೇಳು.

ಬೀರ. — ಮಹಾಸ್ವಾಮಿ, ನನ್ನೊಡೆಯನು ಹಟಮಾರಿಯಲ್ಲ. ಅವನು ಬಲು ವಿವೇಕಿಯು. ತನ್ನ ತಪ್ಪನ್ನು ಕೂಡಲೆ ಒಪ್ಪಿಕೊಂಡು ಅದನ್ನು ತಿದ್ದಿಕೊಳ್ಳುವನು. ಎಂದೂ ದುರಾಗ್ರಹಕ್ಕೆ ಎಡೆಗೊಡನು. ಅವನು ತನ್ನ ತಂದೆಗೆ ತಾವು ಮಾಡಿದ ಉಪಕಾರವನ್ನು ಇನ್ನೂ ಮರೆತಿಲ್ಲ. ಆಗಿಂದಾಗ ಅದನ್ನು ನೆನೆದು ತಮ್ಮನ್ನು ಮನಮುಟ್ಟಿ ಹೊಗಳುತ್ತಾನೆ.

ಶಹ—ಹಾಗಾದರೆ ಇಲ್ಲಿ ಈ ಚಿತ್ರವನ್ನು ಏಕೆ ತೂಗುಹಾಕಿಸಿರುತ್ತೇನೆಂಬುದರ ದಿಟವಾದ ಕಾರಣವನ್ನು ಹೇಳುತ್ತೇನೆ ಕೇಳು. ಹುಮಾಯುನನಿಗೆ ನೆರವಾಗುವಾಗ ನಾವು ಅವನಿಂದೊಂದು ಪ್ರಮಾಣ ಮಾಡಿಸಿದ್ದೆವಷ್ಟೇ. ಆ ಪ್ರಮಾಣವನ್ನು ಅವನೂ ಅವನ ಮಗನೂ ಪಾಲಿಸಲಿಲ್ಲೆಂದು ಅಕ್ಬರನ ಚಿತ್ರವನ್ನು ಈ ಎಡೆಯಲ್ಲಿ ತೂಗ ಹಾಕಿಸಿದ್ದೇನೆಯೇ ಹೊರತು ಬೇರೆ ಮತ್ತಾವ ಕಾರಣವೂ ಇಲ್ಲ.

ಬೀರ.—ತಾವು ಏನೆಂದು ಪ್ರಮಾಣ ಮಾಡಿಸಿದ್ದೀರಿ? ಅದನ್ನು ಪಾಲಿಸಲಿಲ್ಲೆಂದು ತಮಗೆ ಹೇಗೆ ಗೊತ್ತಾಯಿತು?

ಶಹ—ಅಕ್ಬರನ ತಂದೆಯಾದ ಹುಮಾಯುನನು ರಾಜ್ಯವನ್ನು ಕಳೆಕೊಂಡು ತಲ್ಲಣಿಸುತ್ತ ನನ್ನ ಆಶ್ರಯದಲ್ಲಿ ಬಂದು ನಿಂತನಷ್ಟೇ. ಅವನು **ಸುನ್ನಿ** ಮತದವನಾಗಿದ್ದನು. ಅವನು ನಮ್ಮ ನೆರವನ್ನು ಕೇಳಲು, ತನ್ನ ಮತವನ್ನು ಬಿಟ್ಟು ನಮ್ಮ ಪವಿತ್ರವಾದ **ಸಿಯಾ** ಮತವನ್ನು ಕೈಕೊಂಡರೆ ಮಾತ್ರ ನಾವು ದಂಡಿನ ಸಹಾಯವನ್ನು ಕೊಡುವೆವು; ಇಲ್ಲವಾದರೆ ಕೊಡುವುದಿಲ್ಲ ಎಂದು ಸ್ಪಷ್ಟವಾಗಿ ಅವನಿಗೆ ತಿಳಿಸಿದೆವು. ಅದಕ್ಕವನು ಕೆಲದಿವಸ ಎಣಿಕೆಹಾಕಿ **ಸಿಯಾ** ಮತವನ್ನು ಸ್ವೀಕರಿಸಲಿಕ್ಕೂ ಅದನ್ನು ಹಿಂದುಸ್ಥಾನದಲ್ಲಿ ಹಬ್ಬಿಸಲಿಕ್ಕೂ ಒಡಂಬಟ್ಟು, ನಮ್ಮ ಒತ್ತಾಸೆಯನ್ನು ಪಡೆದು, ತನ್ನ ಪಿತರಾರ್ಜಿತ ರಾಜ್ಯವನ್ನು ಮರಳಿ ಪಡೆದನು. ಅವನು ಸತ್ತ ಬಳಿಕ ಅಕ್ಬರನು ತನ್ನ ತಂದೆಯ ರಾಜ್ಯವನ್ನು ಬೆಳಿಸಿದನು. ಆದರೆ ಅವರಿಬ್ಬರು ನಮ್ಮ ಸಿಯಾ ಪಂಥವನ್ನು ಹಿಂದುಸ್ಥಾನದಲ್ಲಿ ಮಾತು ಕೊಟ್ಟಂತೆ ಬೆಳಿಸಲಿಲ್ಲ. ಹುಮಾಯುನನು ಬೇಗನೆ ಸತ್ತುದರಿಂದ ಅಕ್ಬರನ ತಪ್ಪೇ ದೊಡ್ಡದಾಗಿರುತ್ತದೆ. ಆದ್ದರಿಂದ ಅವನ ಭಾವಪಟವನ್ನು ಈ ಹೊಲಸು ಎಡೆಯಲ್ಲಿ ತೂಗಹಾಕಿಸಿರುತ್ತೇವೆ. ಈ ಕಾರಣದ ಹೊರತು, ಮತ್ತಾವ ಕಾರಣವೂ ಇಲ್ಲ.

ಬೀರ.—ಮಹಾಸ್ವಾಮಿ, ತಮ್ಮ ಸ್ಪಷ್ಟೋಕ್ತಿಯನ್ನೂ ಉದಾತ್ತ ವಿಚಾರಗಳನ್ನೂ ಕೇಳಿ ನನಗೆ ಬಹಳ ಸಂತೋಷವಾಯಿತು. ತಾವು ಕಾರಣವನ್ನು ಹೇಳಿದ್ದು ರಾಜಕೀಯ ದೃಷ್ಟಿಯಿಂದ ಬಲು ಲೇಸಾಯಿತು. ನಮ್ಮೊಡೆಯನು ಮೋಸ ಮಾಡಿದನೆಂಬ ಎಣಿಕೆಯಿಂದ ಅವನೊಡನೆ ಜಗಳ ಹೂಡದೆ, ಅವನ ಚಿತ್ರವನ್ನು ಇಲ್ಲಿಟ್ಟಿದ್ದು ತಮ್ಮ ಉದಾರಬುದ್ಧಿಯನ್ನೂ ಕನಿಕರವನ್ನೂ ಹೊರಗೆಡುವುತ್ತದೆ. ನಮ್ಮೊಡೆಯನು ಸುನ್ನಿ ಮತಕ್ಕೆ ಮಾತ್ರವೇ ಆಸರ ಕೊಡುತ್ತಾನೆಂದು ತಮಗೆ ಯಾರು ಹೇಳಿದರು?

ಶಹ—ಹೇಳಿದವರ ಹೆಸರನ್ನು ನಾನು ಹೊರಗೆಡವಲಾರೆನು. ಹಿಂದುಸ್ಥಾನದಿಂದ ಬಂದವರೆಲ್ಲ ಅಕ್ಬರನು ಸಿಯಾ ಮತವನ್ನು ಹಬ್ಬಿಸಲಿಕ್ಕೆತ್ತುಗಡೆ ಮಾಡುವುದಿಲ್ಲೆಂದು ಹೇಳುತ್ತಾರೆ. ಇದು ಸುಳ್ಳೇ?

ಬೀರ.—ಮಹಾರಾಜನೇ, ಅವರು ಹೇಳಿದ್ದು ಸಟಿಯಲ್ಲದಿದ್ದರೂ ದಿಟವಾಗಲಾರದು. ಹಿಂದುಸ್ಥಾನದಲ್ಲಿ ಸಿಯಾ ಮತದ ಉದಾರವಿಚಾರಗಳನ್ನೊಳಗೊಂಡ ಮತ್ತು ಅದಕ್ಕೂ ಬಹಳ ಹಳೆಯದಾದ ಹಿಂದೂ ಮತವು ಹಬ್ಬಿರುವುದು. ನಾನು ಆ ಮತಕ್ಕೆ ಸೇರಿದವನು. ಆ ಮತಕ್ಕೆ ನಮ್ಮ ಬಾದಶಹನು ಆದರ ತೋರಿಸುತ್ತಿರುವುದರಿಂದ ನನ್ನಂತಹರು ಅವನ ಊಳಿಗದಲ್ಲಿ ಸೇರಿರುತ್ತೇವೆ. ತಮ್ಮ ದೇಶದಿಂದ ಬಂದ ಎಷ್ಟೋ ಜನ ಪಂಡಿತರಿಗೆ ಉದಾರಾಶ್ರಯ ಕೊಟ್ಟುದರಿಂದ ತಮ್ಮ ಮತದ ಪ್ರಾಬಲ್ಯವು ಆ ದೇಶದಲ್ಲಿ ಹೆಚ್ಚುತ್ತಲಿದೆ. ಷೇಕ್‌ಮುಬಾರಿಕ್, ಅಬುಲ್‌ಫಾಯಿಜ, ಅಬುಲ್‌ಫಾಜಲ್ ಮುಂತಾದ ಕವಿಶ್ರೇಷ್ಠರೂ ತತ್ವವಿಚಾರಿಗಳೂ ಅಕ್ಬರನ ಒಡ್ಡೋಲಗವನ್ನು ಅಲಂಕರಿಸಿರುತ್ತಾರೆ. ಆದ್ದರಿಂದ ನಮ್ಮೊಡೆಯನು ತಮ್ಮ ಸಿಯಾ ಮತಕ್ಕೆ ಮಿತ್ರನೇ ಹೊರತು ಶತ್ರುವಲ್ಲ. ಇದಲ್ಲದೆ ನಮ್ಮೊಡೆಯನಿಗೆ ಧರ್ಮವಿಚಾರ ಮಾಡಲಿಕ್ಕೆ ಬಿಡುವೇ ಇಲ್ಲ. ಅವನಿಗೆ ಹಿಂದೂ ಮತದ ರಜಪೂತರೂ ಕೆಲವು ಮುಸಲ್ಮಾನ ಸರದಾರರೂ ಪ್ರಬಲರಾದ ಹಗೆಗಳಾಗಿರುತ್ತಾರೆ. ಶತ್ರುಗಳನ್ನು ಮುರಿಬಡಿಯುವುದರಲ್ಲಿಯೂ ದ್ರೋಹಿಗಳನ್ನು ಅಡಗಿಸುವುದರಲ್ಲಿಯೂ ಅವನು ತೊಡಗಿರುವುದರಿಂದ ಅವನಿಗೆ ಬೇರೆ ದೊಡ್ಡ ವಿಚಾರ ಮಾಡಲಿಕ್ಕೆ ಅವಕಾಶವೇ ಇಲ್ಲ. ಹೇಗೇ ಇರಲಿ, ಅವನು ಸಿಯಾ ಮತದವರಿಗೆ ಹೆಚ್ಚು ಉದಾರಾಶ್ರಯವನ್ನು ಕೊಡುತ್ತಾನೆಂದು ನಾನು ಖಂಡಿತವಾಗಿ ಹೇಳಬಲ್ಲೆನು. ಸ್ವಾರ್ಥಪರರು ತಂತಮ್ಮ ಬೇಳೆ ಬೆಯ್ಸಿಕೊಳ್ಳುವುದಕ್ಕೆ ಅರೆಸಟಿಯನ್ನಾಡಿ ತಮ್ಮ ನಿರ್ಮಲಾಂತಃಕರಣವನ್ನು ಕಲುಷಿತವಾಗಿ ಮಾಡಲಿಕ್ಕೆ ಯತ್ನಿಸುತ್ತಾರೆಂದು ತಿಳಿಸಲಿಕ್ಕೆ ಬಲು ವಿಷಾದಿಸುತ್ತೇನೆ. ತಾವು ಬಲ್ಲವರು, ರಾಜನೀತಿ ಪ್ರವೀಣರು, ಹುಮಾಯುನನನ್ನು ಸಲುಹಿದವರು, ಅವನ ಮಗನಾದ ಅಕ್ಬರನಲ್ಲಿ ಕನಿಕರವುಳ್ಳವರು, ದೂರದೃಷ್ಟಿಯುಳ್ಳವರು, ಜಾಣರು. ಆದ್ದರಿಂದ ತಾವು ಅನುಗ್ರಹ ಮಾಡಿ ಈ ತಪ್ಪು ತಿಳಿ

ವಳಿಕೆಯನ್ನು ದಯವಿಟ್ಟು ಬಿಟ್ಟುಬಿಡಬೇಕೆಂದು ಸೆರಗೊಡ್ಡಿ ಬೇಡಿಕೊಳ್ಳು ತ್ತೇನೆ.

ಶಹ—ಹೀಗೆಯೋ? ಅಕ್ಬರನು ದಿಟವಾಗಿ ಸಿಯಾ ಮತದವರಿಗೆ ಆಶ್ರಯ ಕೊಡುತ್ತಿದ್ದಾನೆಯೋ? ಷೇಕ್‌ಮುಬಾರಿಕ ಮುಂತಾದವರು ಸಿಯಾ ಮತದವರೇ? ಅಬುಲ್‌ಫಾಜಿಯು ಆಸ್ಥಾನಕವಿಯೇ? ಅಬುಲ್ ಫಾಜಲ್ಲನು ಮಂತ್ರಿಯೇ? ಇವರೆಲ್ಲ ಸಿಯಾ ಮತದವರೇ? ಅಕ್ಬರನು ಸುನ್ನಿ ಮತದವರನ್ನು ಹೆಚ್ಚು ಪ್ರೋತ್ಸಾಹಿಸುವುದಿಲ್ಲವೇ?

ಬೀರ.—ಮಹಾರಾಜನೇ, ನಮ್ಮ ಭಾದಶಹನು ಸುನ್ನಿ ಮತದವರನ್ನು ಹೆಚ್ಚು ಪ್ರೋತ್ಸಾಹಿಸುವುದಿಲ್ಲೆಂದು ನಾನು ಪ್ರಮಾಣಪೂರ್ವಕವಾಗಿ ಹೇಳು ತ್ತೇನೆ. ಅವನು ಗುಣಗ್ರಾಹಿಯು. ಅವನು ಸಿಯಾ ಮತದಲ್ಲಿ ಯೋಗ್ಯ ರಾದವರನ್ನು ಮುಂದಕ್ಕೆ ಕರೆದು ಆಶ್ರಯ ಕೊಡುತ್ತಾನೆ. ಅವನು ತಮ ಉಪಕಾರವನ್ನೂ ಮತವನ್ನೂ ಮರೆತಿಲ್ಲ.

ಶಹ.—ಬೀರಬಲ್ಲನೇ, ವಸ್ತುಸ್ಥಿತಿಯನ್ನು ತಿಳಿಸಿದ ಬಗ್ಗೆ ನಿನ್ನ ಉಪ ಕಾರವನ್ನು ಎಣಿಸುತ್ತೇನೆ. ನನ್ನ ಮನಸ್ಸಿನ ಕಲ್ಮಷವು ಹೋಯಿತು. (ಆಳಿನ ಕಡೆಗೆ ನೋಡಿ) ಈ ಚಿತ್ರವನ್ನು ತೆಗೆದು ಓಲಗದಲ್ಲಿ ತೂಗಹಾಕಿರಿ.

ಬೀರ.—ಮಹಾರಾಜರಿಗೆ ಜಯವಾಗಲಿ.

## ೨ನೆಯ ಪ್ರಕರಣ

## ವಿನೋದ

### ೧. ಕತ್ತೆಯ ಹೊರೆ

ಒಂದು ದಿವಸ ಬಾದಶಹನೂ ಬೇಗಮ್ಮನೂ ಬೀರಬಲ್ಲನನ್ನು ಸಂಗಡ ಕರೆದುಕೊಂಡು ಹೂದೋಟಕ್ಕೆ ಹೊರಟರು. ಅಲ್ಲಿ ಕೆಲಹೊತ್ತು ಅಡ್ಡಾಡಿ, ಹೂಗಳ ಸುವಾಸನೆಯನ್ನನುಭವಿಸಿ ಹಣ್ಣುಹಂಪಲುಗಳನ್ನು ಮೆದ್ದು, ಒಂದು ಕೊಳದ ದಡದಲ್ಲಿ ದಣವಾರಿಸಿಕೊಳ್ಳಲಿಕ್ಕೆ ಕುಳಿತರು. ಆಗ ಬಾದಶಹ ಬೇಗಮ್ಮರ ಮನಸ್ಸಿನಲ್ಲಿ ನೀರಾಟ ಆಡಬೇಕೆಂಬ ಬಯಕೆ ಹುಟ್ಟಿದ್ದರಿಂದ

ಅವರು ತಮ್ಮ ಮೇಲರಿವೆಗಳನ್ನೆಲ್ಲ ಬೀರಬಲ್ಲನ ಕೈಯಲ್ಲಿ ಕೊಟ್ಟು ನೀರಿನಲ್ಲಿ ಳಿದರು. ಬೀರಬಲ್ಲನು ಅವರ ತೊಡಿಗೆಗಳನ್ನೆಲ್ಲ ತನ್ನ ಹೆಗಲ ಮೇಲೆ ಹಾಕಿ ಕೊಂಡು ಅವರ ಜಲಕ್ರೀಡೆಯನ್ನು ನೋಡುತ್ತ ಸರೋವರದ ಮೆಟ್ಟಲಿನ ಮೇಲೆ ಕುಳಿತುಕೊಂಡನು. ಸ್ವಲ್ಪ ಹೊತ್ತಿನ ಮೇಲೆ ಬಾದಶಹನು ಅವ ನನ್ನು ನೋಡಿ—

ಬೀರಬಲ್ಲ, ಇದೇನು? ಒಂದು ಕತ್ತೆಯ ಹೊರೆಯನ್ನೇ ಹೊತ್ತು ಕೊಂಡಿರುತ್ತಿಯಲ್ಲ!

ಬೀರ.—ಮಹಾರಾಜ, ಒಂದು ಕತ್ತೆಯ ಹೊರೆಯೇಕೆ, ಎರಡು ಕತ್ತೆ ಗಳ ಹೊರೆಯನ್ನು ಹೊತ್ತುಕೊಂಡಿರುತ್ತೇನೆ.

ಬಾದ.—ಬೀರಬಲ್ಲ! ನಮ್ಮನ್ನು ಕತ್ತೆಗೆ ಹೋಲಿಸುತ್ತೀಯೇನು?

ಬೀರ.—ಮಹಾಸ್ವಾಮಿ, ನಾನು ಹಾಗೆಲ್ಲಿ ಹೇಳಿದೆನು? ತಾವು ಒಂದು ಕತ್ತೆಯ ಹೊರೆಯೆಂದು ಲೆಕ್ಕತಪ್ಪಿ ಹೇಳಿದ್ದರಿಂದ, ನಾನು ಲೆಕ್ಕವನ್ನು ಸರಿಮಾಡಿ ಎರಡು ಕತ್ತೆಯ ಹೊರೆಯೆಂದು ಮಾತ್ರ ಹೇಳಿದೆನು.

ಈ ತಕ್ಕ ಮರುಮಾತನ್ನು ಕೇಳಿ ಬಾದಶಹ ಬೇಗಮ್ಮರು ನಲಿದು ಗಹಗಹಿಸಿ ನಕ್ಕರು.

## ೨. ಅರಸನು ಪ್ರಜೆಗಳ ತಂದೆಯು

ಒಮ್ಮೆ ಒಬ್ಬ ಪಾತರದವಳ ಮಗನು ತಪ್ಪು ಮಾಡಿದ್ದರಿಂದ ಅವನ ವಿಚಾರಣೆಯು ನಡೆಯಿತು. ಅವನ ತಾಯಿಯು ಅವನ ಪರವಾಗಿ ಸಾಕ್ಷಿ ಕೊಡಲಿಕ್ಕೆ ಬಾದಶಹನ ಮುಂದೆ ಬಂದಳು. ಆಗ ಅಕ್ಬರನು ಅಪರಾಧಿಯ ತಂದೆಯ ಹೆಸರೇನೆಂದು ಆಕೆಯನ್ನು ಕೇಳಿದನು. ಆಕೆಯು ಆ ಹೆಸರನ್ನು ಹೇಳಲಾರದೆ ಸುಮ್ಮನೆ ನಾಚಿಕೊಂಡು ನಿಂತಳು. ಬಾದಶಹನು ಮತ್ತೆ ಮತ್ತೆ ಕೇಳಲು ಆಕೆಯು ತಲೆ ಬಾಗಿಸಿಕೊಂಡು ಮಾತಾಡದೆ ನಿಂತಿದ್ದಳು. ಆಗ ಬೀರಬಲ್ಲನು "ಮಹಾರಾಜರೇ, ಈಕೆಯು ಹಾದರಗಿತ್ತಿಯಾದ್ದರಿಂದ ಯಾವನ ವೀರ್ಯದಿಂದ ಈ ತಪ್ಪುಗಾರನು ಹುಟ್ಟಿದನೆಂಬುದು ಈಕೆಗೆ ಗೊತ್ತಿರಲಿಕ್ಕಿಲ್ಲ, ಅಥವಾ ಗೊತ್ತಿದ್ದರೂ ಅಂಥವರ ಹೆಸರು ಹೇಳುವುದು

ಆಕೆಯ ಧರ್ಮವಲ್ಲ. ಆದ್ದರಿಂದ ಇದಕ್ಕೆ ಉತ್ತರವನ್ನು ಬಯಸದೆ, ಎಲ್ಲ ಜಗತ್ತಿಗೂ ತಂದೆಯಾದ ದೇವರ ಹೆಸರನ್ನಾಗಲಿ ಎಲ್ಲ ಪ್ರಜೆಗಳ ತಂದೆಯಾದ ತಮ್ಮ ಹೆಸರನ್ನಾಗಲಿ ಬರೆದುಕೊಳ್ಳಬಹುದು," ಎಂದು ಅರಿಕೆ ಮಾಡಿದನು. ಬೀರಬಲ್ಲನ ಈ ಸರಿಯಾದ ಮಾತನ್ನು ಕೇಳಿ ಬಾದಶಹನು ಸಂತುಷ್ಟನಾದನು.

## ೩. ಹೆಸರುಹೊಳೆಗಳನ್ನು ದಾಟಲಿಕ್ಕೆ ದೋಣಿ ಬೇಕು

ಒಂದು ದಿನ ರಾತ್ರಿ ಅಕ್ಬರ ಬಾದಶಹನು ಬೀರಬಲ್ಲನೊಡನೆ ಮರುವೇಷ ಹಾಕಿಕೊಂಡು ಜನರ ಸ್ಥಿತಿಗತಿಗಳನ್ನು ನೋಡಲಿಕ್ಕೆ ಹೊರಟನು. ಬೀದಿಯಲ್ಲಿ ಬುರಕಿ ಹಾಕಿಕೊಂಡಿದ್ದ ಒಬ್ಬ ಹೆಂಗಸು ಅವರ ಕಣ್ಣಿಗೆ ಬಿದ್ದಳು. ಆಕೆಯು ಮೈಮೇಲೆ ಚಿನ್ನ, ಮುತ್ತುರತ್ನದ ನಗಗಳನ್ನು ಇಟ್ಟುಕೊಂಡಿದ್ದುದಲ್ಲದೆ ನಡುಹರೆಯದವಳಾಗಿ ಕಂಡುಬಂದಳು. ಅಷ್ಟು ಹೊತ್ತಾದ ರಾತ್ರಿಯಲ್ಲಿ ಸಿರಿವಂತ ಯುವತಿಯು ಒಂಟಿಯಾಗಿ ಬೀದಿಯಲ್ಲಿ ಹೋಗುವುದನ್ನು ನೋಡಿ ಬಾದಶಹ ಬೀರಬಲ್ಲರು ಸಂಶಯಗೊಂಡು ಆಕೆಯ ಹತ್ತಿರಕ್ಕೆ ಹೋದರು.

**ಬಾದಶಹ**—ಏನಮ್ಮಾ, ತಾವು ಯಾರು? ತಮ್ಮ ಹೆಸರೇನು?

**ಹೆಂಗಸು**—ನಾನು **ಬ್ರಹ್ಮಪುತ್ರ**ಸೆಟ್ಟಿಯ ಮಗಳು, ನನ್ನ ಹೆಸರು **ಗಂಗಾ**.

**ಬಾದ.**—ತಮ್ಮ ತಾಯಿಯ ಹೆಸರೇನು?

**ಹೆಂ.**—ನಮ್ಮ ಅವ್ವನ ಹೆಸರು **ಯಮುನಾ.**

**ಬಾದ.**—ತಮ್ಮ ಅಕ್ಕತಂಗಿಯರು ಎಷ್ಟು ಮಂದಿ? ಅವರ ಹೆಸರುಗಳೇನು?

**ಹೆಂ.**—ನನಗೆ ೫ ಜನ ಅಕ್ಕತಂಗಿಯರಿರುತ್ತಾರೆ. ಅವರ ಹೆಸರು—**ಸರಸ್ವತಿ, ನರ್ಮದಾ, ಕೃಷ್ಣಾ, ತುಂಗಾ, ಕಾವೇರಿ.**

**ಬೀರ.**—ತಂಗೀ, ಸಾಕುಮಾಡು. ಈ ಎಲ್ಲ ನದಿಗಳನ್ನೂ ದಾಟಲಿಕ್ಕೆ ಒಂದು ದೋಣಿಯೇ ಬೇಕು. ನಾವು ಒಂದು ದೋಣಿಯನ್ನು ಗೊತ್ತು

ಮಾಡಿಕೊಂಡು ಬಂದ ಬಳಿಕ ಉಳಿದ ಹೆಸರುಗಳನ್ನು ಕೇಳುವೆವು. ಈ ಪ್ರಶ್ನೋತ್ತರಗಳನ್ನು ಸ್ವಲ್ಪ ತಡೆಯಿರಿ. ಈ ಹೊಳೆಗಳಲ್ಲಿ ನಾವು ಮುಳುಗಬಹುದು, ಖುದಾವಂದ ನಡೆಯಿರಿ; ಓಡಿಹೋಗಿ ಪಾರಬೀಳೋಣ.

ಬೀರಬಲ್ಲನ ಈ ಸೋಜಿಗದ ಮಾತನ್ನು ಕೇಳಿ ಆ ಹೆಂಗಸೂ ಬಾದಶಹನೂ ಕಿಲಿಕಿಲಿ ನಕ್ಕು ಹೊರಟುಹೋದರು. ಬೀರಬಲ್ಲನು ಬಾದಶಹನ ಹಿಂದೆಯೇ ನಡೆದನು.

## ೪. ಮಾವಿನ ಹಣ್ಣಿನ ಸಿಪ್ಪೆ

ಬೇಸಗೆಯಲ್ಲಿ ಒಂದು ದಿವಸ ಬಾದಶಹ-ಬೇಗಮ್ಮರು ಮಾವಿನ ಹಣ್ಣನ್ನು ತಿನ್ನುತ ಕುಳಿತಿರುವಾಗ, ಬಾದಶಹನು ತಾನು ತಿಂದ ಹಣ್ಣಿನ ಸಿಪ್ಪೆಯನ್ನೂ ಗೊರಟನ್ನೂ ಬೇಗಮ್ಮಳು ಚೆಲ್ಲಿದ ಸಿಪ್ಪೆಗೊರಟಗಳಲ್ಲಿ ಚೆಲ್ಲಿ, ಆ ರಾಸಿಯು ಕಡೆಗೆ ಬೆಟ್ಟು ತೋರಿಸಿ, “ನಾನು ಇಷ್ಟು ಹೊತ್ತಾದರೂ ಒಂದು ಹಣ್ಣನ್ನು ಕೂಡ ತಿಂದಿಲ್ಲ. ನೀನು ತಿಂದ ಹಣ್ಣಿನ ಗೊರಟೆಗಳ ರಾಸಿಯೇ ಬಿದ್ದಿರುತ್ತದೆ. ನೀನು ಬಲು ತಿನ್ನಾಸಿಕಿ.”

**ಬೇಗ.**—ನಾನು ತಿನ್ನಾಸಿಕೆಯೇ ? ನನ್ನ ಎರಡಷ್ಟು ಹಣ್ಣು ತಿಂದು ಸಿಪ್ಪೆಗೊರಟೆಗಳನ್ನು ನನ್ನ ಹತ್ತರ ಚೆಲ್ಲಿ ತಾವು ಏನೂ ತಿಂದಿಲ್ಲೆನ್ನಬಹುದೇ?

**ಬಾದ.**—ನಾನು ಒಂದು ಹಣ್ಣನ್ನಾದರೂ ತಿಂದಿಲ್ಲ. ಅವೆಲ್ಲ ನೀನು ತಿಂದ ಹಣ್ಣಿನವೇ ಸರಿ.

ಅಷ್ಟರಲ್ಲಿ ಬೀರಬಲ್ಲನು ಅಲ್ಲಿಗೆ ಬಂದು ಸಲಾಮು ಮಾಡಿ ಕುಳಿತನು.

**ಬಾದ.**—ಬೀರಬಲ್ಲ, ಇಲ್ಲಿ ನೋಡು. ಈಕೆ ಎಷ್ಟು ಹಣ್ಣು ತಿಂದಿರುತ್ತಾಳೆ. ಈಕೆ ಹೊಟ್ಟೆಬಾಕಳಲ್ಲವೇ?

**ಬೇಗ.**—ಬೀರಬಲ್ಲ, ಅವರ ಮಾತನ್ನು ನಂಬಬೇಡ. ಅವರು ಸುಳ್ಳು ಹೇಳುತ್ತಾರೆ. ಈ ಹಣ್ಣುಗಳಲ್ಲಿ ನಾನು ನಾಲ್ಕರಲ್ಲಿ ಒಂದು ಪಾಲನ್ನಾದರೂ ತಿಂದಿಲ್ಲ. ಹೊಟ್ಟೆ ಬಾಕರಾರೆಂಬುದನ್ನು ನೀನೇ ನಿರ್ಣಯಿಸು.

**ಬೀರ.**—ಮಹಾರಾಜ, ಬೇಗಮ್ಮ ಸಾಹೇಬರು ಹೊಟ್ಟೆ ಬಾಕರೆಂದು ತಾವು ಹೇಳೋಣಾಯಿತು. ತಮ್ಮ ಮಾತು ಸರಿಯಾಗಿದ್ದರೂ ಇರಬಹುದು. ಆದರೆ—

**ಬಾದ.** — ಕಿಲಕಿಲನೆ ನಕ್ಕು ಬೇಗಮ್ಮಳ ಕಡೆ ನೋಡಿ ನಕ್ಕು, ನೀನು ಹೊಟ್ಟೆಬಾಕೆಯೆಂದು ತೀರ್ಮಾನವಾಯಿತು!! (ಬೇಗಮ್ಮಳ ಮೋರೆ ಒಣಗಿತು).

**ಬೀರ.** — ಮಹಾಸ್ವಾಮಿಾ, ನನ್ನ ಮಾತನ್ನು ಪೂರಾ ಕೇಳಿರಿ.

**ಬೇಗ.** — (ಧೈರ್ಯಗೊಂಡು) ಅವನ ತೀರ್ಪನ್ನು ಪೂರಾ ಕೇಳಿರಿ ಸ್ವಲ್ಪ ತಡೆಯಿರಿ. ಅವನ ತೀರ್ಪನ್ನು ಕೇಳಿದ ಬಳಿಕ ಹಿಗ್ಗುವುದಾದರೆ ಹಿಗ್ಗಿರಿ. ಬೀರಬಲ್ಲನು ಇಂತಹ ಅನ್ಯಾಯದ ತೀರ್ಪನ್ನು ಕೊಡಲಾರನು.

**ಬಾದ.** — ಬೀರಬಲ್ಲ! ಈಕೆ ಹೊಟ್ಟೆಬಾಕೆಯೆಂದು ನೀನು ತೀರ್ಪು ಕೊಡಲಿಲ್ಲವೇ?

**ಬೀರ.** — ಮಹಾರಾಜ, ತಾವು ಹಾಗೆ ತೀರ್ಪು ಮಾಡಿರುತ್ತೀರಿ.

**ಬೇಗ.** — ಕೇಳಿರಿ, ಅವನು ಹಾಗೆ ನಿರ್ಣಯಿಸಿಲ್ಲವಂತೆ!!

**ಬಾದ.** — ಹಾಗಾದರೆ ನಿನ್ನ ತೀರ್ಪು ಏನು ?

**ಬೀರ.** — ಬೀಜವನ್ನೂ ಸಿಪ್ಪೆಯನ್ನೂ ಬಿಟ್ಟು ಹಣ್ಣು ತಿಂದವರು ಹೊಟ್ಟೆ ಬಾಕರೊ ಬೀಜ ಸಹಿತ ಹಣ್ಣು ತಿಂದವರು ಹೊಟ್ಟೆ ಬಾಕರೊ ?

**ಬಾದ.** — ಬೀಜ ಸಿಪ್ಪೆ ಸಹಿತ ಹಣ್ಣು ತಿಂದವರೇ ಸರಿ.

**ಬೀರ.** — ಹಾಗಾದರೆ ಬೀಜ ಸಿಪ್ಪೆಸಹಿತವಾಗಿ ತಾವು ಹಣ್ಣು ತಿಂದುದರಿಂದ ತಮ್ಮ ಹತ್ತರ ಒಂದಾದರೂ ಗೊರಟೆ ಬಿದ್ದಿಲ್ಲವೆಂದು ಬೇಗಮ್ಮ ಸಾಹೇಬರು ಹೇಳುತ್ತಾರೆ.

**ಬೇಗ.** — ಹೌದು, ಬೀರಬಿಲ್ಲ, ಹೌದು. ಇವರು ಬೀಜಸಿಪ್ಪೆಗಳನ್ನು ಬಿಡದೆ ಹಣ್ಣು ತಿಂದುದರಿಂದ ಇವರೇ ಹೊಟ್ಟೆಬಾಕರೆಂದು ನೀನು ಮಾಡಿದ ತೀರ್ಪು ನ್ಯಾಯವಾದುದೇ ಸರಿ. ಶಾಬಾಸ್ ಬೀರಬಲ್ಲ!! ನಿನ್ನ ನ್ಯಾಯ ಬುದ್ಧಿಯು ಹೊಗಳಲಿಕ್ಕೆ ತಕ್ಕದ್ದು.

ಬಾದಶಹ ಬೇಗಮ್ಮರಿಬ್ಬರೂ ಗಹಗಹಿಸಿ ನಕ್ಕು ನಲಿದರು.

## ೫. ಬಹುರೂಪ

ಒಂದು ದಿವಸ ಬಾದಶಹ ಬೀರಬಲ್ಲರು ನಗೆಚಾಟಿಗೆ ಮಾಡುತ್ತಿರುವಾಗ ಬಾದಶಹನು “ ನೀನು ಬಹುರೂಪಿಯಾಗಬಲ್ಲೆಯಾ ? ” ಎಂದು ಕೇಳಲು “ ಆಗುವೆನು ” ಎಂದು ಬೀರಬಲ್ಲನು ಹೇಳಿದನು.

ಬಾದ.—ಎಂದು ? ಯಾವ ರೂಪವನ್ನು ತೆಗೆದುಕೊಳ್ಳುವಿ ? ನೀನು ಬೇಕಾದ ರೂಪ ತೆಗೆದುಕೊಂಡರೂ ನಾನು ನಿನ್ನನ್ನು ಗುರುತಿಸುವೆನು. ಇಲ್ಲವಾದರೆ ನಿನಗೆ ೧೦೦೦ ಮೊಹರು ತಪ್ಪುದಂಡವನ್ನು ಕೊಡುವೆನು.

ಬೀರ.—ಮಹಾರಾಜ ! ಎಂದು ಯಾವ ರೂಪವೆಂಬುದನ್ನು ಹೇಳಲಾರೆನು. ಅದನ್ನು ಹೇಳಿದರೆ ಸ್ವಾರಸ್ಯವೇ ಹೋಗುವುದು. ಅದು ತಿಳಿದ ಬಳಿಕ ನನ್ನನ್ನು ಗುರುತಿಸುವುದರಲ್ಲಿ ತಮ್ಮ ಜಾಣತನವೇನು ?

ಬಾದ.—ಒಳ್ಳೆಯದು, ಹೇಳಬೇಡ, ನಾನು ನಿಶ್ಚಯವಾಗಿ ನಿನ್ನನ್ನು ಗುರುತಿಸುವೆನು.

ಮುಂದೆ ಬಾದಶಹನು ಊರನ್ನು ನೋಡಲಿಕ್ಕೆ ಹೋದ ದಿವಸ ಬೀರಬಲ್ಲನು ಅಗಸನ ವೇಷವನ್ನು ಹಾಕಿಕೊಂಡು ೭೦೮ ಕತ್ತೆಗಳನ್ನು ಹೊಡೆಯುತ್ತ ಬಾದಶಹನ ಹತ್ತಿರಕ್ಕೆ ಬಂದು “ ಸರ್ಕಾರ ! ಕತ್ತೆ ಬರುತ್ತವೆ, ಓರೆಯಾಗಿರಿ ” ಎಂದು ಕೂಗಿದನು.

ಆಳುಗಳು.—ಏ! ಕತ್ತೆಯವನೇ ! ಕಣ್ಣು ಕಾಣುವುದಿಲ್ಲವೇ ? ಸರಕಾರ ಬರುತ್ತದೆ. ಕತ್ತೆಗಳನ್ನು ಪಕ್ಕಕ್ಕೆ ಹೊಡಿ.

ಅಗಸ.—ಸ್ವಾಮೀ, ಸರಕಾರಕತ್ತೆ ಬರುತ್ತದೆಂದು ಕೂಗುತ್ತಿರುವೆನಲ್ಲ. ತಮಗೆ ಕೇಳಲಿಲ್ಲವೆ ?

ಆಳು.—ಏ, ಬಡ್ಡಿಮಗನೇ ! ಸರಕಾರವೇ ಕತ್ತೆಯೇನು ? ಹಲ್ಲ ಮುರಿಸಿಕೊಂಡೀಯಾ.

ಅಗಸ.—ಬುದ್ಧಿ, ಸರಕಾರ ನನ್ನ ಕತ್ತೆ.

ಮುಂದೆ ತುಸು ದೂರ ಹೋಗಿ ಸೋಗು ತೆಗೆದು ಹಾಕಿ ತಿರುಗಿ ಬಂದು “ ಮಹಾರಾಜ, ” ಎಂದು ಮುಜರೆ ಮಾಡಿದನು.

ಬಾದ.—ಬೀರಬಲ್ಲ ! ನೀನೆಲ್ಲಿಂದ ಬಂದಿ ? ಇದೇನು ಮೋರೆಗೆ ಕಪ್ಪು ? ಹೊಲಸು ಅರಿವೆ ?

ಬೀರ.—ಮಹಾರಾಜ, ಈಗ ಕತ್ತೆಯನ್ನು ಹೊಡೆದುಕೊಂಡು ಹೋದವನು ನಾನೇ. ತಾವು ಗುರುತಿಸಲಿಲ್ಲ. ತಾವು ಕೊಡಲೊಪ್ಪಿದ ೧೦೦೦ ಮೊಹರುಗಳನ್ನು ದಯೆಪಾಲಿಸಿರಿ.

ಬಾದ.—ನೀನು ಬಲುಜಾಣನಾದ ಬಹುರೂಪಿಯು. ನನಗೆ ಗುರು ತೇ ಸಿಕ್ಕಲಿಲ್ಲ. 'ಸರಕಾರ ಕತ್ತೆ' ಎಂಬುದನ್ನು ಕೇಳಿ ನನಗೆ ಸಂಶಯ ಬಂತು. ಆದರೂ ಹುಂಬನಾರಾದರೂ ಇರಬಹುದೆಂದು ಎಣಿಸಿ ಸುಮ್ಮ ನಾದೆನು. ೧೦೦೦ ಮೊಹರು ಕೊಡುವೆನು ಎಂದು ಹೇಳಿ ಇಬ್ಬರೂ ನಲಿ ಯುತ್ತ ಅರಮನೆಗೆ ಹೋದರು.

## ೬. ತಲೆನೋವಿನ ನಸ್ಯ

ಒಂದು ದಿವಸ ಬಾದಶಹನ ಮನಸ್ಸಿನಲ್ಲಿ ಬೀರಬಲ್ಲನಿಗೆ ಚೇಷ್ಟೆಯನ್ನು ಮಾಡಬೇಕೆಂಬ ಎಣಿಕೆಯು ಬಂದುದರಿಂದ ಅವನು ಒಂದು ಚಿನ್ನದ ಅತ್ತರ ದಾನಿಯಲ್ಲಿ ಮೂತ್ರವನ್ನು ಹಾಕಿ ಬೀರಬಲ್ಲನ ಬರುವಿಕೆಯನ್ನು ನೋಡುತ್ತ ಕುಳಿತನು. ಸ್ವಲ್ಪ ಹೊತ್ತಿನ ಮೇಲೆ ಬೀರಬಲ್ಲನು ಬಂದು ಮಾತಾಡುತ್ತಿ ರುವಲ್ಲಿ—

ಬಾದ.—(ಅತ್ತರದಾನಿಯನ್ನು ಕೈಯಲ್ಲಿ ತೆಗೆದುಕೊಂಡು) ಬೀರಬಲ್ಲ, ಒಬ್ಬ ಇರಾಣಿ ವ್ಯಾಪಾರಿಯಿಂದ ಈ ಹೊತ್ತು ಈ ಅತ್ತರನ್ನು ಕೊಂಡೆನು. ಇದನ್ನು ಪರೀಕ್ಷಿಸಿ ನೋಡು. (ಎಂದು ಅವನ ಎರಡೂ ಮುಂಗಯ್ಗೆ ಚಿನ್ನದ ಕಡ್ಡಿಯಿಂದ ಮೂತ್ರವನ್ನು ಹಚ್ಚಿದನು).

ಬೀರ.—(ಎರಡೂ ಮುಂಗಯನ್ನೂ ತಿಕ್ಕಿ ಮೂಸಿನೋಡಿ, ಮೋರೆ ಕಿವಿಚಿ) ಮಹಾರಾಜ! ಇದು ಅತ್ತರಲ್ಲ. ಏನೋ ದುರ್ಗಂಧದ ವಾಸನೆ ಬರುತ್ತದೆ.

ಬಾದ.—(ತಾನು ಮೂಸಿನೋಡಿದಂತೆ ನಟಿಸಿ) ಅತ್ತರಲ್ಲವೇ! ಘಮ ಘಮನೆ ವಾಸನೆ ಬರುತ್ತದೆ. ತೊಲೆಗೆ ೫ ಮೊಹರಿನಂತೆ ಬೆಲೆ ಕೊಟ್ಟು ಕೊಂಡಿರುತ್ತೇನೆ. ನಿನ್ನ ಕೈಗೆ ಏನಾದರೂ ಹೊಲಸು ಹತ್ತಿತ್ತೇನು? ಅಲ್ಲಿ ನೀರು ಇದೆ, ಚೆನ್ನಾಗಿ ತೊಳೆದುಕೊ, ಮತ್ತೆ ಹಚ್ಚುವೆನು. (ಬೀರಬಲ್ಲನು ಕೈ ತೊಳೆದುಕೊಂಡ ಬಳಿಕ ಮತ್ತೆ ಮುಂಗಯ್ಗೆ ಆ ಮೂತ್ರವನ್ನು ದಪ್ಪ ವಾಗಿ ಸವರಿದನು).

ಬೀರ.—(ಮೂಸಿನೋಡಿ, ಸಂಶಯಪಟ್ಟು) ಮಹಾರಾಜ, ಬಡವನನ್ನು ಚೇಷ್ಟೆ ಮಾಡುತ್ತೀರೆಂದು ತೋರುತ್ತದೆ, ಇದು ಅತ್ತರಲ್ಲ.

ಬಾದ.—ಬೀರಬಲ್ಲ! ಏನು ವಿಪರೀತವಾಗಿ ಮಾತಾಡುತ್ತೀ. ಇದು ಉತ್ತಮ ಅತ್ತರ. ನಿನಗೆ ಬಹಳ ನೆಗಡಿ ಹಿಡಿದಿರಬಹುದು. ಆದ್ದರಿಂದ ನಿನಗೆ ವಾಸನೆಯು ಚೆನ್ನಾಗಿ ತಿಳಿಯಲಿಲ್ಲ (ಎಂದು ಖೊಳ್ಳನೆ ನಕ್ಕನು).

ಬೀರ.—(ಮತ್ತೆ ಕೈ ತೊಳೆದುಕೊಂಡು) ಮಹಾರಾಜ! ಮೂತ್ರವನ್ನು ಅತ್ತರೆಂದು ಹೇಳಿ ಹಚ್ಚಿದಿರಿ. ಬಡ ಸೇವಕನನ್ನು ಹೀಗೆ ನೋಯಿಸ ಬಹುದೇ?

ಬಾದ.—ಬೀರಬಲ್ಲ! ಸಿಟ್ಟು ಮಾಡಬೇಡ. ನಿನ್ನನ್ನು ಪರೀಕ್ಷಿಸಿದೆನು. ನೀನು ಉಳಿದವರಂತೆ ಪ್ರತಿಧ್ವನಿ ಕೊಡುವವನಲ್ಲೆಂಬುದನ್ನು ಮನಗಂಡೆನು. ಈ ಅತ್ತರದ ಪೆಟ್ಟಿಗೆಯನ್ನು ತೆಗೆದುಕೋ. ಬೇಕಾದ ಅತ್ತರವನ್ನು ಹಚ್ಚಿಕೊ (ಎಂದು ಬೆಲೆಯುಳ್ಳ ಅತ್ತರುಗಳನ್ನು ಹಚ್ಚಿ ಸಮಾಧಾನ ಮಾಡಿ ಕಳುಹಿಸಿ ದನು).

ಮುಂದೆ ಕೆಲಕಾಲ ಕಳೆದು ಹೋದ ಬಳಿಕ ಒಂದು ದಿವಸ ಬಾದಶಹ ನಿಗೆ ತಲೆನೋವು ಬಂದಿತು. ರಾಜವೈದ್ಯರು ಎಷ್ಟು ಉಪಾಯಗಳನ್ನು ಮಾಡಿದರೂ ಕಡಮೆಯಾಗಲಿಲ್ಲ.

ಬೀರ.—ಮಹಾರಾಜ! ನನ್ನ ಗೆಳೆಯನೊಬ್ಬನು ಇಸ್ತಂಬೂಲಿನಿಂದ ಉತ್ತಮವಾದ ನಸ್ಯವನ್ನು ತಂದುಕೊಟ್ಟಿರುತ್ತಾನೆ. ಎಷ್ಟೋ ಮಂದಿ ತಲೆ ನೋವಿನವರಿಗೆ ಅದನ್ನು ಕೊಟ್ಟಿರುತ್ತೇನೆ. ಎಲ್ಲರೂ ಅದರಿಂದ ಕೂಡಲೆ ಗುಣವಾಯಿತೆಂದು ಹೇಳಿದ್ದಾರೆ. ಅಪ್ಪಣೆಯಾದರೆ ತಮಗೂ ತಂದು ಕೊಡುವೆನು.

ಬಾದ.—ನಸ್ಯವು ಅಷ್ಟು ಉತ್ತಮವಾಗಿದ್ದರೆ ಬೇಗನೆ ತೆಗೆದುಕೊಂಡು ಬಾ.

ಕೂಡಲೆ ಬೀರಬಲ್ಲನು ಮನೆಗೆ ಹೋಗಿ ಹಿತ್ತಲಿನಲ್ಲಿ ಅಲ್ಲಲ್ಲಿ ಹುಡುಕಿ ಒಣಗಿದ ಶೌಚದ ತುಂಡನ್ನು ತೆಗೆದುಕೊಂಡು ಸಣ್ಣಾಗಿ ಪುಡಿಮಾಡಿ, ಒಂದು ಚಿನ್ನದ ಡಬ್ಬಿಯಲ್ಲಿ ಹಾಕಿಕೊಂಡು ತಂದು ಬಾದಶಹನ ಮುಂದಿಟ್ಟನು.

ಬಾದ.—ಇದೇ ಏನು ನಿನ್ನ ಸರ್ವೋತ್ಕೃಷ್ಟವಾದ ನಸ್ಯ?

ಬೀರ.—ಮಹಾರಾಜ! ಇದೇ ಆ ಹೆಸರುವಾಸಿಯಾದ ನಸ್ಯವು. ಇದರ ಒಂದು ಕುಟುಂಬ ಚಿಮುಟಿಗೆ (ದೊಡ್ಡ ಚಿಟಿಕೆ)ಯನ್ನು ಒಂದು ಸಾರಿ ಜೋರಿನಿಂದ ಮೂಗಿಗೆ ಏರಿಸಿಕೊಂಡರೆ ಎಂತಹ ತಲೆನೋವಾದರೂ ಕೂಡಲೆ ನಿಲ್ಲುತ್ತದೆ. ಸಾಧಾರಣವಾದ ಚಿಟಕೆಯಾದರೆ ೨ ಸಾರಿ ಏರಿಸಿ ಕೊಳ್ಳಬೇಕು.

ಬಾದ.—(ಒಂದು ದೊಡ್ಡ ಚಿಟಿಕೆಯನ್ನು ಏರಿಸಿಕೊಂಡು) ಇಸಿಸಿ ಸಿಸಿಸಿಸಿ!! ಇದೇನು ಬೀರಬಲ್ಲ!! ಏತರ ಪುಡಿ ತಂದು ಕೊಟ್ಟೆ? ಇದು ನಸ್ಯವಲ್ಲ ಆ!! ಕೆಟ್ಟ ದುರ್ಗಂಧ!! ಇಸ್!!

ಬೀರ.—ಮಹಾರಾಜ, ಮದ್ದಿನ ವಾಸನೆರುಚಿಗಳನ್ನು ನೋಡಬಾರ ದೆಂದು ಹಿರಿಯರು ಹೇಳುತ್ತಾರೆ. ಈಗಂತೂ ತಮಗೆ ತಲೆನೋವಾದ್ದರಿಂದ ಘ್ರಾಣೇಂದ್ರಿಯವು ತೀರ ಕೆಟ್ಟಿರಬಹುದೆಂದು ತೋರುತ್ತದೆ. ಇನ್ನೊಮ್ಮೆ ಏರಿಸಿರಿ.

ಬಾದ.—ಛೀ ನಾನೊಲ್ಲೆ; ಅದರ ವಾಸನೆ ತಡೆಯಲಾಸಲ್ಲ. ಮರೋ ಒಲ್ಲೆ.

ಬೀರಬಲ್ಲನ ಮತ್ತು ಅವನ ಹತ್ತರ ಕುಳಿತಿದ್ದವರ ಒತ್ತಾಯದಿಂದ ಬಾದಶಹನು ಆ ಪುಡಿಯನ್ನು ಮತ್ತೊಮ್ಮೆ ಏರಿಸಿಕೊಂಡನು. ಆ ಚೂರ್ಣ ದಿಂದಲೋ ಬಾದಶಹನಲ್ಲಿ ಹುಟ್ಟಿದ ಅತಿ ಪ್ರಬಲವಾದ ಅಸಹ್ಯತೆಯಿಂದಲೋ ಅಥವಾ ಕಾಲಧರ್ಮದಿಂದಲೋ ಅವನ ತಲೆನೋವು ಕಡಮೆಯಾಯಿತು.

ಬೀರ.—ಮಹಾರಾಜ, ನೋಡಿದಿರಾ ನನ್ನ ನಸ್ಯವು ಎಷ್ಟು ಗುಣಕಾರಿ ಯಾಗಿರುತ್ತದೆ. ಕೊಟ್ಟವರಿಗೆಲ್ಲ ಗುಣವೇ ಬಂದಿರುತ್ತದೆ. ಇದುವರೆಗೆ ಒಂದು ಕಡೆಯಲ್ಲಾದರೂ ವ್ಯರ್ಥವಾಗಿಲ್ಲ; ಅದನ್ನು ಏರಿಸಿಕೊಂಡವರೆಲ್ಲರೂ ಗುಣಬಂತೆಂದೇ ಹೇಳುತ್ತಾರೆ. ಅದಕ್ಕೆ ಶಿರೋವೇದನಾಕುಠಾರವೆಂದು ಹೆಸರಿಡಲಿಕ್ಕೆ ಅಡ್ಡಿ ತೋರುವುದಿಲ್ಲ.

ಬಾದ.—ನನ್ನ ತಲೆನೋವು ಅದರಿಂದ ಹೋಯಿತೋ ಬೇರೆ ಯಾವ ಕಾರಣದಿಂದಲಾದರೂ ಕಡಮೆಯಾಯಿತೋ ದೇವರೇ ಬಲ್ಲ. ಆದರೆ ಅದು ನಸ್ಯವಲ್ಲ, ಮದ್ದಲ್ಲ. ನೀನು ಯಾವದೋ ಒಂದು ಹೊಲಸು ವಸ್ತುವಿನ ಪುಡಿಯನ್ನು ತಂದು ನನ್ನನ್ನು ಮೋಸ ಮಾಡಿದೆಯೆಂದು ತೋರುತ್ತದೆ. ದಿಟವಾಗಿ ಅದು ಏತರ ಪುಡಿ ಎಂಬುದನ್ನು ಹೇಳು, ಮಾಜಬೇಡ.

ಬೀರ.—ಮಹಾರಾಜ, ತಮ್ಮ ಬಡ ಆಳು ಎಂದಾದರೂ ತಮಗೆ ಮೋಸ ಮಾಡಲೆಳಸುವನೇ? ತಾವು ದಯವಿಟ್ಟು ಅವನಿಗೆ ಸಲಿಗೆ ಕೊಟ್ಟಿರುತ್ತೀರಿ, ಅವನನ್ನು ಪ್ರೀತಿಸುತ್ತೀರಿ, ಅವನ ಬಯಕೆಯನ್ನೂ ಸಲ್ಲಿಸುತ್ತೀರಿ. ಇಷ್ಟು ತಮ್ಮಿಂದ ಉಪಕಾರ ಹೊಂದಿದವನು ತಮಗೆ ಮೋಸ ಮಾಡಬಹುದೇ?

ಬಾದ.—ನೀನು ಮೋಸಮಾಡುವವನಲ್ಲೆಂದು ನಾನು ಚೆನ್ನಾಗಿ ಬಲ್ಲೆನು. ನೀನು ಬಲು ಸಲಿಗೆಯವನಾದ್ದರಿಂದ ಚೇಷ್ಟೆ ಮಾಡಿದ್ದರೂ ಮಾಡಿರಬಹುದು. ನಾನು ನಿನಗೆ ಚೇಷ್ಟೆಮಾಡುತ್ತೇನೆ; ನೀನು ನನಗೆ ಚೇಷ್ಟೆ ಮಾಡುತ್ತಿ. ನಿಜವಾದ ಮಾತನ್ನು ಹೇಳು. ನಾನು ಸಿಟ್ಟು ಮಾಡುವುದಿಲ್ಲ. ದೇವರಾಣೆ ನಾನು ಮುನಿಯುವುದಿಲ್ಲ. ಇದ್ದುದನ್ನು ಇದ್ದ ಹಾಗೆ ಹೇಳು. ನೀನು ನಸ್ಯವೆಂದು ಕೊಟ್ಟದ್ದು ಏನೋ ಕೆಟ್ಟ ಪದಾರ್ಥದ ಪುಡಿಯೆಂದು ತೋರುತ್ತದೆ.

ಬೀರ.—ಮಹಾರಾಜರು ಕ್ಷಮಿಸಬೇಕು. ಆ ದಿವಸ ತಾವು ನನಗೆ ಅತ್ತರನ್ನು ಹಚ್ಚಲಿಲ್ಲವೇ? ಅದು ಇರಾಣದ ಅತ್ತರು. ಇರಾಣ ದೇಶದ ಆ ಅತ್ತರನ್ನು ಒಯ್ದು ಇಸ್ತಂಬೂಲಿನಲ್ಲಿ ಅದರ ಅರ್ಕ ತೆಗೆದು ಈ ನಸ್ಯವನ್ನು ಮಾಡಿದ್ದಾರೆಂದು ಕೇಳುತ್ತೇನೆ. ಇದು ಕೇಳಿಕೆಯ ಮಾತೇ ಹೊರತು, ನಾನು ಪ್ರತ್ಯಕ್ಷವಾಗಿ ನೋಡಿಲ್ಲ. ಆ ಅತ್ತರಿನ ವಾಸನೆಯಂತೆ ಈ ನಸ್ಯವು ಸುಗಂಧವಾಗಿರುತ್ತದೆ.

ಬಾದ.—ಆ ಹಾ ಹಾ ಹಾ! ಬೀರಬಲ್ಲ, ಮುಯ್ಯಿಗೆ ಮುಯ್ಯಿ ತೀರಿಸಿದೆ. ಇದರಲ್ಲಿ ನಿನ್ನದೇನೂ ತಪ್ಪಿಲ್ಲ. ಬಿತ್ತಿದ್ದನ್ನು ಬೆಳೆದುಕೊಳ್ಳಬೇಕು. ಮಾಡಿದ್ದನ್ನು ಉಣ್ಣಲೇ ಬೇಕು. ನಿನ್ನ ಜಾಣತನಕ್ಕೆ ಮೆಚ್ಚಿದೆನು. ಇನ್ನು ಮುಂದೆ ನಿನ್ನೊಡನೆ ಚೇಷ್ಟೆ ಮಾಡುವುದಿಲ್ಲ.

## ೭. ಹೂ ಭುರ್ರ

ಒಂದು ದಿವಸ ಬಾದಶಹ ಬೀರಬಲ್ಲರು ಮಾತಾಡುತ್ತ ಕುಳಿತಿರುವಾಗ—

ಬಾದ. — ಬೀರಬಲ್ಲ, ನನ್ನ ಕಡೆಗೆ ಎಷ್ಟೋ ಮಂದಿ ಕಥೆಕಾರರು ಬಂದರು. ಅವರೊಳಗೆ ಒಬ್ಬನಾದರೂ ನಾನು 'ಸಾಕು' ಎನ್ನುವ ವರೆಗೂ ಕಥೆಗಳನ್ನು ಹೇಳಲಿಲ್ಲ. ನೀನು ನಾನು ಸಾಕೆನ್ನುವ ವರೆಗೂ ಕಥೆ ಹೇಳುವಿಯಾ? ಹೇಳಿದರೆ ನಿನಗೆ ಒಂದು ಹರಳುಕಲ್ಲು (ರತ್ನ) ಕೆತ್ತಿದ ಕಡಗವನ್ನು ಕೊಡುವೆನು.

ಬೀರ. — ಮಹಾರಾಜ! ಅಪ್ಪಣೆಯಾದರೆ ಹೇಳುವೆನು.

ಬಾದ. — ಹೇಳು, ಕೇಳುವೆನು.

ಬೀರ. — ಹಿಂದೆ ಒಂದು ಊರಿನಲ್ಲಿ ಒಬ್ಬ ದೊಡ್ಡ ಒಕ್ಕಲಿಗನಿದ್ದನು. ಅವನು ನೂರಾರು ಕೂರಿಗೆ (೪ ಎಕರೆ) ಹೊಲವನ್ನು ಮಾಡುತ್ತಿದ್ದುದರಿಂದ ತನ್ನ ಮನೆಯ ಹತ್ತರ ಎರಡು ದೊಡ್ಡದೊಡ್ಡ ಪಣತಗಳನ್ನು ಮಾಡಿಸಿ, ಒಂದರಲ್ಲಿ ಗೋದಿಯನ್ನೂ ಮತ್ತೊಂದರಲ್ಲಿ ಜೋಳವನ್ನೂ ತುಂಬಿಟ್ಟದ್ದನು. ಒಂದು ದಿನ ಒಂದು ಇಲಿಯು ಪಣತದ ಮೇಲ್ಭಾಗದಲ್ಲಿ ಒಂದು ಸಣ್ಣ ತೂತು ಮಾಡಿತು. ಬೆಳಗಾದ ಕೂಡಲೆ ಒಂದು ಗುಬ್ಬಿಯು ಹಾರಿ ಬಂದು ಒಂದು ಕಾಳನ್ನು ತೆಗೆದುಕೊಂಡು ಭುರ್ರೆಂದು ಹಾರಿತು. ೨ನೆಯ ಗುಬ್ಬಿಯು ಒಂದು ಕಾಳನ್ನು ತೆಗೆದುಕೊಂಡು ಭುರ್ರೆಂದು ಹಾರಿತು. ೩ನೆಯ ಗುಬ್ಬಿಯು ಒಂದು ಕಾಳನ್ನು ತೆಗೆದುಕೊಂಡು ಭುರ್ರೆಂದು ಹಾರಿತು.

ಬಾದ. — ಬೀರಬಲ್ಲ, ಈ ಕಥೆ ಎಂದು ಮುಗಿಯುವುದು? ಸಂಖ್ಯೆಗೆ ಮಿತಿಯಿಲ್ಲ.

ಬೀರ. — ಎರಡೂ ಪಣತಗಳು ಕಾಳಿನಿಂದ ತುಂಬಿವೆ, ಗುಬ್ಬಿಗಳು ಲೆಕ್ಕವಿಲ್ಲದಷ್ಟಿವೆ. ಕಾಲವು ಅನಂತವಾಗಿದೆ. ಪಣತದೊಳಗಿನ ಕಾಳು ತೀರುವ ವರೆಗೆ ಕಥೆ ಮುಗಿಯುವ ಸಂಭವವೆಲ್ಲಿ?

ಬಾದ. — ಸಾಕು, ಬಿಡು, ಮುಂದೆ ಹೇಳಬೇಡ. ನೀನು ಕಥೆಯನ್ನು ಹೇಳಿ ಮುಗಿಸಲಿಲ್ಲ, ವಿನೋದೋಕ್ತಿಯಿಂದ ಮುಗಿಸಿದೆ. ತೆಗೆದುಕೊ ಈ ಕಡಗವನ್ನು ನಿನ್ನ ಯುಕ್ತಿವಿನೋದಗಳಿಗೆ ಮೆಚ್ಚಿ ಕೊಡುತ್ತೇನೆ.

ಬೀರಬಲ್ಲನು ಬಾದಶಹನು ಕೊಟ್ಟ ಆ ಅಮೌಲ್ಯವಾದ ಕಡಗವನ್ನು ಕೈಲಿಟ್ಟುಕೊಂಡು ನಲಿದಾಡುತ್ತ ಮನೆಗೆ ಹೋದನು.

## ೩ನೆಯ ಪ್ರಕರಣ

### ಸಮಯಸೂಚಕತೆ

**೧. ದಿಲ್ಲಿಯಲ್ಲಿ ಕಾಗೆಗಳೆಷ್ಟು ಮತ್ತು ಮುಗಿಲಲ್ಲಿ ಚಿಕ್ಕೆಗಳೆಷ್ಟು ?**

ಒಂದು ದಿನ ಬಾದಶಹನು ಬೀರಬಲ್ಲನೊಡನೆ ಮಾತಾಡುತ್ತ ಕುಳಿತಿರುವಾಗ ಮಾತಿಗೆ ಮಾತು ಹೊರಟು,

ಬಾದ. — ಬೀರಬಲ್ಲ, ಈ ನಗರದಲ್ಲಿ ಕಾಗೆಗಳೆಷ್ಟಿವೆ ? ಆಕಾಶದಲ್ಲಿ ತಾರೆಗಳೆಷ್ಟಿವೆ ?

ಬೀರ. — ಮಹಾರಾಜ, ಇದನ್ನು ಹೇಳಲಿಕ್ಕೆ ಅಡ್ಡಿಯೇನು ? ಆದರೆ ಈಕ್ಷಣವೇ ನಾನು ಹೇಳಲಾರೆನು. ನನಗೆ ಸ್ವಲ್ಪ ಗಡುವನ್ನು ಕೊಟ್ಟರೆ ಲೆಕ್ಕಮಾಡಿ ಹೇಳುವೆನು.

ಬಾದ. — ನಿನಗೆ ಎಷ್ಟು ದಿನಗಳ ಗಡುವು ಬೇಕು ಬೇಡಿಕೊ.

ಬೀರ. — ಇವು ಸಣ್ಣ ಪ್ರಶ್ನಗಳಾದ್ದರಿಂದ ೩ ದಿನಗಳ ಗಡುವು ಸಾಕು.

ಬಾದ. — ಬೀರಬಲ್ಲ, ನೋಡು, ವಿಚಾರಮಾಡು, ೩ ದಿವಸ ಸಾಕಾಗಲಿಕ್ಕಿಲ್ಲ. ಈ ಪ್ರಶ್ನಗಳು ನೀನು ಎಣಿಸುವಂತೆ ಹಗುರವಲ್ಲ. ಹೆಚ್ಚಾದ ಅವಕಾಶವನ್ನು ಬೇಕಾದರೆ ಬೇಡು, ಕೊಡುವೆನು.

ಬೀರ. — ಇವೇನು ಬಲು ಗಡುಸಾದ ಪ್ರಶ್ನಗಳಂತೆ ತೋರುವುದಿಲ್ಲ. ೩ ದಿವಸಗಳಿಗಿಂತ ಹೆಚ್ಚಿನ ಕಾಲವು ಬೇಕಾಗಿಲ್ಲ. ಮೂರೇ ದಿವಸ ಸಾಕು.

ಬಾದ. — ಇಂದಿಗೆ ನಾಲ್ಕನೆಯ ದಿವಸ ನೀನು ಈ ಪ್ರಶ್ನಗಳ ಉತ್ತರವನ್ನು ಕೊಡಬೇಕು. ನೆಪ ಹೇಳಕೂಡದು.

ಬೀರ. — ಮಹಾಪ್ರಸಾದ.

ಮುಂದೆ ನಾಲ್ಕನೆಯ ದಿವಸ ಬೀರಬಲ್ಲನು ಅರಮನೆಗೆ ಬರಲು ಬಾದಶಹನು ಅದೇ ಪ್ರಶ್ನವನ್ನು ಕೇಳಿದನು.

ಬೀರ. — ಮಹಾರಾಜ ! ತಮ್ಮ ನಗರದಲ್ಲಿ ಈಕ್ಷಣಕ್ಕೆ ೨೫೩೯ ಕಾಗೆಗಳಿರುತ್ತವೆ.

ಬಾದ. — ಬೀರಬಲ್ಲ, ನೀನು ಯಾವುದೋ ಒಂದು ಸಂಖ್ಯೆ ಹೇಳಿಬಿಟ್ಟೆ.

ಬೀರ. — ಮಹಾರಾಜ, ಹಾಗೆನ್ನಕೂಡದು. ನಾನು ಸರಿಯಾದ ಸಂಖ್ಯೆಯನ್ನು ಹೇಳುತ್ತೇನೆ. ಅದರಲ್ಲಿ ಎಳ್ಳಷ್ಟಾದರೂ ತಪ್ಪಿಲ್ಲ. ಬೇಕಾದರೆ ಎಣಿಸಿನೋಡಬಹುದು.

ಬಾದ. — ನೋಡು, ವಿಚಾರಮಾಡು. ನೀನು ಹೇಳಿದ್ದು ತಪ್ಪಾದರೆ ೨೫೩೯ ವರಹ ದಂಡ ತೆರಬೇಕಾದೀತು. ಎಚ್ಚರದಿಂದ ಹೇಳು.

ಬೀರ. — ನನ್ನ ಲೆಕ್ಕದಲ್ಲಿ ಏನೂ ತಪ್ಪಿಲ್ಲ. ತಾವು ಹೊರಗಿನ ಕಾಗೆಗಳು ಒಳಗೆ ಬರದಂತೆಯೂ ಒಳಗಿನ ಕಾಗೆಗಳು ಹೊರಗೆ ಹೋಗದಂತೆಯೂ ಚೆನ್ನಾಗಿ ಬಂದೋಬಸ್ತು ಮಾಡಿ ಲೆಕ್ಕಮಾಡಿಸಿದರೆ ನೂರಾರು ಕಾಗೆಗಳ ಹೆಚ್ಚು ಕಡಮೆ ಬಂದರೂ ಬರಬಹುದು.

ಬಾದ. — ಹೆಚ್ಚು ಕಡಮೆ ಏಕೆ ಬರಬೇಕು ? ನೀನು ಲೆಕ್ಕವನ್ನು ಸರಿಯಾಗಿ ಮಾಡಿಲ್ಲವೇ ?

ಬೀರ. — ಮಹಾರಾಜ ನನ್ನ ಲೆಕ್ಕವು ಎಷ್ಟು ಸರಿಯಾಗಿದ್ದರೂ ಅದು ಕಾಗೆಯ ಲೆಕ್ಕವು. ಪ್ರತಿಕ್ಷಣವೂ ನೂರಾರು ಕಾಗೆಗಳು ಹೊರಗಿಂದ ಬರುತ್ತವೆ, ಒಳಗಿಂದ ಹೋಗುತ್ತವೆ. ಆದ್ದರಿಂದ ಸ್ವಲ್ಪ ಹೆಚ್ಚು ಕಡಿಮೆ ಬರಬಹುದು.

ಬಾದ. — ಒಳ್ಳೆಯದು, ಇದು ಇರಲಿ, ನಕ್ಷತ್ರಗಳ ಲೆಕ್ಕ ಹೇಳು.

ಬೀರ. — ಮಹಾರಾಜ! ಅದಕ್ಕೆ ದೂರಹೋಗಲವಶ್ಯಕವಿಲ್ಲ. ತಮ್ಮ ಗಡ್ಡವನ್ನು ತಾವು ಯಾವಾಗಲೂ ಹಿಡಿದುಕೊಳ್ಳುತ್ತೀರಷ್ಟೇ. ಆ ಕೂದಲು

ಗಳ ಇಮ್ಮಡಿಯಷ್ಟು ಚುಕ್ಕೆಗಳು ಆಕಾಶದಲ್ಲಿರುತ್ತವೆ. ತಾವು ಬೇಕಾದರೆ ಲೆಕ್ಕಮಾಡಿ ತಾಳೆ ನೋಡಬಹುದು.

ಬಾದ.—ಬೀರಬಲ್ಲ, ನಿನ್ನ ಜಾಣತನಕ್ಕೂ ಸಮಯಸೂಚಕತೆಗೂ ಮೆಚ್ಚಿದೆನು. ನಿನ್ನಂತಹ ಮಂತ್ರಿ ದೊರೆತುದು ನನ್ನ ಪೂರ್ವ ಜನ್ಮದ ಪುಣ್ಯವೇ ಸರಿ. ನಿನಗೆ ದೇವರು ಪೂರ್ಣಾಯುಸ್ಸನ್ನು ಕೊಡಲೆಂದು ಬೇಡಿಕೊಳ್ಳುತ್ತೇನೆ.

## ೨. ದೀಪದ ಕೆಳಗೆ ಕತ್ತಲೆ

ಒಂದು ದಿನ ಬಾದಶಹ ಬೀರಬಲ್ಲರು ಪಟ್ಟಣದ ಉಕ್ಕಡದ ಕೋಟೆಯ ಕೊತ್ತಳದ ಮೇಲೆ ನಿಂತು ಸುತ್ತಲಿನ ನೆಲವನ್ನು ನೋಡುತ್ತಿರುವಾಗ ದೂರದಲ್ಲಿ ಕೆಲವು ಜನ ಕಳ್ಳರು ಒಬ್ಬ ದಾರಿಹೋಕನನ್ನು ಸುಲಿಯುತ್ತಿರುವುದನ್ನು ಕಂಡರು. ಸುಲಿದುಕೊಂಡು ಬಿಟ್ಟ ಬಳಿಕ ಆ ಹಾದಿಕಾರನು ಅಳುತ್ತ ಕರೆಯುತ್ತ ಕೋಟೆಯ ಹತ್ತಿರಕ್ಕೆ ಬಂದು ಬಾದಶಹನು ಅಲ್ಲಿರುವುದನ್ನು ಕೇಳಿ ರಂಬಾಟ ಮಾಡುತ್ತ ಬಾದಶಹನ ಮುಂದೆ ದೂರು ಹೇಳಿದನು. ಬಾದಶಹನು ಅವನನ್ನು ಸಮಾಧಾನಮಾಡಿ ಕಳುಹಿ,

ಬೀರಬಲ್ಲ, ಇದೇನು ? ನಮ್ಮ ರಾಜಧಾನಿಯ ನೆರೆಯಲ್ಲಿಯೇ ನಮ್ಮ ಕಣ್ಣುಮುಂದೆಯೇ ನಡುಹಗಲೇ ಇಂತಹ ಸುಲಿಗೆಗಳು ಆಗಬಹುದೆ ? ಇದೆಂತಹ ಅಂಧದರಬಾರು? ಅವ್ಯವಸ್ಥೆ ? ಅರಕ್ಷತೆ ?

ಬೀರ.—ಖುದಾವಂದ್, ಇದು ಅಪವಾದವು. ದೀವಿಗೆಯ ಬುಡದಲ್ಲಿ ಕತ್ತಲೆ ಎಂಬ ಗಾದೆಯು ತಮಗೆ ಗೊತ್ತಿರುತ್ತದಷ್ಟೆ ?

ಬಾದ.—ಎಂತಹ ದೀವಿಗೆ ? ಎಂತಹ ಕತ್ತಲೆ? ಇದು ನಮಗೆ ನಾಚಿಕೆಯ ಮಾತಲ್ಲವೇ ? ಈ ಬುಡದ ಕತ್ತಲೆಯನ್ನು ಹೋಗಲಾಡಿಸುವುದು ನಮ್ಮ ಕರ್ತವ್ಯವಲ್ಲವೇ ?

ಬೀರ.—ಮಹಾರಾಜ, ಇಂತಹ ಸುಲಿಗೆ ಕೊಲೆಗಳನ್ನು ನಿಲ್ಲಿಸುವುದು ಸರಕಾರದ ಕರ್ತವ್ಯವೇ ಸರಿ. ಈಗಿರುವ ಕೊತ್ತವಾಲನು ಬಲು ದಕ್ಷನೂ ಜಾಗರುಕನೂ ಆಗಿರುತ್ತಾನೆ. ಆದ್ದರಿಂದ ನಮ್ಮ ಕಣ್ಣು ಮುಂದೆಯೇ

ಆದ ಸುಲಿಗೆಯು ಸೋಜಿಗವಾಗಿ ತೋರುತ್ತದೆ. ಇದಕ್ಕೆ ಬಲವತ್ತಾದ ಕಾರಣಗಳಿರಬೇಕು. ಈ ಸುಲಕೊಂಡವನ ನಂಟರೇ ಇವನ ಹಗೆಗಳಾಗಿರುತ್ತಾರೆಯೋ ಯಾರಾದರೂ ದೊಡ್ಡ ಸರದಾರರು ಈ ಸುಲಿಗೆಗೆ ನೆರವಾಗಿರುತ್ತಾರೆಯೋ ತಿಳಿಯದು. ಈ ಹಾದಿಯ ಕಾವಲುಗಾರರು ಏನು ಮಾಡುತ್ತಿರುವರೋ ಗೊತ್ತಾಗುವದಿಲ್ಲ. ನಾನು ಇದನ್ನು ಪೂರ್ಣ ವಿಚಾರ ಮಾಡಿ ಮುಂದೆ ಹೀಗೆ ಆಗದಂತೆ ತಕ್ಕ ಬಂದೋಬಸ್ತನ್ನು ಮಾಡುವೆನು. ಸುಲಿಗೆಗಾರರನ್ನು ಗೊತ್ತು ಹಚ್ಚಿ ನಿಜವಾದ ಕಾರಣವನ್ನು ಹುಡುಕಿ ತೆಗೆಯುವೆನು. ತಾವು ನಿಶ್ಚಿಂತರಾಗಿರಬಹುದು. ಏನೂ ಕಾಳಜಿ ಮಾಡಬಾರದು.

ಬಾದ.—ಇದು ಅಲಕ್ಷ್ಯಮಾಡುವ ವಿಷಯವಲ್ಲ, ಬೇಗನೆ ವಿಚಾರ ಮಾಡಿ ಮುಂದೆ ಇಂತಹ ಕೆಟ್ಟ ಕೆಲಸಗಳು ಆಗದಂತೆ ಏರ್ಪಾಡು ಮಾಡಿ ನನಗೆ ತಿಳಿಸಿದ ಹೊರತು ನನ್ನ ಮನಸ್ಸು ತಣಿಸಲಾರದು. ಬೇಗನೆ ತಕ್ಕ ಏರ್ಪಾಡು ಮಾಡು.

## ೩. ಅಂಗೈಯಲ್ಲಿ ಕೂದಲು ಏಕೆ ಬೆಳೆಯುವದಿಲ್ಲ ?

ಒಂದು ದಿನ ಬಾದಶಹ ಬೀರಬಲ್ಲರು ಸಂತೋಷದಿಂದ ಮಾತಾಡುತ್ತ ಕುಳಿತಿರುವಾಗ—

ಬಾದ.—ಬೀರಬಲ್ಲ, (ತನ್ನ ಅಂಗೈಯನ್ನು ತೋರಿಸಿ) ಈ ಅಂಗೈಯಲ್ಲಿ ಕೂದಲು ಏಕೆ ಹುಟ್ಟುವದಿಲ್ಲ

ಬೀರ.—ಪ್ರಭುವರಾ ! ಇದರ ಕಾರಣವು ಮೇಲೆಯೇ ಇದೆ. ತಮಗೆ ಗೊತ್ತಿರಬಹುದೆಂದು ತಿಳಿದಿದ್ದೆನು.

ಬಾದ.—ಅದೇನು ! ನನಗೆ ಗೊತ್ತೇ ಇಲ್ಲ. ಹೇಳು ನೋಡೋಣ.

ಬೀರ.—ಮಹಾರಾಜ, ತಾವು ಪ್ರತಿದಿನವೂ ಬಡಬಗ್ಗರಿಗೆ ದಾನ ಕೊಡುವುದರಿಂದಲೂ ಜಾಣರಿಗೆ ಪಾರಿತೋಷಕವನ್ನೀಯುವುದರಿಂದಲೂ ಶೂರರಿಗೆ ಮೆಚ್ಚುಗೊಡುವುದರಿಂದಲೂ ಸದ್ಗುಣಿಗಳಿಗೆ ಇನಾಮು ಕೊಡುವುದರಿಂದಲೂ ತಮ್ಮ ಅಂಗೈಯಲ್ಲಿ ಕೂದಲು ಹುಟ್ಟಲಿಕ್ಕೆ ಅವಕಾಶವೆಲ್ಲಿ ?

ಬಾದ.—ವಾಹವ್ವಾ, ಬೀರಬಲ್ಲ ನನ್ನನ್ನು ಹೊಗಳಿ ಮರಳು ಮಾಡಿ ಬಿಟ್ಟೆ ?

ಬೀರ.—ಮಹಾಸ್ವಾಮಿ, ನಾನು ಹೇಳಿದ್ದು ನಿಜವಾದ ಸಂಗತಿಯು ಅದರಲ್ಲಿ ಸುಳ್ಳು ಏನೂ ಇಲ್ಲ. ತಾವು ದಿನಾಲು ದಾನಕೊಡುವುದು ತಮ್ಮ ಅನುಭವದ ಮಾತೇ ಆಗಿರುತ್ತದೆ.

ಬಾದ.—ಒಳ್ಳೆಯದು. ಅದು ಹೇಗೇ ಇರಲಿ. ನಿನ್ನ ಅಂಗೈಯಲ್ಲಿ ಕೂದಲು ಏಕಿಲ್ಲ?

ಬೀರ.—ಮಹಾರಾಜ, ಇದನ್ನೇಕೆ ತಾವು ಕೇಳಬೇಕು? ಇದು ತಮಗೆ ಗೊತ್ತೇ ಇದೆ.

ಬಾದ.—ಅದೇನು? ನಾನು ದಾನ ಕೊಡುತ್ತೇನಾದ್ದರಿಂದ ನನ್ನ ಅಂಗೈಯಲ್ಲಿ ಕೂದಲಿಲ್ಲ. ನೀನು ದಾನಕೊಡುವುದಿಲ್ಲವಷ್ಟೇ. ನಿನ್ನ ಅಂಗೈಯಲ್ಲಿ ಏಕೆ ಕೂದಲಿಲ್ಲ?

ಬೀರ.—ಮಹಾರಾಜ, ದಿನಾಲು ತಮ್ಮಿಂದ ಪಾರಿತೋಷಕ ಪಡೆಯುವುದರಿಂದ ಅದರ ಘರ್ಷಣದ ಮೂಲಕವಾಗಿ ನನ್ನ ಅಂಗೈಯಲ್ಲಿ ಕೂದಲು ಬೆಳೆಯಲೊಲ್ಲವು. ಮತ್ತೇನೂ ಕಾರಣವಿಲ್ಲ.

ಬಾದ.—ಹಾಗೇ ಆಗಲಿ. ನಮ್ಮಿಬ್ಬರ ಮಾತು ಇರಲಿ. ಉಳಿದ ಸರದಾರರ ಅಂಗೈಯಲ್ಲ ಕೂದಲು ಏಕೆ ಬೆಳೆದಿಲ್ಲ?

ಬೀರ.—ಇದರ ಕಾರಣವಂತೂ ಮೇಲೆಯೇ ಇದೆ. ಅದಕ್ಕೆ ಏನೂ ಸಂದೇಹವಿಲ್ಲ. ತಾವು ಪ್ರತಿದಿನವೂ ನನಗೂ ಉಳಿದ ಸತ್ಪಾತ್ರರಿಗೂ ಕೊಡುತ್ತಲಿರುವ ಪಾರಿತೋಷಕ-ದಾನಗಳನ್ನು ನೋಡಿ, ಹೊಟ್ಟೆಕಿಚ್ಚು ಪಟ್ಟು, ಇವರು ಒಂದೇ ಸವನೇ (ಎಡೆಬಿಡದೆ) ತಮ್ಮ ಅಂಗಯ್ಗಳನ್ನು ತಿಕ್ಕುತ್ತಿರುವುದರಿಂದ ಇವರ ಅಂಗಯ್ಗಳಲ್ಲಿ ಕೂದಲು ಹುಟ್ಟಲಿಕ್ಕೆ ಅವಕಾಶವೇ ದೊರೆಯಲೊಲ್ಲದು. ಸ್ವಲ್ಪವಾದರೂ ಅವಕಾಶ ದೊರೆತರೆ ಕೂದಲು ಬೆಳೆಯಬಹುದು. ಅವು ತುಸು ಮೊಳಕೆಯೊಡೆದ ಕೂಡಲೆ ಅವರು ತಮ್ಮ ತಮ್ಮ ಕಯ್ಗಳನ್ನು ತಿಕ್ಕಿ ಆ ಮೊಳಕೆಗಳನ್ನು ಉದುರಿಸಿ ಬಿಡುತ್ತಾರೆ. ಆದ್ದರಿಂದ ಅವು ಬೆಳೆಯಲಿಕ್ಕೆ ಅನುವೇ ದೊರೆಯದಂತಾಗಿದೆ.

ಬಾದ.—ಭಲೆ, ಬೀರಬಲ್ಲ, ಶಾಬಾಸ್. ನಿನ್ನ ಚಾತುರ್ಯ-ಸಮಯ ಸೂಚಕತೆಗಳಿಗೆ ಎಣೆಯೇ ಇಲ್ಲ.

## ೪. ಯಮುನಾನದಿಯು ಅಳುವುದೇಕೆ?

ಒಂದು ದಿವಸ ಬಾದಶಹ ಬೀರಬಲ್ಲರು ಅರಮನೆಯ ಉಪ್ಪರಿಗೆಯ ಮೇಲೆ ಮಾತಾಡುತ್ತ ಕುಳಿತಿರುವಾಗ ಒಮ್ಮಿಂದೊಮ್ಮೆ (ಫಕ್ಕನೆ) ಯಮುನಾನದಿಯು ತುಂಬಿ ಭೋರ್ಗರೆಯಲಾರಂಭಿಸಿತು. ಆಗ ಅವರಿಬ್ಬರೂ ಅಚ್ಚರಿಗೊಂಡು ನೋಡುವಲ್ಲಿ, ಹೊಳೆಯು ತುಂಬಿ ತುಳುಕುತ್ತಿತ್ತು.

ಬಾದ.—ಬೀರಬಲ್ಲ, ಯಮುನೆಯು ಅಳುತ್ತಾಳೇಕೆ?

ಬೀರ.—ಖುದಾವಂದ್! ಇದರಲ್ಲೇನಾಶ್ಚರ್ಯವಿದೆ?

ಬಾದ.—ಹೊಳೆಯು ಒಮ್ಮಿಂದೊಮ್ಮೆ ಅತ್ತು ರಂಬಾಟ ಮಾಡುವುದು ಆಶ್ಚರ್ಯವಲ್ಲವೆ?

ಬೀರ.—ಒಮ್ಮಿಂದೊಮ್ಮೆ ಗಂಡನ ಮನೆಗೆ ಹೋಗುವ ಹೆಣ್ಣುಮಗು ಅತ್ತುಕರೆಯುವುದು ಸ್ವಾಭಾವಿಕವಾಗಿದೆ.

ಬಾದ.—ಯಮುನೆಯು ಗಂಡನ ಮನೆಗೆ ಹೋಗುತ್ತಾಳೇನು?

ಬೀರ.—ಭೂವರ, ಯಮುನೆಯು ತನ್ನ ತವರುಮನೆಯಾದ ಹಿಮಾಚಲವನ್ನು ಬಿಟ್ಟು ತನ್ನ ಗಂಡನಾದ ಸಮುದ್ರನಾಥನ ಕಡೆಗೆ ಒಮ್ಮಿಂದೊಮ್ಮೆ ಹೊರಟಿದ್ದಾಳೆ. ಆದ್ದರಿಂದ ಆಕೆಯು ಇಷ್ಟು ರಂಬಾಟ ಮಾಡತೊಡಗಿದ್ದಾಳೆ.

ಈ ಉತ್ತರವನ್ನು ಕೇಳಿ ಬಾದಶಹನು ನಲಿದು ತಲೆದೂಗಿದನು.

## ೫. ಒಂಟೆಯ ಕುತ್ತಿಗೆ ಡೊಂಕೇಕೆ?

ಒಂದು ಸಂದರ್ಭದಲ್ಲಿ, ಬಾದಶಹನು ಬೀರಬಲ್ಲನಿಗೆ ಒಂದು ಊರನ್ನು ಉಂಬಳಿಯಾಗಿ ಕೊಡುತ್ತೇನೆಂದು ಹೇಳಿದನು. ಮುಂದೆ ಆ ಮಾತನ್ನು ನೆನಪು ಮಾಡಲು, ಬಾದಶಹನು ಅದನ್ನು ಕಿವಿಯ ಮೇಲೆ ಹಾಕಿಕೊಳ್ಳಲಿಲ್ಲ. ಆದ್ದರಿಂದ ತನ್ನ ಮಾತನ್ನು ಕಾಯ್ದುಕೊಳ್ಳಲಿಕ್ಕೆ ಬಾದಶಹನನ್ನು ಒಡಂಬಡಿಸಬೇಕೆಂಬ ಎಣಿಕೆಯು ಬೀರಬಲ್ಲನ ಮನಸ್ಸಿನಲ್ಲಿ ಕುದಿಯುತ್ತಿತ್ತು.

ಒಂದು ದಿವಸ ಬಾದಶಹ ಬೀರಬಲ್ಲರು ಊರಲ್ಲಿ ತಿರುಗಾಡುತ್ತಿರುವಾಗ ಹಾದಿಯಲ್ಲಿ ಒಂದು ಒಂಟಿಯು ಅವರಿಗೆ ಎದುರಾಗಿ ಬಂದಿತು.

ಬಾದ. — ಬೀರಬಲ್ಲ, ಒಂಟಿಯ ಗೋಣು ಡೊಂಕು ಏಕೆ?

ಬೀರ. — ಮಹಾರಾಜ, ಅದು ಹಿಂದಿನ ಜನ್ಮದಲ್ಲಿ ಯಾರಿಗೋ ಏನೋ ಕೊಡುತ್ತೇನೆಂದು ಮಾತುಕೊಟ್ಟು ಅದನ್ನು ಕೊಡದ್ದರಿಂದ ಅದರ ಗೋಣು ಸೊಟ್ಟಾಗಿರುತ್ತದೆ.

ಬಾದ. — ಮಾತುಕೊಟ್ಟುದನ್ನು ಕೊಡದೆ ಇದ್ದರೆ, ಕುತ್ತಿಗೆ ಏಕೆ ಡೊಂಕಾಗಬೇಕು?

ಬೀರ. — ಏಕೆಂದರೆ ಮಾತು ಕೊಟ್ಟವರು ತನುಗೆ ಕೊಡುವ ಮನಸ್ಸಿಲ್ಲದಿದ್ದರೆ, ಆ ಮಾತು ತೆಗೆದ ಕೂಡಲೆ ಗೋಣನ್ನು ಸೊಟ್ಟಗೆ ಮಾಡಿ ಮೋರೆ ಕಿವಿಚಿ ಕೊಳ್ಳುತ್ತಾರೆ. ಆದ್ದರಿಂದ ಮುಂದಿನ ಜನ್ಮದಲ್ಲಿ ಅಂಥವರು ಸೊಟ್ಟ ಗೋಣಿನ ಒಂಟಿಯಾಗಿ ಹುಟ್ಟುತ್ತಾರೆ.

ಬಾದ. — (ತಾನು ಉಂಬಳಿಗ್ರಾಮವನ್ನು ಕೊಡುತ್ತೇನೆಂದು ಹೇಳಿದ ಮಾತು ನೆನಪಾಗಿ) ಬೀರಬಲ್ಲ! ನನ್ನ ಮೇಲೆ ಕಡತ (ಪೆಟ್ಟು) ಹಾಕಿದಂತೆ ತೋರುತ್ತದೆ.

ಬೀರ. — ಇದರಲ್ಲೇನು ಕಡತುಂಟು ಸ್ವಾಮಿ. ಅದನ್ನೇನೂ ನಾನರಿಯೆ. ತಾವು ಕೇಳಿದ್ದಕ್ಕೆ ನನಗೆ ತಿಳಿದ ಮಟ್ಟಿಗೆ ಉತ್ತರ ಹೇಳಿರುತ್ತೇನೆ. ಮಹಾಪ್ರಭುಗಳು ವಿಪರೀತವಾಗಿ ಅರ್ಥಮಾಡಕೂಡದೆಂದು ಬಾಗಿ ಬೇಡುತ್ತೇನೆ.

ಬಾದ. — ನೀನೇನೂ ಉಮ್ಮಳಿಸಬೇಡ. ನೀನು ನೆನಪು ಮಾಡಿದ್ದು ಒಳ್ಳೆಯದಾಯಿತು. ನಾನು ನಿನಗೆ ಒಂದು ಊರನ್ನು ಕೊಡುತ್ತೇನೆಂದು ಹೇಳಿದ್ದೆನಷ್ಟೇ?

ಬೀರ. — ಖುದಾವಂದ್, ತಾವು ಬೇಕಾದಾಗ ಆ ಗ್ರಾಮವನ್ನು ಕೊಡಬಹುದು. ಈಗೇನೂ ಅವಸರವಿಲ್ಲ. ನಾನು ಉಣ್ಣುವುದು ತಮ್ಮ ಅನ್ನ, ಹಚ್ಚುವುದು ತಮ್ಮ ದೀವಿಗೆ.

ಬಾದ.—ಅದಿರಲಿ. ನಾನು ನನ್ನ ಮಾತಿನಂತೆ ನಡೆಯಬೇಕಲ್ಲವೇ? ಇಲ್ಲವಾದರೆ ನಾನು ನಂಬಿಗೆಗೇಡಿಯಾಗುವೆನು. ಆದ್ದರಿಂದ ಈ ಹೊತ್ತು ನಿನ್ನ ಹೆಸರಿನ ಸನದು ಮಾಡಿಸಿ ಆ ಗ್ರಾಮವನ್ನು ನಿನ್ನ ಹಿಡುವಳಿಗೆ ಕೊಡುವೆನು.

ಕೂಡಲೆ ಬಾದಶಹನು ಒಡ್ಡೋಲಗಕ್ಕೆ ಹೋಗಿ ಸನದು ಮಾಡಿಸಿ ಉಂಬಳಿ ಗ್ರಾಮವನ್ನು ಬೀರಬಲ್ಲನ ವಶಕ್ಕೆ ಕೊಡಲಿಕ್ಕೆ ಬೇಕಾದ ಏರ್ಪಾಡು ಮಾಡಿದ್ದರಿಂದ ಬೀರಬಲ್ಲನು ಕೃತಕೃತ್ಯನಾದನು.

## ೬. ಮಾತು ಬಲ್ಲವನಿಗೆ ಜಗಳವಿಲ್ಲ

ಒಂದು ದಿನ ಬಾದಶಹ ಬೀರಬಲ್ಲರು ನಗೆಚೇಟಗೆ (ಚೇಷ್ಟೆ) ಮಾಡುತ್ತ ಕುಳಿತಿರುವಾಗ ಬಾದಶಹನ ಮನಸ್ಸಿನಲ್ಲಿ ಬೀರಬಲ್ಲನನ್ನು ನಾಚಿಸಿ ನಿರುತ್ತರನಾಗಿ ಮಾಡಬೇಕೆಂಬ ವಿಚಾರವು ಹುಟ್ಟಿ, ಅವನು ಎಷ್ಟೆಷ್ಟೋ ಎಣಿಕೆ ಹಾಕಿ ಕೊನೆಗೆ ಒಂದು ಕನಸನ್ನು ಹೇಳಬೇಕೆಂದು ಗೊತ್ತು ಮಾಡಿ—

ಬಾದ.—ಬೀರಬಲ್ಲ, ನಿನ್ನಿನ ರಾತ್ರೆ ನನಗೊಂದು ಸೋಜಿಗದ ಕನಸು ಬಿದ್ದಿತ್ತು.

ಬೀರ.—ಮಹಾರಾಜ, ನಿನ್ನೆ ರಾತ್ರಿ ನನಗೂ ಒಂದು ಕನಸು ಬಿದ್ದಿತ್ತು. ಆದರೆ ತಮ್ಮ ಕನಸೇನು ಹೇಳಿರಿ.

ಬಾದ.—ಹೆಚ್ಚಿಗೆ ಏನೂ ಇಲ್ಲ; ಕನಸೇನೂ ದೊಡ್ಡದಲ್ಲ. ನಾನು ಒಂದು ಜೇನುತುಪ್ಪದ ಕುಂಡದಲ್ಲಿ ಹೊರಳಾಡುತ್ತಿದ್ದೆನು, ನೀನು ಒಂದು ಶೌಚಮೂತ್ರದ ಕುಂಡದಲ್ಲಿ ಹೊರಳಾಡುತಿದ್ದೆ.

ಬೀರ.—ಮಹಾರಾಜ, ಇದೆಂತಹ ಆಶ್ಚರ್ಯದ ಹೋಲಿಕೆ, ನನಗೂ ಇದೇ ಕನಸು ಬಿದ್ದಿತ್ತು. ಆದರೆ—

ಬಾದ.—(ಸಂತೋಷದಿಂದ) ಇದೇ ಕನಸು ಬಿದ್ದಿತ್ತೇ? ನೀನು ಮಲದಲ್ಲಿ ಮುಳುಗಿದ್ದಿಯಾ?

ಬೀರ.—ಅಹುದು. ಆದರೆ ಮುಂದೆ ನಾವು ಮಾಡಿದ್ದು ತಮಗೆ ನೆನಪುಳಿಯಲಿಲ್ಲೆಂದು ತೋರುತ್ತದೆ.

ಬಾದ. — ಅದೇನು ? ನನಗೆ ಮರೆತುಹೋಯಿತು.

ಬೀರ. — ಮುಂದೆ ನಾವು ಆ ಕುಂಡಗಳಲ್ಲಿ ಒದ್ದಾಡಿ ಹೊರಗೆ ಬಂದ ಬಳಿಕ ತಾವು ತವಕದಿಂದ ನನ್ನ ಮೆಯ್ಯನ್ನು ನೆಕ್ಕ ತೊಡಗಿದಿರಿ, ನಾನು ತಮ್ಮ ಮೆಯ್ಯನ್ನು ನೆಕ್ಕಲಾರಂಭಿಸಿದೆನು.

ಬೀರಬಲ್ಲನು ಜಾಣತನದಿಂದ ತನ್ನ ಕುಚೋದ್ಯವನ್ನು ತನ್ನ ಮೇಲೆಯೇ ತಿರುಗಿಸಿದ್ದನ್ನು ನೋಡಿ ಮನಮುರಿದು, ಮುಂದೆ ಏನು ಮಾತಾಡಬೇಕೆಂಬುದು ತಿಳಿಯದೆ, ಬಾದಶಹನು ನಾಚಿ ತಲೆ ಬಾಗಿಸಿಕೊಂಡು ಸುಮ್ಮನೆ ಕುಳಿತನು.

## ೭. ಕಾಳೆಗದಲ್ಲಿ ಗೆಲವು

ಒಂದು ದಿನ ಕಾಳಗವನ್ನು ಆರಂಭಿಸುವಾಗ,

ಬಾದ. — ಬೀರಬಲ್ಲ, ಈ ಕಾಳೆಗದಲ್ಲಿ ನನಗೆ ಸೋಲೋ ಗೆಲವೋ ?

ಬೀರ. — ಜೀಯಾ ! ತಮಗೆ ಸೋಲಿಲ್ಲ. ಗೆಲವೇ ಸರಿ.

ಬಾದ. — ಏನುಕಾರಣ ಹೀಗೆ ಹೇಳುತ್ತಿ ?

ಬೀರ. — ಮಹಾರಾಜ, ನೋಡಿರಿ. ಹಗೆಗಳು ಮದ್ದಾನೆಗಳನ್ನೇರಿ ಬರುತ್ತಾರೆ. ಆ ಆನೆಗಳು ತಮ್ಮ ಸೊಂಡಿಲಿನಿಂದ ಮಣ್ಣನ್ನು ತೆಗೆದುಕೊಂಡು ತಮ್ಮನ್ನು ಹತ್ತಿಕೊಂಡಿರುವವರ ಮೇಲೆ ತೂರುತ್ತವೆ. ತಾವು ಏರಿದ ಕುದುರೆಯು ತನ್ನ ಖುರದಿಂದ ನೆಲವನ್ನು ಕೆದರುತ್ತದೆ.

ಬಾದ. — ಇದರ ಅರ್ಥವೇನು ?

ಬೀರ. — ಖುದಾವಂದ್, ಇದರಿಂದ ಹಗೆಗಳು ಮಣ್ಣುಪಾಲಾಗುವರೆಂತಲೂ ಹಗೆಗಳ ನೆಲವು ತಮ್ಮನ್ನು ಹೊಂದುವದೆಂತಲೂ ಸ್ಪಷ್ಟವಾಗಿ ಕಂಡುಬರುತ್ತದೆ.

ಬಳಿಕ ಕಾಳೆಗದಲ್ಲಿ ಗೆಲವಾಗಲು ಬಾದಶಹನು ಬೀರಬಲ್ಲನ ಜೋತಿಷ್ಯವನ್ನು ಹೊಗಳಿದನು.

### ೮. ನಾವಕೀರಕ್ಷಾ.

ಒಂದು ದಿವಸ ಬಾದಶಹನು ತನ್ನ ಬಹುಶ್ರುತತ್ವವನ್ನು ತೋರಿಸಬೇಕೆಂಬ ಹೆಮ್ಮೆಯಿಂದ—

ಬಾದ.—ಬೀರಬಲ್ಲ, ನೀನು ನಾವಕೀರಕ್ಷಾ ಎಂಬ ಅರಬ್ಬಿ ಪುಸ್ತಕವನ್ನು ನೋಡಿರುತ್ತೀಯಾ ?

ಬೀರ.—ಮಹಾರಾಜ, ಅದನ್ನು ಓದಿರುತ್ತೇನೆ.

ಬಾದ.—ನೀನು ಕುಳಿತಿರುವ ದೋಣಿಯು ಮುಳುಗುವ ಸಂದರ್ಭ ಬಂದಾಗ, ನೀನು ಆ ಪುಸ್ತಕವನ್ನು ಓದಿ ಅದರಲ್ಲಿ ಹೇಳಿದಂತೆ ಮಾಡಿದರೆ, ದೋಣಿಯು ಎಂದೂ ಮುಳುಗುವುದಿಲ್ಲ.

ಬೀರ.—ಮಹಾರಾಜ, ದೋಣಿಯು ಮುಳುಗುವಾಗ ಈ ಪುಸ್ತಕವನ್ನು ಓದಲಿಕ್ಕೆ ಮನಸ್ಸಿನ ಸ್ವಾಸ್ಥ್ಯವು ದೊರೆಯುವ ಬಗೆ ಹೇಗೆ? ಆ ಹೊತ್ತಿನಲ್ಲಿ ಮನುಷ್ಯನು ಗಾಬರಿಯಾಗುವುದಿಲ್ಲವೆ?

ಬಾದಶಹನು ನಿರುತ್ತರನಾದನು.

## ೪ನೆಯ ಪ್ರಕರಣ

## ವಾಕ್ಪಾಂಡಿತ್ಯ

### ೧. ತಿರುವಿಕೆ

ಒಂದು ದಿನ ಬಾದಶಹನು ಬೀರಬಲ್ಲನ ವಾಕ್ಪಾಂಡಿತ್ಯವನ್ನು ಪರೀಕ್ಷಿಸಬೇಕೆಂಬ ಉದ್ದೇಶದಿಂದ—

ಬಾದ.—ಬೀರಬಲ್ಲ, ನಿನಗೆ ವಾಕ್ಪಂಡಿತನೆಂಬ ಹೆಮ್ಮೆ ಇರುವುದಷ್ಟೇ?

ಬೀರ.—ತಮ್ಮ ಬಡ ಸೇವಕನಾದ ನನಗೆ ಹೆಮ್ಮೆ ಎಲ್ಲಿಯದು ? ತಾವು ಜಾಣನೆಂದರೆ ನಾನು ಜಾಣನಾಗುವೆನು; ದಡ್ಡನೆಂದರೆ ಹೆಡ್ಡನೇ ಸರಿ.

ಬಾದ.—ಅದೇಕೆ ? ನಿನ್ನಲ್ಲಿ ವಾಕ್ಚಾತುರ್ಯವುಂಟು.

ಬೀರ.—ಮಹಾಸ್ವಾಮಿಗಳ ಪ್ರಸಾದ.

ಬಾದ.—ಒಬ್ಬ ಫಕೀರನಿಗೆ ನಾಲ್ಕು ಮಂದಿ ಮರಿ(ಶಿಷ್ಯ)ಗಳಿದ್ದರು. ಅವನು ಪ್ರತಿಯೊಬ್ಬನಿಗೂ ಒಂದೊಂದು ಪ್ರಶ್ನವನ್ನು ಕೊಟ್ಟು ಎಲ್ಲರೂ

ನಾಲ್ಕೂ ಪ್ರಶ್ನಗಳ ಉತ್ತರವನ್ನು ಒಂದೇ ಶಬ್ದದಲ್ಲಿ ಕೊಡಬೇಕೆಂದು ಹೇಳಿದನಂತೆ. ಆ ಮರಿಗಳಲ್ಲೊಬ್ಬನು ಆ ಪ್ರಶ್ನಗಳ ಉತ್ತರವನ್ನು ಒಂದು ಶಬ್ದದಿಂದ ಕೊಟ್ಟನಂತೆ. ಆ ಮರಿಯು ವಾಕ್ಪಂಡಿತನಲ್ಲವೇ ?

ಬೀರ. — ಅದಕ್ಕೇನು ಸಂದೇಹ? ಅವನು ಪಂಡಿತನೇ ಸರಿ.

ಬಾದ. — ನಿನಗೆ ಆ ಪ್ರಶ್ನಗಳನ್ನು ಕೊಟ್ಟರೆ ಒಂದೇ ಶಬ್ದದಿಂದ ಉತ್ತರ ಕೊಡುವಿಯಾ ?

ಬೀರ. — ಮಹಾರಾಜರು ಕೇಳಬಹುದು. ನನ್ನಿಂದಾಗುವುದೋ ಇಲ್ಲವೋ ನೋಡುವೆನು. ತಮ್ಮ ಒಲುಮೆಯಿಂದ ಯಾವ ಪ್ರಶ್ನವನ್ನಾದರೂ ಬಿಡಿಸಬಹುದು.

ಬಾದ. — ಹಾಗಾದರೆ ಕೇಳು. ೧. ಎಲೆಗಳು ಏಕೆ ಕೊಳೆಯುತ್ತವೆ? ೨. ಕುದುರೆಯು ಏಕೆ ಚೆನ್ನಾಗಿ ನಡೆಯುವುದಿಲ್ಲ ? ೩. ಬಿತ್ತಿದ ಬೆಳೆಯು ಏಕೆ ಚೆನ್ನಾಗಿ ಬರುವುದಿಲ್ಲ ? ೪. ಕಲಿತ ವಿದ್ಯೆಯು ಏಕೆ ಮರೆಯುತ್ತದೆ ? ಈ ೪ ಪ್ರಶ್ನಗಳಿಗೆ ಒಂದೇ ಉತ್ತರವನ್ನು ಹೇಳು.

ಬೀರ. — ಮಹಾರಾಜ, ಇವುಗಳಿಗೆ ಒಂದೇ ಉತ್ತರ ಯಾವುದೆಂದರೆ— "ತಿರುವುವಿಕೆ ಇಲ್ಲದ್ದರಿಂದ."

ಬಾದ. — ಅದು ಹೇಗೆ? ನಿನ್ನ ಉತ್ತರವನ್ನು ಸ್ಪಷ್ಟವಾಗಿ ವಿವರಿಸಿ ಹೇಳು.

ಬೀರ. — ಖುದಾವಂದ್, ೧. ದಿನಾಲು ತಿರುಗಿಸಿ ಹಾಕದಿದ್ದರೆ ಎಲೆಗಳು ಕೊಳೆಯುತ್ತವೆ. ೨. ಆಗಿಂದಾಗ ತಿರುವದಿದ್ದರೆ ಕುದುರೆಗಳು ಅಡ್ಡಯಿಸುತ್ತವೆ. ೪. ಪ್ರತಿ ವರ್ಷ ಮಣ್ಣನ್ನು ತಿರುವಿ ಹಾಕದಿದ್ದರೆ ಹೊಲಗಳು ಬೆಳೆಯುವುದಿಲ್ಲ. ೩. ಕಲಿತುದನ್ನು ಬಾರಿಬಾರಿಗೆ ತಿರುವಿ ಹಾಕದಿದ್ದರೆ (ಪುನಶ್ಚರಣ ಮಾಡದಿದ್ದರೆ) ಕಲಿತುದು ಮರೆತು ಹೋಗುತ್ತದೆ.

ಬಾದ. — ಶಾಬಾಸ್! ಬೀರಬಲ್ಲ, ನಿನ್ನ ಉತ್ತರವನ್ನು ಕೇಳಿ ಬಹಳ ಸಂತೋಷವಾಯಿತು.

## ೨. ಮೆಹರ್ಬಾನ್

ಒಂದು ದಿವಸ ಬಾದಶಹ ಬೀರಬಲ್ಲರು ಮಾತಾಡುತ್ತ ಕುಳಿತಿರುವಾಗ ಮಾತಿಗೆ ಮಾತು ಹೊರಟು 'ಬಾನ' (ವಾನ) ಪ್ರತ್ಯಯದ ಅರ್ಥದ ಬಗ್ಗೆ ವಿಚಾರ ನಡೆಯಿತು.

ಬಾದ.—ಬೀರಬಲ್ಲ, ತಮ್ಮ ಹೆಸರಿನ ಮುಂದೆ **ಬಾನ** ಪ್ರತ್ಯಯ ಇದ್ದವರೆಲ್ಲ ಮೋಸಗಾರರಿರುತ್ತಾರೆ. ಉದಾಹರಣಾರ್ಥವಾಗಿ ಗಾಡೀವಾನ, ದರವಾನ, ಪೈಲವಾನ.

ಬೀರ.—ಮೆಹರ್ಬಾನ್, ತಾವು ಹಾಗೆನ್ನ ಕೂಡದು. ಆ ಪ್ರತ್ಯಯ ವುಳ್ಳ ಹೆಸರಿನವರು ಕೆಲವರು ಮೋಸಗಾರರಿರಬಹುದು.

ಬಾದ.—ಅಹುದು. ನಿನ್ನ ಮಾತೇ ಸರಿಯಾದುದು. ನನ್ನ ಅರ್ಥ ದಂತೆ ನಾನೇ ಮೋಸಗಾರನಾಗುವೆನು.

ಬೀರ.—ನಿಜ, ತಾವು ಮೆಹರ್ಬಾನರಾದರೂ ಮೋಸಗಾರರಲ್ಲ. ಆದ್ದರಿಂದ ಹಾಗೆ ಅರ್ಥ ಮಾಡಕೂಡದು.

ಬಾದಶಹನು ಸಂತುಷ್ಟನಾದನು.

## ೩. ಪಾದ ಅವರ ದಸ್ತ

ಒಂದು ದಿವಸ ಬಾದಶಹ ಬೀರಬಲ್ಲರು ಸಂತೋಷದಿಂದ ಮಾತಾ ಡುತ್ತ ಕುಳಿತಿರುವಾಗ—ಸಂಸ್ಕೃತ, ಪಾರ್ಶಿ— ಈ ನುಡಿಗಳ ಗುಣದೋಷ ಗಳ ಮಾತು ಹೊರಟಿತು.

ಬಾದ.—ಬೀರಬಲ್ಲ! ನಿಮ್ಮ ಸಂಸ್ಕೃತದ ನುಡಿಯಲ್ಲಿ ದಡ್ಡತನದ ಕುರುಹುಗಳೇ ಇರುತ್ತವೆ. ಅದು ಜಾಣರ ನುಡಿಯೆಂದು ತೋರುವುದಿಲ್ಲ.

ಬೀರ.—ಅದೇಕೆ? ಆ ನುಡಿಯಷ್ಟು ಗಂಭೀರವಾದ ಮತ್ತು ಅರ್ಥ ಪೂರಿತವಾದ ನುಡಿಯು ಮತ್ತಾವುದೂ ಇಲ್ಲೆಂದು ನನಗೆ ಕಾಣುತ್ತದೆ.

ಬಾದ.—ನಮ್ಮ ಕಾಲುಗಳು ಎಷ್ಟು ಉಪಯುಕ್ತವಾದುವು ನೋಡು. ಅವು ನಮ್ಮ ಚಲನವಲನಕ್ಕೆ ಮುಖ್ಯಾಧಾರವಾಗಿರುತ್ತವೆ. ಅವುಗಳಿಂದಲೇ

ನಾವು ತೀರ್ಥಯಾತ್ರೆಯನ್ನು ಮಾಡುತ್ತೇವೆ. ಇಷ್ಟು ಪ್ರಯೋಜನವುಳ್ಳ ಅವಯುವಗಳಿಗೆ ನೀವು ಪಾದಗಳೆನ್ನುತ್ತೀರಿ. ನಮ್ಮ ಪಾರ್ಸೀ ಭಾಷೆಯಲ್ಲಿ ಚೆಲೊ ವಸ್ತುಗಳಿಗೆ ಕೆಟ್ಟರ್ಥದ ಶಬ್ದವನ್ನು ಎಂದೂ ಬಳಿಸುವುದಿಲ್ಲ.

ಬೀರ.—ಮಹಾರಾಜ! ಹಾಗೆನ್ನ ಕೂಡದು. ತಮ್ಮ ಪಾರ್ಸಿಯಲ್ಲಿಯೂ ಕೆಟ್ಟರ್ಥದ ಶಬ್ದಗಳು ಎಷ್ಟೋ ದೊರೆಯ ಬಹುದು.

ಬಾದ.—ಒಂದೂ ದೊರೆಯಲಾರದು. ಹೇಳು ನೋಡೋಣ.

ಬೀರ.—ಖುದಾವಂದ್ ಕಾಲುಗಳಿಗಿಂತಲೂ ಕೈಗಳು ಹೆಚ್ಚು ಉಪಯುಕ್ತವಲ್ಲವೇ?

ಬಾದ.—ಅಹುದು. ಕೈಯಿಲ್ಲದಿದ್ದರೆ ಊಟ ಮಾಡಲಿಕ್ಕೆ ಕೂಡ ತೊಂದರೆಯಾಗಬಹುದು.

ಬೀರ.—ಮಹಾರಾಜಾ, ಇಂತಹ ಉಪಯುಕ್ತವಾದ ಕೈಗೆ ಪಾರ್ಸಿಯಲ್ಲಿ "ದಸ್ತ" ಅನ್ನುತ್ತಾರಲ್ಲ!!

ಬಾದ.—ಬೀರಬಲ್ಲ, ಅಹುದು. ಆ ಶಬ್ದವು ನನ್ನ ಲಕ್ಷ್ಯಕ್ಕೆ ಬರಲಿಲ್ಲ. ನೀನು ಒಳ್ಳೆಯ ಜಾಣನಿರುತ್ತಿ.

## ೪. ಒಂದೇ ಉತ್ತರದ ಪ್ರಶ್ನಗಳು.

ಒಂದು ದಿವಸ ಬಾದಶಹನು ಬೀರಬಲ್ಲನ ವಾಕ್ಚಾತುರ್ಯವನ್ನು ಪರೀಕ್ಷಿಸಬೇಕೆಂದೆಣಿಸಿ—

ಬಾದ.—ಬೀರಬಲ್ಲ, ನಾನು ಕೇಳಿದ ಎಲ್ಲ ಪ್ರಶ್ನಗಳಿಗೂ ಸರಿಯಾದ ಉತ್ತರವನ್ನು ಕೊಡುವಿಯಾ?

ಬೀರ.—ಮಹಾರಾಜ, ನನಗೆ ಅಷ್ಟು ಬುದ್ಧಿ ಸಾಲದು. ಆದರೂ ತಮ್ಮ ಅನುಗ್ರಹಬಲದಿಂದ ತಾವು ಕೇಳಿದ ಪ್ರಶ್ನಗಳಿಗೆ ಉತ್ತರ ಕೊಡಬಹುದೆಂದು ತೋರುತ್ತದೆ.

ಬಾದ.—೧. ಬ್ರಾಹ್ಮಣನು ನೀರಡಿಸಿದ್ದರೂ ಏಕೆ ನೀರು ಕುಡಿಯಲಿಲ್ಲ? ೨. ಕತ್ತೆಯು ಏಕೆ ಉದಾಸೀನವಾಗಿ ನಿಂತಿರುತ್ತದೆ? ಈ ೨ ಪ್ರಶ್ನೆಗಳಿಗೆ ಒಂದೇ ಉತ್ತರ ಹೇಳು.

ಬೀರ.—ಲೋಟಾ ನಥಾ. (ಲೋಟಾ=೧ ತಂಬಿಗೆ, ೨ ಮೆಯ್ಯುರಿದುಡಿತ).

ಬಾದ.—೧. ಒಡೆಯನ್ನು ಏಕೆ ತಿನ್ನಲಿಲ್ಲ? ೨. ಪಾದರಕ್ಷೆಗಳನ್ನು ಏಕೆ ಹಾಕಿಕೊಳ್ಳಲಿಲ್ಲ?

ಬೀರ.—ತಲಾ ನಥಾ. (ತಲಾ=೧. ಕರಿಯೋಣ, ೨ ಬುಡ).

ಬಾದ.—೧. ಮಳೆಯು ಏಕೆ ಸುರಿಯಲಿಲ್ಲ? ೨. ತಲೆದಿಂಬು ಏಕೆ ಹೊಲಸಾಯಿತು?

ಬೀರ.—ಬದಲಿ ನಥಿ. (ಬದಲಿ=ಅಭ್ರ=೧ ಮೋಡ, ೨ ಗವಸಣಿಗೆ).

ಬಾದ.—೧. ಗೋಡೆ ಏಕೆ ಬಿದ್ದಿತು? ೨. ಹಾದಿಯಲ್ಲಿ ಸುಲಿಗೆ ಏಕಾಯಿತು?

ಬೀರ.—೧ ರಾಜ ನಥಾ. (೧ ಪುಸ್ತಿ, ೨ ಅರಸು).

ಬಾದ.—೧. ಮನೆಯಲ್ಲಿ ಕತ್ತಲೆ ಏಕಾಯಿತು? ೨. ಫಕೀರನು ಏಕೆ ತಿರುಗಿ ಹೋದನು?

ಬೀರ.—ದೀಯಾ ನಥಾ. (ದೀಯಾ=೧ ದೀವಿಗೆ, ೨ ಕೊಡೋಣ, ಭಿಕ್ಷೆ ಹಾಕೋಣ).

ಬಾದ.—೧. ಸಿತಾರವು ಏಕೆ ಬಾರಿಸುವುದಿಲ್ಲ? ೨. ಹೆಂಗಸು ಏಕೆ ಎರೆದುಕೊಳ್ಳಲಿಲ್ಲ?

ಬೀರ.—ಪರದಾ ನಥಾ. (ಪರದಾ=೧ ತಂಬೂರಿಯ ಪಡದೆ, ೨ ಮರೆ).

## ೫. ಬಿಂದುವಿಲ್ಲದ ಶಬ್ದಗಳಿಂದ ಬರೆದ ಕುರಾಣದ ಟೀಕೆ

ಅಕ್ಬರ ಬಾದಶಹನು ಅಬುಲ್‌ಫಾಯಜಿಯೆಂಬ ಒಬ್ಬ ಇರಾಣದ ಘನವಿದ್ವಾಂಸನನ್ನು ತನ್ನ ಆಶ್ರಯದಲ್ಲಿಟ್ಟುಕೊಂಡಿದ್ದನು. ಅವನು ಒಂದು

ಕುರಾಣದ ಟೀಕೆಯನ್ನು ಬರೆಯು ತೊಡಗಿದ್ದನು. ಅದನ್ನು ಬಿಂದುವಿಲ್ಲದ ಶಬ್ದಗಳಿಂದಲೇ ಬರೆಯುಬೇಕೆಂದು ಅವನು ಪ್ರತಿಜ್ಞೆ ಮಾಡಿದ್ದನು. ಅರಬ್ಬಿ ಪಾರ್ಸೀ ಭಾಷೆಗಳಲ್ಲಿ ೩೩ ಅಕ್ಷರಗಳಿರುವುವು. ಅವುಗಳೊಳಗೆ ೧೫ ಮಾತ್ರ ಬಿಂದುವಿಲ್ಲದುವು. ಆದ್ದರಿಂದ ಈ ಕೆಲಸವು ಬಲು ಬಿಗಿಯಾದ್ದರಿಂದ ಎಲ್ಲರೂ ಈ ಗ್ರಂಥವನ್ನು ಇದುರು ನೋಡುತ್ತಿದ್ದರು.

ಒಂದು ದಿವಸ ಬಾದಶಹನು ರಾಜ್ಯದ ಕೆಲಸವೆಲ್ಲ ತೀರಿದ ಬಳಿಕ ಅಬುಲ್‌ಫಾಯುಜಿಯನ್ನು ನೋಡಿ,—

ಬಾದ.—ತಮ್ಮ ಟೀಕಾಗ್ರಂಥವು ಮುಗಿಯಿತೇನು?

ಅಬುಲ್—ಮುಗಿಯುತ್ತಾ ಬಂದಿದೆ. ಆದರೆ ಆರಂಭದ ಶಬ್ದವನ್ನು ಯಾವುದನ್ನು ಹಾಕಬೇಕೆಂಬ ವಿಚಾರ ನಡೆದಿದೆ. ಬಿಸಮಿಲ್ಲಾ ಶಬ್ದದಲ್ಲಿ ಅನುಸ್ವರ ಬರುತ್ತದೆ. ಅದರ ಬದಲು ಯಾವುದನ್ನು ಹಾಕಬೇಕೋ ತಿಳಿಯಲೊಲ್ಲದು.

ಬಾದ.—(ಉಳಿದ ಸರದಾರರನ್ನು ನೋಡಿ) ನೀವು ಯಾವದಾದರೊಂದು ಬಿಂದುವಿಲ್ಲದ ಶಬ್ದವನ್ನು ಸೂಚಿಸುವಿರಾ?

ಎಲ್ಲ ಸರದಾರರೂ ಒಬ್ಬರ ಮೋರೆಯನ್ನು ಮತ್ತೊಬ್ಬರು ಮಿಕಿಮಿಕಿ ನೋಡಲಾರಂಭಿಸಿದರು. ಒಬ್ಬನಿಂದಲೂ ಉತ್ತರ ಹೊರಡಲಿಲ್ಲ.

ಬಾದ.—(ಬೀರಬಲ್ಲನ ಕಡೆಗೆ ನೋಡಿ) ಬೀರಬಲ್ಲ ನೀನು ಏನಾದರೂ ಹೇಳಬಲ್ಲೆಯಾ?

ಬೀರ.—ಅಬುಲ್‌ಫಾಯುಜಿಯು ನನ್ನನ್ನು ಕೇಳಿದರೆ ನಾನು ಹೇಳುವೆನು.

ಬಾದ.—ಅಬುಲ್‌ಫಾಯುಜಿ, ತಾವು ಬೀರಬಲ್ಲನನ್ನು ಕೇಳಬಹುದು. ಅವನು ಅರಬ್ಬಿ ಪಾರ್ಸಿ ಭಾಷೆಗಳಲ್ಲಿ ಬಲು ಜಾಣನು.

ಅಬುಲ್‌ಫಾಯುಜಿ—ಇದು ನನಗೆ ಗೊತ್ತಿದ್ದಿಲ್ಲ. ಅವನು ಹಿಂದೂ ಆದ್ದರಿಂದ ಅವನಿಗೆ ಗೊತ್ತಿರಲಿಕ್ಕಿಲ್ಲೆಂದು ಎಣಿಸಿದ್ದೆನು. ಈಗ ಕೇಳುತ್ತೇನೆ. ಬೀರಬಲ್ಲ, ದಯವಿಟ್ಟು ಒಂದು ಬಿಂದುವಿಲ್ಲದ ಶಬ್ದವನ್ನು ಸೂಚಿಸಿದರೆ ನನಗೆ ದೊಡ್ಡ ಉಪಕಾರ ಮಾಡಿದಂತಾಗುವದು.

ಬೀರ.—(ಅಬುಲ್‌ಫಾಯಜಿಯನ್ನು ಉದ್ದೇಶಿಸಿ) ರಾಜಕವಿಗಳೇ! ಪಂಡಿತಶ್ರೇಷ್ಠರೇ? ನನ್ನ ಅರಬ್ಬಿ ಪಾರ್ಸಿ ಭಾಷೆಗಳ ಜ್ಞಾನವು ತಮ್ಮ ಜ್ಞಾನಕ್ಕಿಂತ ಬಹಳ ಕಡಮೆ. ತಮಗೆ ಏನು ಕಾರಣ ಇಂತಹ ಶಬ್ದವು ನೆನಪಾಗಲೊಲ್ಲದೋ ತಿಳಿಯುವುದಿಲ್ಲ. ದೇವರು ನಮ್ಮಿಬ್ಬರ ಸ್ನೇಹವನ್ನು ಬೆಳೆಯಿಸುವ ಉದ್ದೇಶದಿಂದ ಈ ತರದ ಸಂದರ್ಭವನ್ನು ತಂದಿದ್ದರೂ ತಂದಿರಬಹುದು. ಅದೇನೇ ಇರಲಿ, ತಾವು ಬಿಸಮಿಲ್ಲಾ ಶಬ್ದದ ಬದಲು **ಕಲಮಾ** ಶಬ್ದವನ್ನು ನಿಸ್ಸಂದೇಹವಾಗಿ ಬರೆಯಬಹುದು. ಅದರಲ್ಲಿ ಅನುಸ್ವಾರವಿಲ್ಲ.

ಕಲಮಾ ಶಬ್ದವನ್ನು ಕೇಳಿದ ಕೂಡಲೆ ಎಲ್ಲ ಒಡ್ಡೋಲಗವೂ ಚಕಿತವಾಯಿತು. ಅಬುಲ್‌ಫಾಯಜಿಯು ಸಂತೋಷದಿಂದ ಕುಣಿಯಲಾರಂಭಿಸಿದನು. ಬಾದಶಹನು ನಲಿದು ತಲೆದೂಗಿದನು. ಸಂತಸದ ಉಕ್ಕು ಕಡಿಮೆಯಾದ ಬಳಿಕ—

ಅಬುಲ್—ಬೀರಬಲ್ ಮಹಾಶಯರೇ, ಇದೊಂದು ಶಬ್ದವನ್ನು ಸೂಚಿಸಿದ್ದರಿಂದ ನಾನು ತಮಗೆ ಅತ್ಯಂತ ಕೃತಜ್ಞನಾಗಿದ್ದೇನೆ. ಈ ಹೊತ್ತಿನಿಂದ ತಾವು ನನ್ನ ಗುರುಗಳಾದಿರಿ. ಈ ಶಬ್ದದ ಮಹತ್ವವು ಬಹಳವಿರುತ್ತದೆ. ಈ ಶಬ್ದದ ಬಗ್ಗೆ ನಾನು ಬಹಳ ಗೋಳಾಡಿದೆನು. ಈಗ ಮೂರು ತಿಂಗಳಿಂದ ಪ್ರಯತ್ನ ಮಾಡುತ್ತಲಿದ್ದೇನೆ. ಶಬ್ದವೇ ದೊರೆಯುವುದಿಲ್ಲೆಂದೆಣಿಸಿ ನಿರಾಶನಾಗ ತೊಡಗಿದ್ದೆನು. ಎಷ್ಟೋ ಜನರನ್ನು ಕೇಳಿದೆನು, ಯಾರೂ ಹೇಳಲಿಲ್ಲ. ಬಾದಶಹರು ಈ ಹೊತ್ತು ನನ್ನ ಮೇಲೆ ಪರಮಾನುಗ್ರಹ ಮಾಡಿ ಈ ವಿಷಯವನ್ನೆತ್ತಿ, ತಮಗೂ ನನಗೂ ಉತ್ತಮ ಸಂಧಿಯನ್ನು ತಂದುಕೊಟ್ಟರು. ಅವರಿಗೆ ನಾನು ಅತ್ಯಂತ ಕೃತಜ್ಞನಾಗಿದ್ದೇನೆ. ತಾವಂತೂ ಈ ಹೊತ್ತಿನಿಂದ, ನನ್ನ ಗುರುವಾದಿರೆಂದು ಮೊದಲೇ ಬಿನ್ನವಿಸಿದ್ದೇನೆ.

ಬಾದ.—ಬೀರಬಲ್ಲ, ಅರಬ್ಬಿ ಪಾರ್ಸಿ ಭಾಷೆಗಳು ಪರಭಾಷೆಗಳಾದರೂ ನೀನು ಅವುಗಳಲ್ಲಿ ಇಷ್ಟು ನಿಷ್ಣಾತನಾದುದನ್ನು ನೋಡಿ ನನಗೆ ಬಹಳ

ಸಂತೋಷವಾಯಿತು. ಅಬುಲ್‌ಫಾಯುಜಿಯಂತಹ ಘನವಿದ್ವಾಂಸನು ನೀನು ಗುರು ಎಂದು ಒಪ್ಪಿಕೊಂಡ ಬಳಿಕ ನನ್ನ ರಾಜ್ಯದಲ್ಲಿ ನೀನು ಎಲ್ಲರಿಗಿಂತ ಹೆಚ್ಚಿನ ವಿದ್ವಾಂಸನಾದಿ. ಆದ್ದರಿಂದ ನಾನು ನಿನಗೆ ಸಂತೋಷದಿಂದ **ರಾಜಕವಿ** ಎಂಬ ಬಿರುದನ್ನು ಕೊಟ್ಟಿರುತ್ತೇನೆ. ದೇವರು ನಿನಗೆ ಆಯುರಾರೋಗ್ಯಗಳನ್ನು ಕೊಟ್ಟು ಬಹಳ ವರ್ಷ ಬಾಳುವಂತೆ ಮಾಡಲೆಂದು ಪ್ರಾರ್ಥಿಸುತ್ತೇನೆ.

ಬೀರ.—ಮಹಾರಾಜ, ನನ್ನ ಅತ್ಯಲ್ಪ ಜ್ಞಾನವನ್ನು ಇಷ್ಟು ದೊಡ್ಡದಾಗಿ ತಿಳಿದುಕೊಂಡ ಬಗ್ಗೆ ಅಬುಲ್‌ಫಾಯುಜಿಯವರಿಗೆ ನಾನು ಕೃತಜ್ಞನಾಗಿದ್ದೇನೆ. ಪರಮಾಣುವನ್ನು ಪರ್ವತವಾಗಿ ಎಣಿಸುವುದೇ ಸಜ್ಜನರ ಶೀಲವು. ತಾವು ಉದಾರಬುದ್ಧಿಯಿಂದ ರಾಜಕವಿಯೆಂಬ ಬಹುಮಾನದ ಬಿರುದನ್ನು ಕೊಟ್ಟಿದ್ದರಿಂದ ತಮ್ಮ ಮಹೋಪಕಾರವನ್ನು ಸಾಯುವ ವರೆಗೂ ಮರೆಯಲಾರೆನು. ದೇವರು ತಮಗೆ ಕಲ್ಯಾಣ ಮಾಡಲಿ ! ! !

## ೬. ವಾಕ್ಕಲಹ

ಅಕ್ಬರನು ಮುಂಗೋಪಿಯಾಗಿದ್ದನು. ಬೀರಬಲ್ಲನು ಶಾಂತಗುಣದವನಾಗಿದ್ದನು. ಆದ್ದರಿಂದ ಬೀರಬಲ್ಲನು ತನ್ನ ಪಾಂಡಿತ್ಯದ ಕಸುವಿನಿಂದ ಎರಡರ್ಥದ ಶಬ್ದಗಳನ್ನು ಉಪಯೋಗಿಸಿ ಬಾದಶಹನನ್ನು ಆಗಿಂದಾಗ ಸಿಟ್ಟಿಗೆಬ್ಬಿಸುತ್ತಿದ್ದನು. ಒಮ್ಮೆ ಬಾದಶಹನು ಯಮುನಾ ಹೊಳೆಯಲ್ಲಿ ಬಲೆಯೊಡ್ಡಿ ಮೀನು ಹಿಡಿಯುತ್ತಿರುವಾಗ ಯಾರೊ ಬಾದಶಹರು ಏನು ಮಾಡುತ್ತಾರೆಂದು ಕೇಳಲು, ಬೀರಬಲ್ಲನು —“**ಬಾದಶಹ ಝುಕ್ ಮಾರತೆ ಹೈ**”—ಎಂದು ಹೇಳಿದನು. ಮತ್ತೊಮ್ಮೆ ಬಾದಶಹನು ಜೇನುತುಪ್ಪವನ್ನು ತಿನ್ನುತ್ತ ಕುಳಿತಿರುವಾಗ– **ಬಾದಶಹ, ಗೂ ಖಾ ರಹೆ ಹೈ** –ಮಗದೊಮ್ಮೆ “**ಬಾದಶಹ ಶುಕರ ಖಾಯ**” ಎಂದು ಹೇಳಿದನು. ಈ ಅವಮಾನದ ಮಾತುಗಳನ್ನು ಕೇಳಿ—

ಬಾದ.—ಏನು ಬೀರಬಲ್ಲ ! ಸುಳ್ಳು ಹೇಳಿ ನನಗೆ ಅವಮಾನವ ಮಾಡುತ್ತಿಯಾ ?

ಬೀರ.—ಜೀಯಾ! **ಶಾಂತಮ್ ಪಾಪಮ್;** ನಾನು ಎಂದಾದರೂ ತಮಗೆ ಅಪಮಾನ ಮಾಡುವೆನೇ? ತಮ್ಮನ್ನು ನಾನು ದೇವರಂತೆ ಭಾವಿಸಿ ಮನಮುಟ್ಟಿ ಪೂಜಿಸುತ್ತೇನೆಂಬುದು ತಮಗೆ ಗೊತ್ತೇ ಇರುತ್ತದೆ. ಹೀಗಿದ್ದು ನಾನು ತಮ್ಮನ್ನು ಅವಮಾನ ಮಾಡಬೇಕೆಂದು ಬಗೆಯುವೆನೇ? ತಾವೇ ಆಲೋಚಿಸಿರಿ.

ಬಾದ.—(ಮುನಿಸು ಕಡಮೆಯಾಗಿ) ಬೀರಬಲ್ಲ! « ನೀನು ಹೇಳುವ ಮಾತು ದಿಟವಿರಬಹುದು. ಆದರೆ « ಗೂಖಾರಹೆ ಹೈ" « ಝುಕ್ ಮಾರತೆ ಹೈ" « ಶೂಕರ ಖಾಯೆ" ಎಂಬ ಮಾತಿನ ಅರ್ಥವೇನಾಗುವುದು? ಸಾಮಾನ್ಯ ಜನರು ಏನು ತಿಳಿದುಕೊಳ್ಳುವರು?

ಬೀರ.—ಸಾಧಾರಣ ಜನರು ಏನಾದರು ತಿಳಿದುಕೊಳ್ಳಲಿ. ತಾವು ಬಲ್ಲವರಾದ್ದರಿಂದ ಸಿಟ್ಟಿಗೇಳ ಕೂಡದು. ತಾವು ಅರಬ್ಬಿ ಪಾರ್ಸಿಭಾಷೆಗಳಲ್ಲಿ ನಿಷ್ಣಾತರೆಂದು ಎಷ್ಟೋ ಸಾರಿ ಹೇಳಿಲ್ಲವೇ?

ಬಾದ.—(ನಾಚಿಕೊಂಡು) ಅಹುದು. ಈ ಮಾತುಗಳಲ್ಲಿ ನಿನ್ನ ಅಭಿಪ್ರಾಯವೇನು? ಸಾಮಾನ್ಯ ಜನರ ತಿಳಿವಳಿಕೆಯು ತಪ್ಪಾಗುವುದೆಂದು ನಾನು ಸಿಟ್ಟಿಗೆದ್ದೆನು. ಇವರೆಲ್ಲರೂ (ಅಲ್ಲಿ ಕುಳಿತವರನ್ನು ಉದ್ದೇಶಿಸಿ) ಸರಿಯಾದ ಅರ್ಥವನ್ನು ಗ್ರಹಿಸುವಂತೆ ನಿನ್ನ ಅಭಿಪ್ರಾಯವನ್ನು ವಿವರಿಸಿ ಹೇಳು.

ತಾನು ಹೇಳಿದ ಮಾತುಗಳ ಅರ್ಥವು ಬಾದಶಹನಿಗೆ ತಿಳಿಯಲಿಲ್ಲೆಂದು ಬೀರಬಲ್ಲನು ಮನಗಂಡನು. ತನಗೆ ಅರ್ಥ ತಿಳಿಯದ್ದನ್ನು ಹೇಳಲಿಕ್ಕೆ ನಾಚಿಕೆಯಾದುದರಿಂದ ಉಳಿದವರ ನೆವಮಾಡಿ ತನಗಾಗಿ ಅರ್ಥ ಕೇಳಿದನೆಂದು ಅವನಿಗೆ ಮನವರಿಕೆಯಾಯಿತು.

ಬೀರ.—ಮಹಾರಾಜ! ನಾನೆಂದಿಗೂ ತಮಗೆ ಅವಮಾನವನ್ನು ಬಗೆದಿಲ್ಲ. ಚಿತ್ತೈಸಿರಿ! 'ಝುಕ್ ಮಾರತೆ ಹೈ' ಎಂದರೆ ಮೀನುಗಳನ್ನು ಹಿಡಿಯುತ್ತಾರೆ. ನಮ್ಮ ಹಿಂದಿ ಭಾಷೆಯಲ್ಲಿ ಝುಕ್ ಎಂದರೆ ಮೀನು. ತಾವು ಆಗ ಮೀನು ಹಿಡಿಯುತ್ತಿದ್ದಿಲ್ಲವೇ? 'ಗೂ ಖಾ ರಹೆ ಹೈ' ಎಂದರೆ ಜೇನುತುಪ್ಪವನ್ನು ಸವೆಯುತ್ತಾರೆ ಎಂಬರ್ಥವು. ತಾವು ಆಗ ಜೇನು

ತುಪ್ಪವನ್ನು ಮೆಲ್ಲುತಿದ್ದಿಲ್ಲವೇ? ಪಾರ್ಸಿಭಾಷೆಯಲ್ಲಿ ಜೇನುತುಪ್ಪಕ್ಕೆ ಗೂ ಎನ್ನುತ್ತಾರೆಂಬುದು ತಮಗೆ ಗೊತ್ತೇ ಇರುತ್ತದೆ. ಇನ್ನು ಮೂರನೆಯು ದಾದ 'ಶುಕ ರಖಾಯು' ಎಂದರೆ ಗಿಳಿಯನ್ನು ಕಾಪಾಡುತ್ತಾರೆಂಬರ್ಥವು. ಶುಕ=ಗಿಳಿ, ರಖಾಯು=ಕಾಪಾಡುತ್ತಾರೆ. ವಿಪರೀತಾರ್ಥವನ್ನು ಜನರು ಏಕೆ ಮಾಡುವರೋ, ನನಗೆ ತಿಳಿಯಲೊಲ್ಲದು. ನಾನು ಇದ್ದದ್ದಿದ್ದ ಹಾಗೆ ಹೇಳಿರುತ್ತೇನೆ. ಮಹಾರಾಜರು ದಯವಿಟ್ಟು ಕ್ಷಮಿಸಬೇಕು.

ಬಾದ.—(ಮೊದಲೇ ಗೊತ್ತಿದ್ದವನಂತೆ ತೋರಿಸಿಕೊಳ್ಳಲಿಕ್ಕೆ) ಬೀರ ಬಲ್ಲ! ನೀನು ಹೇಳಿದ್ದರಲ್ಲಿ ಕೆಟ್ಟರ್ಥವೇನೂ ಇಲ್ಲ. ಅದು ನನಗೆ ಗೊತ್ತಿತ್ತು. ಆದರೆ ನಿನ್ನ ಗೂಢಾರ್ಥವು ಕೆಲ ಮಂದಿ ಸಾಮಾನ್ಯರಿಗೆ ತಿಳಿಯದ್ದರಿಂದ ಅವರು ಏನೇನೋ ಹೇಳುತ್ತಾರೆ. ಅದಕ್ಕೋಸುಗ ನಾನು ಸಿಟ್ಟಿಗೆದ್ದೆನು. ಈಗ ನಿನ್ನ ಅರ್ಥವು ಎಲ್ಲರಿಗೂ ತಿಳಿದಂತಾಯಿತು.

ಮೇಲೆ ಬರೆದಂತೆ ಬಾದಶಹನು ಬೀರಬಲ್ಲನ ಮುಂದೆ ಆಡಿದರೂ ಸಂಧಿಯನ್ನು ಸಾಧಿಸಿ, ಬೀರಬಲ್ಲನಿಗೆ ಕುಚೇಷ್ಟೆಯನ್ನು ಮಾಡಬೇಕೆಂಬ ಹವಣಿಕೆಯು ಅವನ ಮನಸ್ಸಿನಲ್ಲಿ ಹುಟ್ಟಿತು. ಆದ್ದರಿಂದ ಅವನು ಅವರನ್ನು ಇವರನ್ನು ಕೇಳಿ ಒಂದೆರಡು ಎರಡರ್ಥಗಳುಳ್ಳ ಶಬ್ದಗಳನ್ನು ಕಲಿತು, ಒಂದು ದಿವಸ ಬಾದಶಹ ಬೀರಬಲ್ಲರು ಯಮುನಾ ತಟದಲ್ಲಿ ಮಾತಾಡುತ್ತ ಅಡ್ಡಾಡುತ್ತಿರುವಾಗ ಸೂರ್ಯಾಸ್ತಮಯ ಸಮೀಪಿಸಿದ್ದರಿಂದ ಬೀರಬಲ್ಲನು ತನ್ನ ಉಡುಪನ್ನು ತೆಗೆದು ಕಾಲುತೊಳೆದುಕೊಂಡು, ಸಂಧ್ಯಾವಂದನಕ್ಕೆ ಕುಳಿತನು. ಅವನು ಜಪಮಾಲೆಯನ್ನು ಹಿಡಿದುಕೊಂಡು ಜಪಮಾಡುತ್ತಿರುವಾಗ,

ಬಾದ.—ಬೀರಬಲ್ಲ! **'ಮಾ ಲಾದೆ'** (ತಾಯಿಯನ್ನು ಕೊಡು).

ಈ ಮಾತನ್ನು ಕೇಳಿದ ಕೂಡಲೆ ಬೀರಬಲ್ಲನಿಗೆ ಬಾದಶಹನ ಕುಯುಕ್ತಿಯು ಹೊಳೆಯಿತು. ಆದರೂ ಅವನು ಶಾಂತಸ್ವಭಾವದವನೂ ಸಮಯ ಸೂಚಕತೆಯುಳ್ಳವನೂ ಆದ್ದರಿಂದ, ಬಾದಶಹನ ಪ್ರಶ್ನಕ್ಕೆ ಲಕ್ಷಕೊಡದೆ ತನ್ನ ಮೆಯ್ಮೇಲಿದ್ದ ಒಲ್ಲಿಯನ್ನು ತೆಗೆದು ಹೊಳೆಯಲ್ಲಿ ಒಗೆದನು.

ಬಾದ.—ಬೀರಬಲ್ಲ! ಇದೇನು ಮಾಡಿದೆ? ನಿನ್ನ ದೋತರವು ಹೊಳೆಯಲ್ಲಿ ಹರಿದು ಹೋಗುತ್ತದೆ.

ಬೀರ. — '**ಬಹನ ದೊ**' (ತಂಗಿಯನ್ನು ಕೊಡು).

ಬಾದಶಹನು ಸಿಟ್ಟು ಬೆಂಕಿಯಾಗಿ,

ಬಾದ. — ಬೀರಬಲ್ಲ! ನನ್ನ ತಂಗಿಯನ್ನು ಕೇಳುತ್ತೀಯಾ?

ಬೀರ. — ಮಹಾರಾಜ! ತಾವು ನನ್ನ ತಾಯಿಯನ್ನು ಕೊಡು ಎಂದು ಕೇಳಬಹುದೇ?

ಬಾದ. — ನಾನೆಲ್ಲಿ ನಿನ್ನ ತಾಯಿಯನ್ನು ಕೇಳಿದೆನು? ನಿನ್ನ ಜಪ ಮಾಲೆಯನ್ನು (ಮಾಲಾದೇ) ಬೇಡಿದೆನು. ನಿನ್ನ ತಾಯಿಯು ನನ್ನ ತಾಯಿಯ ಸಮಾನ.

ಬೀರ. — ಮಹಾರಾಜ! ನಾನೆಲ್ಲಿ ತಮ್ಮ ತಂಗಿಯನ್ನು ಬೇಡಿದೆ? ದೋತರವು ನೀರಲ್ಲಿ ಹರಿದು ಹೋಗಲಿ ಎಂದು ಮಾತ್ರ ಹೇಳಿದೆನು. ತಾವು ನನ್ನನ್ನು ತಮ್ಮನಂತೆ ಪ್ರೀತಿಸುವುದರಿಂದ ತಮ್ಮ ತಂಗಿಯು ನನ್ನ ತಂಗಿಯಾಗಲಿಲ್ಲವೆ? ಇಂತಹ ಅಬದ್ಧವಾದ ಮಾತು ನನ್ನ ಬಾಯಿಂದ ಎಂದಾದರೂ ಬಂದೀತೆ? 'ಶಾಂತಮ್ ಪಾಪಮ್.'

ಈ ಉತ್ತರವನ್ನು ಕೇಳಿ ಬಾದಶಹನು ಸುಮ್ಮನಾದನು.

## ೭. ಅರಸುತನ ಬೇಡ

ಒಮ್ಮೆ ಅಕ್ಬರ ಬಾದಶಹನು ತನ್ನ ಆಪ್ತೇಷ್ಟಾಶ್ರಿತರ ಕುಚೇಷ್ಟೆಗೂ ಒಳ ಸಂಚಿಗೂ ದ್ರೋಹಕ್ಕೂ ಬೇಸತ್ತು—

ಬಾದ. — ಬೀರಬಲ್ಲ! ಈ ಅರಸುತನವು ಇಲ್ಲದಿದ್ದರೆ ಬಹಳ ಒಳಿತಾಗುತ್ತಿತ್ತು.

ಬೀರ. — ಮಹಾರಾಜ! ನನಗೆ ಮೂರು ವೈರಾಗ್ಯಗಳು ಗೊತ್ತಿವೆ— ೧. ಪ್ರಸೂತ ವೈರಾಗ್ಯ, ೨. ಪುರಾಣ ವೈರಾಗ್ಯ, ೩. ಸ್ಮಶಾನ ವೈರಾಗ್ಯ. ಇವುಗಳೊಳಗೆ ತಮ್ಮದು ಪುರಾಣ ವೈರಾಗ್ಯವಾಗಿರಬಹುದೆಂದು ತೋರುತ್ತದೆ. ಈ ವೈರಾಗ್ಯಗಳೆಲ್ಲ ಅಲ್ಪಕಾಲದವೇ ಸರಿ.

ಬಾದ. — ಬೀರಬಲ್ಲ! ನಾನು ಹೇಳಿದ್ದು ವೈರಾಗ್ಯದ ಸೊಲ್ಲೆಂದೆಣಿಸ ಬೇಡ. ನಿಜವಾಗಿ ನಾನು ಹೇಳುತ್ತೇನೆ. ಈ ಅರಸುತನವಿಲ್ಲದಿದ್ದರೆ ಬಲು ಲೇಸಾಗುತ್ತಿತ್ತು.

ಬೀರ. — ಮಹಾರಾಜ! ಅದು ಇಲ್ಲದಿದ್ದರೆ ತಾವು ಹೇಗೆ ಅರಸರಾಗುತ್ತಿದ್ದಿರಿ?

ಬಾದ. — ಹೌದು. ನೀನು ಹೇಳುವದು ನಿಜ; ಆದರೆ—

ಬೀರ. — ಮಹಾರಾಜ! ಈ ಜಗತ್ತಿನಲ್ಲಿ ಹೊನ್ನು, ಹೆಣ್ಣು, ಮಣ್ಣು ಈ ಮೂರನ್ನು ಎಲ್ಲರೂ ಬಯಸುತ್ತಾರೆ. ಅರಸುತನದಿಂದ ಇವೆಲ್ಲ ಸುಲಭವಾಗಿ ದೊರೆಯುತ್ತವೆ. ಆದ್ದರಿಂದ ಅರಸುತನವು ಮಹಾ ಪುಣ್ಯಶಾಲಿಗಳಿಗೆ ಮಾತ್ರ ಸಿಕ್ಕುತ್ತದೆ.

ಬಾದ. — ನೀನು ಹೇಳುವುದು ನಿಜ; ಆದರೆ ಅರಸರಾದವರಿಗೆ ಸುಖವಿಲ್ಲ, ತೊಂದರೆಗಳು ಬಹಳ.

ಬೀರ. — ಖುದಾವಂದ್! ಈ ಜಗತ್ತಿನಲ್ಲಿ ಸುಖದುಃಖಗಳು ಮಿಶ್ರವಾಗಿರುತ್ತವೆ. ಅರಸುತನದಲ್ಲಿ ನೋವಿಗಿಂತ ನಲಿವು ಹೆಚ್ಚಾಗಿರುವುದರಿಂದ ಅದನ್ನು ಎಲ್ಲರೂ ಬಯಸುತ್ತಾರೆ. ತಾವು ಸಾರ್ವಭೌಮರಾಗಲಿಕ್ಕೆ ಹವಣಿಸುವುದಿಲ್ಲವೇ? ನೋವನ್ನು ಕೆಲಹೊತ್ತು ತಾಳಿಕೊಂಡರೆ ನಲಿವು ತಾನೇ ಬರುವದು.

ಬಾದ. — ಬೀರಬಲ್ಲ! ನಿನ್ನ ಮಾತು ದಿಟವಾದ್ದು. ಈ ವೈರಾಗದಿಂದ ಉಪಯೋಗವಿಲ್ಲ; ಬಂದ ಕಷ್ಟಗಳನ್ನು ಧೈರ್ಯದಿಂದ ಸಹಿಸಿ ಅವುಗಳನ್ನು ದೂರಮಾಡಿ ಮುಂದೆ ಸಾಗುವುದೇ ಪುರುಷಾರ್ಥವು.

## ೪ನೆಯ ಅಧ್ಯಾಯ

### ವ್ಯವಹಾರ ಶಿಕ್ಷಣ

ಸಿವಾಜಿ-ಹೈದರಲ್ಲಿಯರಂತೆ ಅಕ್ಬರ ಬಾದಶಹನು ಕಠಾರಿಯ ಗೆಣೆಯನಾಗಿದ್ದನು. ಅವನ ತಂದೆಯು ಎಷ್ಟು ಪ್ರಯತ್ನಪಟ್ಟರೂ ಎಷ್ಟು ಸಾರಿ ದಂಡಿಸಿದರೂ ಎಷ್ಟು ಮಂದಿ ಬಲ್ಲವರನ್ನು ಅವನಿಗೆ ಕಲಿಸಲಿಕ್ಕಿಟ್ಟರೂ

ಅವನು ಕಡೆಯ ವರೆಗೂ ಓದುಬರಹವನ್ನು ಕಲಿಯಲಿಲ್ಲ. ಆದರೂ ಅವನಿಗೆ ವಿದ್ಯೆಯಲ್ಲಿ ಅಕ್ಕರೆಯಿತ್ತು. ಪಂಡಿತರನ್ನು ಮನ್ನಿಸಿ ಅವರಿಗೆ ಆಶ್ರಯ ಕೊಡುತಿದ್ದನು. ಅವರಿಂದ ಉತ್ತಮಗ್ರಂಥಗಳನ್ನು ಓದಿಸಿ ಕೇಳಿ ಹಿಗ್ಗುತಿದ್ದನು. ಗಹನವಾದ ಪ್ರಶ್ನಗಳನ್ನು ಬಲ್ಲವರೊಡನೆ ಚರ್ಚಿಸುತಿದ್ದನು. ಬೇರೆ ಬೇರೆ ಧರ್ಮ(ಮತ)ಗಳಲ್ಲಿ ಹೆಸರಾದ ಪಂಡಿತರನ್ನು ಕರೆಯಿಸಿ, ಅವರವರೊಳಗೆ ವಾದವಿವಾದಗಳನ್ನು ಮಾಡಿಸಿ, ಅವರ ಪ್ರಶ್ನೋತ್ತರಗಳನ್ನು ಮನಸ್ಸುಕೊಟ್ಟು ಕೇಳುತಿದ್ದನು. ದೇವತಾ-ಧರ್ಮಗಳ ರಹಸ್ಯವನ್ನು ಅರಿತುಕೊಳ್ಳಲಿಕ್ಕೆ ಭಗೀರಥಪ್ರಯತ್ನ ಮಾಡುತಿದ್ದನು. ಈ ವಿಷಯದಲ್ಲಿ ಅವನಿಗೆ ಹುಚ್ಚು ಹಿಡಿದಿತ್ತೆಂದು ಹೇಳಿದರೆ ಅತಿಶಯೋಕ್ತಿಯಾಗಲಾರದು. ಅವನ ಮಾತುಕಥೆಯ ಎಣಿಕೆ(ವಿಚಾರ)ಗಳು ಬಲ್ಲವರ ಮಾತುಕಥೆಯ ಎಣಿಕೆಗಳನ್ನು ಹೋಲುತಿದ್ದವು. ಇಂತಹ ಅಕ್ಬರನಿಗೆ ಅಶಿಕ್ಷಿತನೆನ್ನಬೇಕೊ ಸುಶಿಕ್ಷಿತನೆನ್ನಬೇಕೊ?

ಓದುಬರಹ ಬಲ್ಲವರೇ ಸುಶಿಕ್ಷಿತರೆಂಬ ಮೂಢವಿಶ್ವಾಸವು ಪಾಶ್ಚಾತ್ಯರಲ್ಲಿ ನೆಲೆಗೊಂಡು, ಇಂಗ್ರೇಜಿಶಿಕ್ಷಣದೊಡನೆ ಈ ಭರತಭೂಮಿಯಲ್ಲಿ ಹಬ್ಬುತ್ತಿರುವುದೆಂದು ತೋರುತ್ತದೆ. ಆದರೆ ಇದು ತೀರ ತಪ್ಪು ತಿಳಿವಳಿಕೆಯು. ಓದುಬರಹವು ಅರ್ವಾಚೀನಕಾಲದ ಶಿಕ್ಷಣದ ಒಂದು ಸಾಧನವೇ ಹೊರತು, ಶಿಕ್ಷಣವಲ್ಲ. ಪರಮಾತ್ಮನು ಮಾಡಿದ ಸೃಷ್ಟಿಯೇ ಮನುಷ್ಯನು ಓದತಕ್ಕ ಮುಖ್ಯವಾದ ಉದ್ಗ್ರಂಥವು. ನಮ್ಮ ಪೂರ್ವಜರು ಈ ಗ್ರಂಥವನ್ನೇ ಓದಿ ವೇದಶಾಸ್ತ್ರಗಳನ್ನು ರಚಿಸಿದರು. ನಮ್ಮ ಮಹರ್ಷಿಗಳು ತಾವು ಮಾಡಿದ ವೇದದ ಋಕ್ಕುಗಳನ್ನು ಬರೆದರೇ? ವಾಲ್ಮೀಕಿಯು ರಾಮಾಯಣವನ್ನು ಬರೆದನೇ? ವ್ಯಾಸರು ಭಾರತವನ್ನು ಬರೆದರೇ? ಈ ಎಲ್ಲ ಮಹತ್ವದ ಗ್ರಂಥಗಳೂ ಬಾಯಿಂದಲೇ ಶಿಷ್ಯಪರಂಪರೆಯಾಗಿ ಬಂದು, ಎರಡು ಮೂರು ಸಾವಿರ ವರ್ಷಗಳ ಹಿಂದೆ ಬರೆಯಲ್ಪಡಲಿಲ್ಲವೇ? ಓದುಬರಹ ಅರಿಯದ ನಮ್ಮ ಮಹರ್ಷಿಗಳು ಅಶಿಕ್ಷಿತರೇ? ಹಾಗೆ ಎಂದೂ ಹೇಳಕೂಡದು. ಈಗಲಾದರೂ ನಮ್ಮಲ್ಲಿರುವ ಎಷ್ಟೋ ಮಂದಿ ಸ್ತ್ರೀಪುರುಷರು ಓದುಬರಹವನ್ನು ಕಲಿಯದಿದ್ದರೂ ತಾವು ಸುಶಿಕ್ಷಿತರೆಂದು ಮೆರೆಯುವ ಇಂಗ್ರೇಜಿ

ಕಲಿತವರನ್ನು ತಮ್ಮ ಬುದ್ಧಿಸಾಮರ್ಥ್ಯದಿಂದಲೂ ದೀರ್ಘದೃಷ್ಟಿಯಿಂದಲೂ ತಲೆಮೆಟ್ಟಿ ಹಾರುವಂತಿರುತ್ತಾರೆ. ವಸ್ತುಸ್ಥಿತಿಯು ಹೀಗಿದ್ದು ಓದುಬರಹ ಬಲ್ಲವರು, ಅವರಲ್ಲಿ ವಿಶೇಷವಾಗಿ ಇಂಗ್ರೇಜಿ ಕಲಿತವರು ತಾವೇ ಸುಶಿಕ್ಷಿತರೆಂದು ಹೆಮ್ಮೆಗೊಳ್ಳುವುದು ಸೋಜಿಗವಲ್ಲವೇ?

ಈ ಜಗತ್ತಿನಲ್ಲಿ ಆತ್ಮಜೀವಜಡವೆಂಬ ಮೂರು ಪದಾರ್ಥಗಳು ತುಂಬಿರುತ್ತವೆ. ಇವುಗಳ ಮರ್ಮವನ್ನೂ ರಹಸ್ಯವನ್ನೂ ಗುಟ್ಟನ್ನೂ ಇಂಗಿತವನ್ನೂ ಅರಿತುಕೊಳ್ಳಲಿಕ್ಕೆ ಯತ್ನಿಸುವವರೆಲ್ಲರೂ ಸುಶಿಕ್ಷಿತರೇ ಸರಿ. ಈ ಯತ್ನ ಮಾಡುವವರಿಗೆ (೧) ನಿರೀಕ್ಷಣ, (೨) ವಿಚಾರ, (೩) ಅನುಮಾನ, (೪) ಅನುಭವ (೫) ಶಬ್ದ ಎಂಬ ಐದು ಸಾಧನಗಳಿರುತ್ತವೆ. ಈ ಕಡೆಯುದಾದ ಶಬ್ದಸಾಧನಕ್ಕೆ ಓದುಬರಹವೆನ್ನುತ್ತಾರೆ. ಇದರಿಂದ ನಮ್ಮ ಪೂರ್ವಜರ ಆಚಾರವಿಚಾರಗಳನ್ನು ಸುಲಭವಾಗಿ ತಿಳಿದುಕೊಳ್ಳಬಹುದು. ಈ ಸಾಧನದ ಜತೆಯಲ್ಲಿ ಉಳಿದ ನಾಲ್ಕು ಸಾಧನಗಳನ್ನು ಕಲಿಸುವ ಶಿಕ್ಷಣ ಕ್ರಮವೇ ಸರಿಯಾದ ಶಿಕ್ಷಣಪದ್ಧತಿಯು. ಬರಿಯ ಭಾಷಾಜ್ಞಾನಕ್ಕೆ ಪ್ರಾಮುಖ್ಯತೆಯನ್ನು ಕೊಡುವ ಶಿಕ್ಷಣವು (ಇಂಗ್ಲೀಷದ್ದೇ ಆಗಲಿ ಕನ್ನಡದ್ದೇ ಆಗಲಿ) ಸುಶಿಕ್ಷಣಪದ್ಧತಿಯೆನಿಸಲಾರದು. ಇಂತಹ ಶಿಕ್ಷಣದಿಂದ ಕೇಡೇ ಹೊರತು ಒಳಿತಿಲ್ಲ. ಇಂತಹ ಶಿಕ್ಷಣ ಹೊಂದಿದವರು ತಾವು ಸುಶಿಕ್ಷಿತರೆಂದು ಹೊಗಳಿಕೊಂಡರೆ, ಗಂಡಸಿನ ಉಡಿಗೆತೊಡಿಗೆಗಳನ್ನು ಹಾಕಿಕೊಂಡ ಹೆಂಗಸು ತಾನು ಗಂಡಸೆಂದು ಬಡಾಯಿ ಕೊಚ್ಚಿದಂತಾಗಲಿಕ್ಕಿಲ್ಲವೇ? ಮನುಷ್ಯನ ಸುಶಿಕ್ಷತೆಯು ಅವನ ಜ್ಞಾನಾನುಭವವನ್ನು ಅವಲಂಬಿಸುತ್ತದೆಯೇ ಹೊರತು ಅವನ ಐಶ್ವರ್ಯಾಡಂಬರವನ್ನು ಅವಲಂಬಿಸುವುದಿಲ್ಲ.

ಈ ಕಾಲದಲ್ಲಿ ಓದುಬರಹದ ಸಾಧನವನ್ನು ಕಯ್ಕೊಳ್ಳುವವರು ಬಹುಜನರಿದ್ದರೂ ಅಕ್ಬರನ ಕಾಲದಲ್ಲಿ, ಎಂದರೆ ೧೬ನೆಯ ಶತಮಾನದಲ್ಲಿ, ಈ ಸಾಧನವನ್ನುಪಯೋಗಿಸುವವರು ಸ್ವಲ್ಪ ಸಂಖ್ಯಾಕರಾಗಿದ್ದರು. ಅವರಲ್ಲಿ ಅಕ್ಬರನೊಬ್ಬನಾಗಿದ್ದನು. ತನಗೆ ಓದಲಿಕ್ಕೆ ಬಾರದಿದ್ದುದರಿಂದ ಅವನು ಬೇರೆಯವರಿಂದ ಓದಿಸಿಕೊಳ್ಳುತಿದ್ದನು. ಓದುಬರಹ ಬಾರದ ಕೊರತೆಯನ್ನು ಅವನು ಗ್ರಂಥಸಂಗ್ರಹದಿಂದಲೂ ವಿದ್ವಾಂಸರೊಡನೆ ಮಾಡಿದ

ಸಂಭಾಷಣದಿಂದಲೂ ಬಹುಶ್ರುತತ್ವದಿಂದಲೂ ದೂರಮಾಡಿಕೊಂಡನು. ಬೀರಬಲ್ಲನಂತಹ ಅದ್ವಿತೀಯ ಚತುರರಾದ ಪಂಡಿತರನ್ನು ತನ್ನ ಆಶ್ರಯ ದಲ್ಲಿಟ್ಟುಕೊಂಡು, ವ್ಯವಹಾರಜ್ಞಾನವನ್ನು ಸಂಪಾದಿಸಿಕೊಂಡನು. ಬೀರ ಬಲ್ಲನು ಎಷ್ಟುಮಟ್ಟಿಗೆ ಅವನಿಗೆ ವ್ಯವಹಾರ ಶಿಕ್ಷಣವನ್ನು ಕೊಟ್ಟನೆಂಬು ದನ್ನು ಕೆಳಗೆ ಬರೆದಿರುವ ಕಥೆಗಳಿಂದ ತಿಳಿದುಕೊಳ್ಳಬಹುದು.

## ೧. ಅಂಜುಗುಳಿಯಾದ ಎದೆಗಾರ್ತಿಯು

ಒಂದು ಹಗಲು ಬಾದಶಹ ಬೀರಬಲ್ಲರು ಮಾತಾಡುತ್ತ ಕುಳಿತಿರು ವಾಗ, ಆ ಮಾತು ಈ ಮಾತು ಆಗಿ ಹೆಂಗಸರ ಅಂಜುಬುರುಕಿತನದ ಮಾತು ಹೊರಟಿತು.

ಬಾದ. — ಬೀರಬಲ್ಲ ! ಹೆಂಗಸರೆಲ್ಲರೂ ಅಂಜುಬುರುಕಕಿಯಲ್ಲವೇ ? ಅವರು ಸಣ್ಣ ಪುಟ್ಟ ಮಾತಿಗೂ ಹೆದರುತ್ತಾರೆ. ಅವರಲ್ಲಿ ಎದೆಗಾರಿಕೆಯು ಎಳ್ಳಷ್ಟಾದರೂ ಇದ್ದಂತೆ ತೋರುವುದಿಲ್ಲ, ಕತ್ತಲೆಯ ಕೋಣೆಗೆ ಹೋಗ ಲಿಕ್ಕೆ ಹೆದರುತ್ತಾರೆ; ಇಲಿ, ಕಪ್ಪೆ ಜಿರ್ಲೆಗಳಿಗೆ ಬೆದರುತ್ತಾರೆ.

ಬೀರ. — ತಾವು ಹೇಳುವುದು ದಿಟ. ಆದರೆ ಕೆಲವು ಸಂದರ್ಭಗಳಲ್ಲಿ ಅವರು ತೋರಿಸುವ ದಿಟ್ಟತನವನ್ನು ನೋಡಿ, ಮೀಸೆಹೊತ್ತ ಗಂಡಸರು ನಾಚಬಹುದು.

ಬಾದ. — ಅವರದೆಂತಹ ಎದೆಗಾರಿಕೆ ? ಒಬ್ಬರೇ ಮಲಗಲಿಕ್ಕೆ ಅಂಜು ತ್ತಾರೆ; ಒಬ್ಬರೇ ಹೂರಗೆ ಹೋಗಲಿಕ್ಕೆ ಹೆದರುತ್ತಾರೆ.

ಬೀರ. — ಮಹಾರಾಜ! ಹೋದ ವರುಷ ಮಳೆಗಾಲದೊಳಗೆ ಒಂದು ಕಗ್ಗತ್ತಲೆಯ ನಟ್ಟಿರುಳಲ್ಲಿ ಒಬ್ಬ ಪಾಣ್ಬೆಯು ಯಮುನಾನದಿಯನ್ನು ದಾಟಿ ಒಂಟಿಗಳಾಗಿ ತನ್ನ ಮಿಂಡನನ್ನು ಹುಡುಕುತ್ತ ಹೋಗುತ್ತಿದ್ದುದನ್ನು ಮರೆತಿ ರೇನು? ಆಗ ತಾವೇ 'ಇದೇನು ಧೈರ್ಯ' ಎಂದು ಸೋಜಿಗಪಡಲಿಲ್ಲವೇ?

ಬಾದ. — ಅಹುದು, ನೆನಪಿಗೆ ಬಂದಿತು. ಅದು ಹೆಚ್ಚಿನ ಎದೆಗಾರಿ ಕೆಯೇ ಸರಿ. ಆಕೆಯ ಧೈರ್ಯಸಾಹಸಗಳು ಬಹಳ ಆಶ್ಚರ್ಯಕರ ವಾದವು!!!

ಬೀರ. — ಇಂತಹ ಹೆಂಗಸರು ಎಷ್ಟೋ ಜನರಿರುತ್ತಾರೆ. ಆದ್ದರಿಂದ ಒಬ್ಬ ಸಂಸ್ಕೃತಕವಿಯು ಹೇಳುವುದೇನಂದರೆ "ಸ್ತ್ರಿಯಶ್ಚರಿತ್ರಮ್ ಪುರುಷಸ್ಯ ಭಾಗ್ಯಂ ದೇವೋ ನ ಜಾನಾತಿ ಕುತೋ ಮನುಷ್ಯಃ" ಹೆಂಗಸರ ಚರಿತ್ರೆಯೂ ಗಂಡಸರ ಭಾಗ್ಯವೂ ದೇವರಿಗೆ ಕೂಡ ಗೊತ್ತಾಗದಿರುವಲ್ಲಿ ಮನುಷ್ಯರಿಗೆ ಹೇಗೆ ತಿಳಿದಾವು?

ಬಾದ. — ನೀನು ಹೇಳುವುದು ನಿಜ. ಬಿಕ್ಕಟ್ಟಿನ ಸಂದರ್ಭದಲ್ಲಿ ಅವರು ಬೇಕಾದಂತಹ ಧೈರ್ಯಸಾಹಸಕೃತ್ಯಗಳನ್ನು ಮಾಡುವರು. ಇಂತಹ ಸಾಹಸಿಗಳು ಹೆದರಬಡಕರೇ?

ಬೀರ. — ಮಹಾರಾಜ! ತಾವು ಹೋದವರುಷ ನೋಡಿದ ಹೆಂಗಸು ಒಂದು ಜೊಂಡಿಗಕ್ಕೆ ಬೆದರಿಬೀಳಬಹುದು. ಆದ್ದರಿಂದ ತಮಗೆ ಬೇಕಾದ ಅಂಜುಗುಳಿಯಾದ ಎದೆಗಾರ್ತಿಯು ಆಕೆಯೇ ಸರಿ.

ಬಾದಶಹನು ಬೀರಬಲ್ಲನ ಮಾತು ಕೇಳಿ ಸಂತುಷ್ಟನಾದನು.

## ೨. ಅರವತ್ತು ದಿವಸಗಳ ತಿಂಗಳು

ಅಕ್ಬರ ಬಾದಶಹನಿಗೆ ಒಂದರ ಹಿಂದೊಂದು ಗೆಲವು ಬರತೊಡಗಿದ್ದರಿಂದ ಅವನು ಉಬ್ಬಿದನು; ತಾನು ಬೇಕಾದ್ದನ್ನು ಮಾಡಬಹುದೆಂಬ ಹೆಮ್ಮೆಯು ಅವನಲ್ಲಿ ಹುಟ್ಟಿತು. ಆಗ—

ಬಾದ. — ಬೀರಬಲ್ಲ! ಈಗ ಮೂವತ್ತು ದಿವಸಗಳ ತಿಂಗಳಿರುತ್ತದೆ. ಇದು ಬಹಳ ಸಣ್ಣದು. ಆದ್ದರಿಂದ ಅರವತ್ತು ದಿವಸಗಳ ತಿಂಗಳನ್ನು ಮಾಡಬೇಕೆಂದು ಎಣಿಸಿದ್ದೇನೆ.

ಬೀರ. — ಮಹಾರಾಜ! ಹಾಗೆ ಮಾಡುವುದರಿಂದ ಲೇಸೇನು?

ಬಾದ. — ವರ್ಷಕ್ಕೆ ಆರು ತಿಂಗಳುಗಳಾಗುವುವು. ಲೆಕ್ಕ ಮಾಡಲಿಕ್ಕೆ ಸಸಾರವಾಗುವುದು.

ಬೀರ. — ಮಹಾರಾಜ, ಹನ್ನೆರಡು ತಿಂಗಳನ್ನು ಹಿಡಿದು ಮಾಡಿದ ಲೆಕ್ಕದಷ್ಟೇ ಆರು ತಿಂಗಳನ್ನು ಹಿಡಿದು ಮಾಡಿದ ಲೆಕ್ಕವು ಸುಲಭವಾಗಿರು

ವುದು. ಇದಲ್ಲದೆ ಈಗಿನ ತಿಂಗಳು ಸೃಷ್ಟಿಯ ನಿಯಮವನ್ನು ಅನುಸರಿಸು ತ್ತದೆ. ಏಕೆಂದರೆ ಪ್ರತಿಯೊಂದು ತಿಂಗಳಲ್ಲಿಯೂ ಹದಿನೈದು ದಿವಸ ಆರಂಭದಲ್ಲಿ ಬೆಳದಿಂಗಳೂ ಹದಿನೈದು ದಿವಸ ಕತ್ತಲೆಯೂ ಇರುವುದು. ಅಮಾವಾಸ್ಯೆಯು ತಿಂಗಳಿನ ಕಡೆಯ ದಿನವಾಗುವುದು. ತಮ್ಮ ತಿಂಗಳುಗಳ ಕೊನೆಮೊದಲು ಗೊತ್ತಾಗುವ ಬಗೆ ಹೇಗೆ?

ಬಾದ.—ನಮ್ಮ ಹೊಸ ತಿಂಗಳ ಆರಂಭದಿವಸವು ಶುದ್ಧಪ್ರತಿಪದೆಯ ದಿವಸವೇ. ಮುಂದಿನದೊಂದು ಶುದ್ಧಪ್ರತಿಪದೆಯನ್ನು ಮಾತ್ರ ಬಿಡಬೇಕಾಗುವುದು. ಅದರ ಮುಂದಿನ ಶುದ್ಧಪ್ರತಿಪದೆಯೇ ಎರಡನೆಯ ತಿಂಗಳ ಆರಂಭದ ದಿವಸವಾಗುವುದು. ನಡುವಿನ ಶುದ್ಧಪ್ರತಿಪದೆಯನ್ನು ಬಿಡಬೇಕಾಗುತ್ತದೆಂಬುದೊಂದೇ ತೊಂದರೆ ಇರುತ್ತದೆ.

ಬೀರ.—ಮಹಾರಾಜ! ಆ ತೊಂದರೆಯನ್ನು ತಾವು ದೂರಮಾಡಿದರೆ ತಮ್ಮ ತಿಂಗಳು ಸರಿಯಾಗಬಹುದು.

ಬಾದ.—ಅದನ್ನು ಹೇಗೆ ದೂರಮಾಡಬೇಕು?

ಬೀರ.—ಮೂವತ್ತು ದಿವಸಗಳ ಶುಕ್ಲಪಕ್ಷವನ್ನೂ ಮೂವತ್ತು ದಿವಸಗಳ ಕೃಷ್ಣಪಕ್ಷವನ್ನೂ ತಾವು ಮಾಡಲಾಪಿರಾದರೆ ತಮ್ಮ ತಿಂಗಳು ಸರಿಯಾಗುವುದು. ಇಲ್ಲವಾದರೆ ಆಗಲಾರದು.

ಬಾದ.—ಮೂವತ್ತು ದಿವಸಗಳ ವರೆಗೆ ಬೆಳದಿಂಗಳಿರುವಂತೆ ಮಾಡುವ ಬಗೆ ಹೇಗೆ?

ಬೀರ.—ಖುದಾವಂದ್! ಅದು ಅಸಂಭವವೆಂತಲೇ ಸೃಷ್ಟಿಯ ನಿಯಮಗಳನ್ನು ಮನುಷ್ಯನು ಅನುಸರಿಸಲಿಕ್ಕೇ ಬೇಕೆಂದು ಹೇಳಿದೆನು. ಚಂದ್ರನ ಗತಿಯಲ್ಲಿ ಹೆಚ್ಚುಕಡಮೆ ಮಾಡುವುದಕ್ಕೆ ದೇವರ ಹೊರತು ಬೇರೆಯವರಿಗೆ ಸಾಮರ್ಥ್ಯವಿಲ್ಲ. ಆದ್ದರಿಂದ ಮನುಷ್ಯನು ಎಷ್ಟು ದೊಡ್ಡವನಾದರೂ ಎಷ್ಟು ಬಲಾಢ್ಯನಾದರೂ ದೇವರ ನಿಯಮಗಳನ್ನು ಅನುಸರಿಸಲಿಕ್ಕೇ ಬೇಕು. ಆ ನಿಯಮಗಳಿಗೆ ವಿರುದ್ಧವಾಗಿ ನಡೆಯಹೋದರೆ ಅವನ ಬಯಕೆಯು ಕಯ್ಗೂಡಲಾರದಿರುವುದಷ್ಟೇ ಅಲ್ಲ, ಅವನಿಗೆ ಹಾನಿಯೂ ತಟ್ಟುವದು.

ಬಾದ.—ನೀನು ಹೇಳುವುದೆಲ್ಲ ನಿಜವಾದ್ದು. ಈ ಹೊಸ ತಿಂಗಳ ವಿಚಾರವನ್ನೇ ಬಿಟ್ಟುಬಿಡುವುದು ಸುಸೂತ್ರವೆಂದು ತೋರುತ್ತದೆ. ನೀನು ಹೇಳಿದಂತೆ ಚಂದ್ರಮನ ಗತಿಯಲ್ಲಿ ಹೆಚ್ಚು ಕಡಮೆಯಾಗಲಾರದು. ಈಗಿದ್ದ ತಿಂಗಳುಗಳೇ ತಕ್ಕವುಗಳಾಗಿವೆ. ಬೀರಬಲ್ಲ! ನೀನು ನನ್ನ ಬಯಕೆಯಂತೆ ಮಾತಾಡದೆ, ನಾನು ಹಿಡಿದ ಅಡ್ಡಹಾದಿಯಿಂದ ನನ್ನನ್ನು ತಿರುಗಿಸಿದ ಬಗ್ಗೆ ನಾನು ನಿನಗೆ ಕೃತಜ್ಞನಾಗಿದ್ದೇನೆ. ಮುಂದೆಯೂ ಹೀಗೆ ಸರಿಯಾದ್ದನ್ನು ಹೇಳು, ನನ್ನ ತಪ್ಪನ್ನು ತಿದ್ದು, ನನ್ನನ್ನು ಅಡ್ಡದಾರಿ ಹಿಡಿಯಗೊಡಬೇಡ, ಈ ನನ್ನ ಪ್ರಾರ್ಥನೆಯನ್ನು ಮರೆಯಬೇಡ. ಏಕೆಂದರೆ ಉಳಿದವರೆಲ್ಲರೂ ನನ್ನ ಒಲುಮೆಯನ್ನು ದೊರಕಿಸಿಕೊಳ್ಳಲಿಕ್ಕೆ ನನ್ನಂತೆಯೇ ಹೇಳುತ್ತಾರಲ್ಲದೆ ನಿಜವನ್ನಾಡುವುದಿಲ್ಲ. "ನಕ್ಕು ಹೇಳಿದವ ಕೆಡಕು ಹೇಳಿದನು, ಬೈದು ಹೇಳಿದವನು ಬುದ್ಧಿ ಹೇಳಿದನು" ಎಂಬ ನಾಣ್ಣುಡಿಯನ್ನು ನಾನು ತುಂಬಾ ನಂಬುತ್ತೇನೆ; ಆದ್ದರಿಂದ ದಿಟವಾದ್ದನ್ನೇ ಹೇಳಬೇಕೆಂದು ಬೇಡಿಕೊಳ್ಳುತ್ತೇನೆ.

## ೩. ಮೂರು ತರದ ಮೆಯ್ಗಳ್ಳರು

ಒಂದು ದಿವಸ ಅಕ್ಬರ ಬೀರಬಲ್ಲರು ವೇಷ ಬದಲಾಯಿಸಿಕೊಂಡು ಊರಲ್ಲಿ ತಿರುಗಾಡುತ್ತಿರುವಾಗ ಎಷ್ಟೋ ಮಂದಿ ಬಡಬಗ್ಗರೂ, ಕುರುಡರೂ, ಕುಂಟರೂ, ಬೇನೆಯುವರೂ (ರೋಗಿಗಳೂ), ಕಯ್ಯಲಾಗದವರೂ, ಮುದು ಕತದಕರೂ, ಅರಿವೆಯೂ ಕೂಳೂ ಇಲ್ಲದೆ ಬೀದಿಯಲ್ಲಿ ಅಲ್ಲಲ್ಲಿ ಕುಳಿತು ನಿಂತು ಮಲಗಿಕೊಂಡು ಓಣಿಗುಂಟ ಓಡಾಡುವವರನ್ನೂ ಕೊಡಿರೆಂದು ಅಂಗ ಲಾಚಿ ಬೇಡುವವರನ್ನು ಕಂಡು ಮನದಲ್ಲಿ ಮರುಗಿದರು. ಬಾದಶಹನ ಎದೆ ಯಲ್ಲಿ ಕನಿಕರ ಹುಟ್ಟಿ, ಒಂದು ಅನಾಥಾಲಯವನ್ನು ಇಡಬೇಕೆಂಬ ಎಣಿ ಕೆಯು ಅವನಲ್ಲಿ ತೋರಿತು.

ಬಾದ.—ಬೀರಬಲ್ಲ! ಈ ಜನರ ದೀನಾವಸ್ಥೆಯನ್ನು ನೋಡಿ ನನ್ನ ಮನಸ್ಸು ಕರಗಿ ನೀರಾಗುತ್ತದೆ. ಇವರನ್ನು ಕಾಪಾಡಲಿಕ್ಕೆ ಉಪಾಯವೇನು?

ಬೀರ.—ಮಹಾರಾಜ! ಅನಾಥರಾದ ಪ್ರಜೆಗಳನ್ನು ಪೊರೆಯುವುದು ಸಾರ್ವಭೌಮರ ಕರ್ತವ್ಯವಾಗಿರುತ್ತದೆ. ಆದ್ದರಿಂದ ಒಂದು ಅನಾಥಾಲಯ ವನ್ನು ತಾವು ಇಟ್ಟರೆ ಒಳ್ಳೆಯದಾಗುವುದು.

**ಬಾದ.**—ಅದಕ್ಕೆ ಎಷ್ಟು ಜನರು ಬರಬಹುದು? ಎಷ್ಟು ವೆಚ್ಚ ತಗಲ ಬಹುದು?

**ಬೀರ.**—ತಾವು ಅನಾಥಾಲಯುವನ್ನಿಟ್ಟರೆ, ತಮ್ಮ ಹರವಾದ ರಾಜ್ಯದಲ್ಲಿ ಗತಿಯಿಲ್ಲದವರೆಲ್ಲ ಬರಬಹುದು. ಅವರ ಸಂಖ್ಯೆ ಇಷ್ಟೇ ಎಂದು ಈಗಲೇ ಹೇಳಲಿಕ್ಕಾಗುವುದಿಲ್ಲ. ಈಗಿನ ಅಗ್ಗಳತೆಮಾನದಿಂದ ಒಬ್ಬನಿಗೆ ದಿನಕ್ಕೆ ಎರಡು ಆಣೆಯಂತೆ ಖರ್ಚು ಬರಬಹುದು.

**ಬಾದ.**—ಇಷ್ಟು ತುಸು ಖರ್ಚು ಸಾಕಾಗಬಹುದೇ? ಅನಾಥರ ಸಂಖ್ಯೆಯನ್ನು ಗೊತ್ತುಮಾಡುವುದು ಹೇಗೆ? ಮೈಯ್ಗಳ್ಳರು ತಾವೂ ಅನಾಥರೆಂದು ಬಂದು ಹೊಟ್ಟೆ ಹೊರಕೊಳ್ಳಬಹುದಲ್ಲವೇ?

**ಬೀರ.**—ಈಗ ಅಗ್ಗಳತೆಯು ಕಾಲವಾದ್ದರಿಂದ ೨ ಆಣೆ ಸಾಕಾಗ ಬಹುದು. ಆದರೆ ಸೋಮಾರಿಗಳೂ ಮೈಯ್ಗಳ್ಳರೂ ಬಂದು ಸೇರದಂತೆ ಮಾಡಲಿಕ್ಕೆ ಹಂಚಿಕೆಯನ್ನು ಹುಡುಕಿ ತೆಗೆಯಲು ಬೇಕು. ತಾವು ಅನಾಥಾಲಯುವನ್ನು ಇಟ್ಟಿರುತ್ತೇವೆಂತಲೂ ನಿಜವಾಗಿ ಹೊಟ್ಟೆ ಹೊರಕೊಳ್ಳಲಾರದಂತಹರು ಬಂದು ಅಲ್ಲಿರಬಹುದೆಂತಲೂ ಜಾಹಿರಾತನ್ನು ಕೊಡಬಹುದು.

**ಬಾದ.**—ಬೀರಬಲ್ಲ! ನೀನೇ ಈ ಜಾಹಿರಾತನ್ನು ಹೊರಡಿಸು ಮತ್ತು ಅನಾಥಾಲಯುದ ಮೇಲ್ವಿಚಾರಣೆಯನ್ನು ಮಾಡಿ ಮೈಯ್ಗಳ್ಳರು ಬಂದು ಅದರಲ್ಲಿ ಸೇರದಂತೆ ಏರ್ಪಾಡು ಮಾಡು. ಅದಕ್ಕೆ ಕಟ್ಟಡವನ್ನು ಕಟ್ಟಿಸಲಿಕ್ಕೆ ಬೇಕಾದಷ್ಟು ಹಣವನ್ನು ತೆಗೆದುಕೊ.

ಬಾದಶಹನ ಅಪ್ಪಣೆಯು ಮೇರೆಗೆ ಬೀರಬಲ್ಲನು ಅನಾಥಾಲಯುದ ಜಾಹಿರಾತುಗಳನ್ನು ಬರಿಸಿ ಎಲ್ಲ ಸುಭೆಗಳಿಗೂ ಕಳುಹಿಸಿ, ಅದರ ಉದ್ದೇಶವನ್ನು ಎಲ್ಲರಿಗೂ ತಿಳಿಸಬೇಕೆಂದು ಕಟ್ಟುಮಾಡಿದನು. ಎಲ್ಲ ಕಡೆಯಿಂದ ಜನರು ಬರತೊಡಗಿದರು. ಬೀರಬಲ್ಲನು ಊರಹೊರಗೆ ಒಂದು ಬೈಲಿನಲ್ಲಿ ಒಂದು ದೊಡ್ಡ ಹುಲ್ಲುಗುಡಿಸಲು ಹಾಕಿಸಿ, ಅದರೊಳಗೆ ಅವರಿಗೆ ಇರಹೇಳಿದನು. ಅವರ ಊಟವುಪಚಾರದ ಬಗ್ಗೆ ತಕ್ಕ ಅಧಿಕಾರಿಗಳನ್ನು ನೇಮಿಸಿದನು. ೨।೩ ತಿಂಗಳಲ್ಲಿ ಸಾವಿರಾರು ಜನರು ಕೂಡಿದರು. ಅವರಲ್ಲಿ ಎಷ್ಟೋ ಜನರು ಮೋಸಗಾರರೂ ಮೈಯ್ಗಳ್ಳರೂ ಸೋಮಾರಿಗಳೂ ಇದ್ದರು.

ಇಂತಹರನ್ನು ಅನಾಥಾಲಯದಿಂದ ಹೊರಗೆ ಹೊರಡಿಸುವ ಉದ್ದೇಶದಿಂದ ಬೀರಬಲ್ಲನು ಒಂದು ದಿನ ನಡುಹಗಲು ಅವರಿದ್ದ ಗುಡಿಸಲಿಗೆ ಬೆಂಕಿ ಹಚ್ಚಿಸಿ, ಅದರೊಳಗಿದ್ದ ಎಲ್ಲ ಜನರಿಗೆ—ನೀವು ಇಲ್ಲಿಂದ ೨ ಹರದಾರಿಯ ಮೇಲಿರುವ ಕಟ್ಟಡಕ್ಕೆ ಬೇಗನೆ ಹೋಗಿರಿ—ಎಂದು ಅಪ್ಪಣೆಮಾಡಿದನು. ಸೋಮಾರಿ ಮೈಗ್ಗಳ್ಳ ಮುಂತಾದವರು ತಂತಮ್ಮ ಸಾಮಾನುಗಳನ್ನು ತೆಗೆದುಕೊಂಡು ಆ ದೂರದ ಕಟ್ಟಡಕ್ಕೆ ಓಡಿಹೋದರು. ಪೊರೆಯಲಿಕ್ಕೆ ತಕ್ಕವರಾದ ಕಯ್ಯಲಾಗದ ಜನರೆಲ್ಲ ಅಷ್ಟು ದೂರ ಹೋಗಲಾರದೆ ನೆರೆಯಲ್ಲಿದ್ದ ಗಿಡಗಳ ಬುಡದಲ್ಲಿ ಕುಳಿತರು. ಆಗ ಬೀರಬಲ್ಲನು ಬಾದಶಹನನ್ನು ಕರೆಯಿಸಿ ದಿಟವಾಗಿ ಕಯ್ಯಲಾಗದವರನ್ನೂ ದೂರ ಓಡಿ ಹೋದ ಮೈಗ್ಗಳ್ಳರನ್ನೂ ತೋರಿಸಿ, ದುಡಿಸಿಕೊಳ್ಳದೆ ಈ ಮೋಸಗಾರರಿಗೆ ಅನ್ನ ಹಾಕುವುದು ಕೇಡೆಂತಲೂ ಉಳಿದ ದುಡಿಯಲಿಕ್ಕಾಗದವರನ್ನು ಸಲಹುವುದು ಕರ್ತವ್ಯವೆಂತಲೂ ಬಾದಶಹನಿಗೆ ಅರಿಕೆಮಾಡಿದನು. ಬಾದಶಹನು ಅವನ ಮಾತಿಗೆ ಒಪ್ಪಿಕೊಂಡು, ಮೈಗ್ಗಳ್ಳರನ್ನು ಹುಡುಕಿ ತೆಗೆಯಲಿಕ್ಕೆ ಬೀರಬಲ್ಲನು ಮಾಡಿದ ಹಂಚಿಕೆಯನ್ನು ಮತ್ತೆ ಮತ್ತೆ ಹೊಗಳಿ, ಅವನಿಗೆ ಬಹುಮಾನ ಕೊಟ್ಟನು. ಮುಂದೆ ಮೈಗ್ಗಳ್ಳರು ಹೆದರಿ ಅನಾಥಾಲಯಕ್ಕೆ ಬಾರದಂತಾದರು.

## ೪. ಅಳತೆಗೆಟ್ಟ ಚಟ(ವ್ಯಸನ)ಗಳು

ಒಂದು ದಿವಸ ಬಾದಶಹ ಬೀರಬಲ್ಲರು ಪ್ರಚ್ಛನ್ನವೇಷಧಾರಿಗಳಾಗಿ ನಗರದಲ್ಲಿ ತಿರುಗಾಡುತ್ತಿರುವಾಗ ಒಬ್ಬ ನಡುಹರೆಯದ ತಿರುಕಿಯನ್ನು ಕಂಡರು. ಆಕೆಯ ಹತ್ತರಕ್ಕೆ ಹೋದರೆ ಕೆಟ್ಟ ವಾಸನೆಯು ಬರುತಿತ್ತು. ಆಕೆಯು ಬಸುರಿಯಾಗಿದ್ದುದನ್ನು ನೋಡಿ ಬಾದಶಹನಿಗೆ ಬಹಳ ಆಶ್ಚರ್ಯವಾಯಿತು.

ಬಾದ.—ಬೀರಬಲ್ಲ! ಇಂತಹ ಹೇಸಿಯನ್ನು ಹೋಗಿ ಬಸುರು ಮಾಡಿದವರು ಯಾರಿರಬಹುದು?

ಬೀರ.—ಮಹಾರಾಜ! ವ್ಯಸನವು ಹೆಚ್ಚಾದರೆ ಮನುಷ್ಯನು ನಾಚಿಕೆಯನ್ನು ಬಿಡುತ್ತಾನೆ. ಅವನಿಗೆ ಒಳಿತುಕೇಡುಗಳ ಅರಿವೇ ಉಳಿಯುವುದಿಲ್ಲ.

ಅವನು ತನ್ನ ಚಟವನ್ನು ಪೂರೈಸಿಕೊಳ್ಳಲಿಕ್ಕೆ ಬೇಕಾದ್ದನ್ನೆಲ್ಲ ಮಾಡಬಹುದು. ಅವನಿಗೆ ಹೇಸಿಗೆಯಿಲ್ಲ, ಎಗ್ಗಿಲ್ಲ, ಜನರೇನೆಂದಾರೆಂಬ ಹೆದರಿಕೆಯಿಲ್ಲ. ಆದ್ದರಿಂದ "ಕಾಮಾತುರಾಣಾಮ್ ನ ಭಯಮ್ ನ ಲಜ್ಜಾ" ಎಂಬ ಸಕ್ಕದ ನಾಣ್ಣುಡಿಯು ಬಳಿಕೆಯಲ್ಲಿ ಬಂದಿದೆ.

ಬಾದ.—ಬೀರಬಲ್ಲ! ಇದು ಅತ್ಯಾಶ್ಚರ್ಯವಾಗಿದೆ. ಈಕೆಯ ಬಳಿಗೆ ಹೋದವನನ್ನು ಗೊತ್ತುಹಚ್ಚಬೇಕು. ಈಕೆಯನ್ನೇ ಕೇಳು ನೋಡೋಣ.

ಬೀರ.—ಖುದಾವಂದ್! ಈಕೆಗೆ ಗೊತ್ತಿರಲಿಕ್ಕಿಲ್ಲ, ಆದರೂ ಕೇಳಿ ನೋಡುವೆನು.

ಬಾದಶಹ ಬೀರಬಲ್ಲರಿಬ್ಬರೂ ತಿರುಕಿಯ ಬಳಿಗೆ ಹೋಗಿ—

ಬೀರ.—(ತಿರುಕಿಯೊಡನೆ) ಏನಮ್ಮಾ! ನೀನು ೬।೭ ತಿಂಗಳು ಬಸುರಿದ್ದಂತೆ ತೋರುತ್ತದೆ. ಇಕೊ ಇದೊಂದು ವರಹವನ್ನು ತೆಗೆದುಕೊಂಡು ಮುರಿಸಿ ತಿಂಡಿಯನ್ನು ಕೊಂಡುಕೊ.

ತಿರುಕಿ—(ತಾನು ಎಂದೂ ಕಾಣದ ಚಿನ್ನದ ವರಹವನ್ನು ನೋಡಿ) ನನ್ನ ಹಡೆದಪ್ಪಾ! ದೇವರು ನಿನಗೆ ಲೇಸು ಮಾಡಲಿ, ನಿನ್ನ ಮಕ್ಕಳುಮರಿಗಳ ಆಯುಸ್ಸು ಬೆಳೆಯಲಿ.

ಬೀರ.—ಏನಮ್ಮಾ! ನಿನಗೆ ಗಂಡನಿದ್ದಾನೇನು? ಇದ್ದರೆ ಅವನೇಕೆ ದುಡಿದು ನಿನ್ನ ಹೊಟ್ಟೆಗೆ ಹಾಕುವುದಿಲ್ಲ?

ತಿರುಕಿ—ನಾನು ಸಣ್ಣ ಹುಡುಗಿಯಾಗಿರುವಾಗಲೇ ನನ್ನ ಗಂಡ ಸತ್ತನು. ಮುಂದೆ ಹರೆಯಕ್ಕೆ ಬಂದ ಬಳಿಕ ಮತ್ತೊಬ್ಬನು ಉಡಿಕೆ ಮಾಡಿಕೊಂಡು ಒಂದು ವರ್ಷದಲ್ಲೇ ಸತ್ತುಹೋದನು. ಅವನ ಅಣ್ಣತಮ್ಮಂದಿರು ನನ್ನನ್ನು ಮನೆಬಿಡಿಸಿ ಹೊರಗೆ ಹಾಕಿದರು. ನನಗೆ ಈಗ ಯಾರೂ ಇಲ್ಲ. ಆದ್ದರಿಂದ ಬಿಕ್ಕೆಬೇಡಿ ಹೊಟ್ಟೆ ಹೊರೆಕೊಳ್ಳುತ್ತೇನೆ.

ಬೀರ.—ಹಾಗಾದರೆ ನಿನ್ನನ್ನು ಯಾರು ಬಸುರು ಮಾಡಿದರು? ಅವನು ನಿನ್ನ ಹೊಟ್ಟೆಗೆ ಏಕೆ ಹಾಕುವುದಿಲ್ಲ? ನಿನ್ನನ್ನು ಸಲಹುವ ಕೆಲಸವು ಅವನದು.

ತಿರುಕಿ—ನನ್ನನ್ನು ಹೊಟ್ಟೇಲಿ ಮಾಡಿದವನ ಮೋಸ ಹುರಿಯಲಿ. ಆ ಚಂಡಾಳ ನನಗೆ ಭಿಕ್ಷವನ್ನು ಕೊಡುತ್ತೇನೆಂದು ಒಳಗೆ ಕರೆದು ಜುಲುಮೆಯಿಂದ ನನ್ನನ್ನು ಕೆಡಿಸಿ, ಈ ಹೊಟ್ಟೆ ಉಬ್ಬಿಸಿಟ್ಟನು. ಏನು ಮಾಡಲಿ! ಶಿವನೇ ಅವನನ್ನು ದಂಡಿಸಬೇಕು!!

ಬೀರ.—ಅವನು ಯಾರೆಂಬುದನ್ನು ಹೇಳಬಲ್ಲೆಯಾ?

ತಿರುಕಿ—ಅವನ ಹೆಸರುಗಿಸರು ಗೊತ್ತಿಲ್ಲ. ನೋಡಾಕ ಪಾಡದಾನು. ಹರೆಯದವ. ಅಂಚಿನ ವಲ್ಲಿ ಉಡತಾನು. ಬಾಯಾಗ ತಂಬಾಕ ತುಂಬಿರತತಿ.

ಬೀರ.—ಒಳ್ಳೆಯದು, ನೀನು ನಾಳೆ ಕೊತವಾಲನ ಕಡೆಗೆ ಹೋಗಿ ಫಿರ್ಯಾದು ಮಾಡು. ನಿನ್ನನ್ನು ಕೆಡಿಸಿದವನನ್ನು ಕರಿಸಿ, ಅವನಿಂದ ನಿನ್ನ ಹೊಟ್ಟೆಗೆ ಹಣ ಕೊಡಿಸುವೆವು.

ತಿರುಕಿ—ನಾವೊಲ್ಲರೆಪ್ಪಾ. ಫಿರ್ಯಾದಿಗಿರ್ಯಾದಿ ನನಗೆ ಬೇಡ. ಅಲ್ಲಿ ಹೋದ ಕೂಡಲೆ ಜವಾನಮೂಳಗಳು ಒಂದು ಮಲೆಹಿಡಿಯಾಕ ಬರತತಿ. ಒಂದು ಸೀರಿಕಳೆತತಿ. ಅವರ ಕಾಟ ನಾ ಎಲ್ಲಿ ತಾಳಲಿ. ನನ್ನನ್ನು ಹೋದಾವ ಚೆಲುವನಾರ ಇದ್ದ. ಈ ದಾಂಡಿಗ ಜವಾನಪಿಸಾಳಿಗಳ ಕಯ್ಯಲ್ಲಿ ಸಿಕ್ಕು ನಾನು ಒದ್ದಾಡಲಾರನಪ್ಪಾ. ನಾ ತಿರಕೊಂಡ ಹೊಟ್ಟೆತುಂಬಿಕೊತೇನು. ನನಗೆ ಈ ಜವಾನರೂ ಬೇಡ. ಹೊಟ್ಟೆಗೆ ಕುಡಿಸುವುದೂ ಬೇಡ. ನನಗಿದೇ ಆರಾಮು.

ಆ ತಿರುಕಿಯು ಬೀರಬಲ್ಲನ ಮಾತನ್ನು ಅಲ್ಲಗಳೆದ ಕೂಡಲೆ ಅವನೂ ಬಾದಶಹನೂ ಅಲ್ಲಿಂದ ಮುಂದೆ ಹೊರಟರು. ತುಸು ದೂರಹೋದ ಕೂಡಲೆ ಒಬ್ಬ ಮೇಲುಡುಪಿನ ಯುವಕನು ಅವರಿಗೆ ಕಾಣಿಸಿದನು. ಬೀರಬಲ್ಲನು ಅವನನ್ನು ನಿರೀಕ್ಷಿಸ ತೊಡಗಿದನು. ಅವನು ಎಡಗಯ್ಯಲ್ಲಿ ಒಂದು ಚಂಚಿಯನ್ನೂ† ಸುಣ್ಣದ ಡಬ್ಬಿಯನ್ನೂ ಹಿಡಿದು ಬಲಹೆಬ್ಬಟ್ಟನ್ನು ಆ ಡಬ್ಬಿಯಲ್ಲಿ ಹಾಕಿ ಸುಣ್ಣವನ್ನು ಕೆದರುತಿದ್ದನು. ಸುಣ್ಣವು ಒಣಗಿದ್ದರಿಂದ ಅದು ಬರಲಿಲ್ಲ. ಆದ್ದರಿಂದ ಎಡಬಲಕ್ಕೆ ನೋಡುತ್ತಾ ಹೋಗುತಿದ್ದನು. ಅಷ್ಟ

† ಎಲೆ ಅಡಿಕೆ ಕಾಚು ಮುಂತಾದವುಗಳನ್ನು ಹಾಕಿ ಕಿಸೆಯಲ್ಲಿಟ್ಟುಕೊಳ್ಳುವ ಚೀಲ.

ರಲ್ಲಿ ಒಂದು ಬಜ್ಜಲುಹರಿಯು ಅವನಿಗೆ ಕಾಣಿಸಿತು. ಒಡನೆಯೇ ಅವನು ಅಲ್ಲಿಗೆ ಹೋಗಿ ಆ ಹರಿಯ ತೇವಿನಿಂದ ಸುಣ್ಣವನ್ನು ತೊಯಿಸಿಕೊಂಡು, ಎಲೆಗೆ ಸುಣ್ಣಹಚ್ಚಿ ಎಲೆತಂಬಾಕುಗಳನ್ನು ಬಾಯಲ್ಲಿ ಹಾಕಿಕೊಂಡನು. ಅವನನ್ನು ಎವೆಯಿಕ್ಕದೆ ನಿರೀಕ್ಷಿಸುತಿದ್ದ—

ಬೀರ.—ಮಹಾರಾಜ! ಇವನೇ ಆ ತಿರುಕಿಯನ್ನು ಹೋದವನು.

ಬಾದ.—ಅದು ಹೇಗೆ? ನಿನಗೆ ಏತರಿಂದ ತಿಳಿಯಿತು?

ಬೀರ.—ಮಹಾರಾಜ! ತಾವು ಅವನು ಮಾಡಿದ್ದನ್ನು ಲಕ್ಷಕೊಟ್ಟು ನೋಡಲಿಲ್ಲೆಂದು ತೋರುತ್ತದೆ. ಅವನು ಚಂಚಿ ಸುಣ್ಣದ ಡಬ್ಬಿಗಳನ್ನೂ ವೀಳೆಯದೆಲೆಯನ್ನೂ ಕಯ್ಯಲ್ಲಿ ಹಿಡಿದುದನ್ನು ಕಂಡಿರಷ್ಟೇ. ಅವನಿಗೆ ತಂಬಾಕು ತಿನ್ನುವ ಚಟವಾಗಿತ್ತೆಂದು ತೋರುತ್ತದೆ. ಸುಣ್ಣವು ಒಣಗಿದ್ದ ರಿಂದ ಅದನ್ನು ಹಸಿಮಾಡಲಿಕ್ಕೆ ಅವನಿಗೆ ನೀರು ಬೇಕಾಗಿತ್ತು. ಆದ್ದರಿಂದ ಅವನು ಅಲ್ಲಿಗೆ ಹೋಗಿ ಬಜ್ಜಲಹರಿಯ ನೀರನ್ನು ಡಬ್ಬಿಗೆ ಹಾಕಿ ತನ್ನ ತಂಬಾಕದ ಚಟವನ್ನು ಪೂರೈಸಿಕೊಂಡನು!! ಅವನಿಗೆ ಹೇಸಿಗೆ ಎಂಬು ವುದು ಎಳ್ಳಷ್ಟಾದರೂ ಇಲ್ಲ. ಇಂತಹನು ಕಾಮಾತುರನಾದಾಗ ಈ ಹೇಸಿ ತಿರುಕಿಯನ್ನು ಹೋಗಿರಬಹುದೆಂದು ಎಣಿಸುತ್ತೇನೆ.

ಬಾದ.—ಬೀರಬಲ್ಲ! ನಿನ್ನ ನಿರೀಕ್ಷಣಶಕ್ತಿಯು ಬಲು ಮೇಲಾದುದು. ನಿನ್ನ ವ್ಯವಹಾರಜ್ಞಾನವೂ ತರ್ಕಶಕ್ತಿಯೂ ಹೊಗಳಲಿಕ್ಕೆ ತಕ್ಕವುಗಳೇ ಸರಿ. ನಮ್ಮಿಬ್ಬರ ಕಣ್ಣುಮುಂದೆ ನಡೆದ ಸಂಗತಿಗಳಿಂದ ನನಗೇನೂ ತಿಳಿಯಲಿಲ್ಲ. ನೀನು ಈ ಅನುಮಾನವನ್ನು ತೆಗೆದೆ. ಇದು ನಿನ್ನ ಬುದ್ಧಿಯ ಹೆಚ್ಚಳವನ್ನು ತೋರಿಸುತ್ತದೆ. ಅದಿರಲಿ, ನಾಳೆ ಇವರಿಬ್ಬರನ್ನೂ ಓಲಗಕ್ಕೆ ಕರಿಸಿ, ಈ ತಿರುಕಿಯು ಇವನಿಂದಲೇ ಬಸುರಾದಳೋ ಹೇಗೆಯೋ ಎಂಬುದನ್ನು ನಿರ್ಣ ಯಿಸು. ಈ ಪಾಣ್ಬನು ನಿನ್ನ ಗೊತ್ತಿನವನೋ?

ಬೀರ.—ಖುದಾವಂದ್! ಇವನಿರುವ ಸ್ಥಳವು ನನಗೆ ಗೊತ್ತುಂಟು. ನಾಳೆ ಇಬ್ಬರನ್ನೂ ಕರೆಯಿಸಿ ವಿಚಾರಮಾಡಿ ತಮಗೆ ತಿಳಿಸುವೆನು.

ಮರುದಿವಸ ಬೀರಬಲ್ಲನು ಅವರಿಬ್ಬರನ್ನೂ ಕರೆಯಿಸಿದನು. ಯುವ ಕನು ಮೊದಲು ತನ್ನ ತಪ್ಪನ್ನು ಒಪ್ಪಿಕೊಳ್ಳಲಿಲ್ಲ. ತಿರುಕಿಯು ಅವನನ್ನು

ಗುರುತಿಸಿದಳು. ಕಡೆಗೆ ಆ ಯುವಕನು ಆಕೆ ಹೇಳಿದ್ದಕ್ಕೆಲ್ಲ ಒಡಂಬಟ್ಟನು. ಬಳಿಕ ಬೀರಬಲ್ಲನು ಆ ಘಟಿಂಗನಿಂದ ಆ ತಿರುಕಿಗೆ ಇರಲಿಕ್ಕೆ ಮನೆಯನ್ನೂ ಅನ್ನವಸ್ತ್ರಗಳ ಬಗ್ಗೆ ಸಾಕಷ್ಟು ಹಣವನ್ನೂ ಕೊಡಿಸಿ, ಈ ಸಂಗತಿಯನ್ನು ಬಾದಶಹನಿಗೆ ತಿಳಿಸಿದನು. ಈ ಸಮಾಚಾರವನ್ನು ಕೇಳಿ ಬಾದಶಹನು ಸಂತುಷ್ಟನಾಗಿ ಬೀರಬಲ್ಲನನ್ನು ಅಭಿನಂದಿಸಿದನು.

## ೫. ಸೊನ್ನಗಾರರ ಕಳವು

ಒಂದು ದಿವಸ ಬಾದಶಹ ಬೀರಬಲ್ಲರು ಸಂತೋಷದಿಂದ ಮಾತನಾಡುತ್ತ ಕುಳಿತಿರುವಾಗ—

**ಬಾದ.**—ಬೀರಬಲ್ಲ! ಸೊನ್ನಗಾರ, ಸಿಂಪಿಗ, ಶಾನಭೋಗ ಇವರನ್ನು ನಂಬಕೂಡದೆಂದು ಏಕೆ ಹೇಳುತ್ತಾರೆ? ಅವರೆಲ್ಲರೂ ಮೋಸಗಾರರೇ? ಅವರೊಳಗೆ ಪ್ರಮಾಣಿಕರು ಇರುವುದಿಲ್ಲೇನು?

**ಬೀರ.**—ಮಹಾರಾಜ! ಅವರೊಳಗೆ ಬಹುಶಃ ಎಲ್ಲರೂ ಕರಳೊಳಗೆ ಕತ್ತರಿಯನ್ನು (ವಿಶ್ವಾಸಘಾತವನ್ನು) ಮಾಡುವುದರಿಂದ ಅವರ ವಿಷಯವಾಗಿ ಈ ನಾಣ್ಣುಡಿಯು ಹುಟ್ಟಿರಬಹುದೆಂದು ತೋರುತ್ತದೆ. ಅವರೊಳಗೆ ಪ್ರಮಾಣಿಕರು ಇಲ್ಲೆಂದರೆ ಅತಿಶಯೋಕ್ತಿಯಾಗಲಾರದು.

**ಬಾದ.**—ನಮ್ಮ ಅರಮನೆಯಲ್ಲಿ ಕೆಲಸಮಾಡುವ ಸೊನ್ನಗಾರರೆಲ್ಲ ನಮ್ಮ ಚಿನ್ನ, ಬೆಳ್ಳಿ, ಹರಳುಕಲ್ಲುಗಳನ್ನು ದಿನಾಲು ಕದಿಯುತ್ತಿರುವರೇನು? ಅವರಿಂದ ಕೆಲಸ ತೆಗೆದುಕೊಳ್ಳುವವರು ಏನು ಮಾಡುತ್ತಿರುತ್ತಾರೆ?

**ಬೀರ.**—ಒಡವೆ ಮಾಡಿಸುವವರು ಕಣ್ಣಲ್ಲಿ ಎಷ್ಟು ಎಣ್ಣೆ ಹಾಕಿಕೊಂಡು ನೋಡುತ್ತಿದ್ದರೂ ಸೊನ್ನಗಾರರು ಕದಿಯುವುದನ್ನು ಬಿಡುವುದಿಲ್ಲ. ಆದ ರಿಂದ ಅವರಿಗೆ 'ಪಶ್ಯತೋಹರ' ಎಂಬ ಹೆಸರನ್ನು ಕೊಟ್ಟಿರುತ್ತಾರೆ. ತಮ್ಮನ್ನು ಹತ್ತಿಹೊಂದಿದವರ ಒಡವೆ ಮಾಡುವಾಗಲೂ ಅವರು ಕಳವು ಮಾಡದೆ ಬಿಡರು. ಈಗ ೨೦।೨೫ ವರುಷಗಳ ಹಿಂದೆ ಇದೇ ಪಟ್ಟಣದಲ್ಲಿ ಒಬ್ಬ ಸೊನ್ನಗಾರನು ತನ್ನ ತಂಗಿಯ ಚಿನ್ನವನ್ನು ಸೋಜಿಗವಾದ ಬಗೆಯಿಂದ ಕದ್ದನೆಂದು ಕೇಳಿದ್ದೇನೆ.

ಬಾದ.—ಅದು ಹೇಗೆ ಕದ್ದನು ಹೇಳು.

ಬೀರ.—ಇದೇ ಊರಲ್ಲಿ ಒಬ್ಬ ಅಕ್ಕಸಾಲಿಗನಿದ್ದನು. ಮುಪ್ಪಿನಿಂದ ಕಣ್ಣುಹೋಗಲು ಅವನು ಕೆಲಸ ಮಾಡುವುದನ್ನು ಬಿಟ್ಟು, ರಾಮನೆಂಬ ತನ್ನ ಮಗನಿಗೆ ಕೆಲಸವನ್ನೆಲ್ಲ ಒಪ್ಪಿಸಿ, ಅಂಗಡಿಯ ಮೂಲೆಯಲ್ಲಿ 'ರಾಮ, ರಾಮ' ಎನ್ನುತ್ತ ಕುಳಿತುಕೊಳ್ಳುತಿದ್ದನು. ಒಂದು ದಿವಸ ಅವನ ಮಗಳು ತನ್ನ ಕೆಲವು ಚಿನ್ನದ ಒಡವೆಗಳನ್ನು ಕರಗಿಸಿ ಬೇರೆ ಒಡವೆಗಳನ್ನು ಮಾಡ ಲಿಕ್ಕೆ ತನ್ನ ಅಣ್ಣನಿಗೆ ಹೇಳಿ, ಚಿನ್ನವು ಕರಗುವುದನ್ನು ನೋಡುತ್ತ ಅವನ ಮುಂದೆಯೇ ಕುಳಿತಳು. ತನ್ನ ಮಗನು ತಂಗಿಯ ಚಿನ್ನವೆಂದು ಕದಿಯ ಲಿಕ್ಕಿಲ್ಲೆಂಬ ವಿಚಾರವು ಆ ಮುದುಕನ ಮನಸ್ಸಿನಲ್ಲಿ ಬಂದು ಅವನು "ಎಲೋ ರಾಮ, ನಿನಗೆ ಎಲ್ಲ ಪ್ರಾಣಿಗಳೂ ಸರಿಯಷ್ಟೇ?" ಎಂದು ಬಾರಿಬಾರಿಗೆ ಒತ್ತಿ ಕೂಗತೊಡಗಿದನು. ತಂದೆಯ ಅಭಿಪ್ರಾಯವು ಮಗನಿಗೆ ತಿಳಿಯಿತು. ಅವನು ಎಲ್ಲರ ಚಿನ್ನವನ್ನೂ ಕದಿಯುವಷ್ಟು ತನ್ನ ತಂಗಿಯ ಚಿನ್ನವನ್ನು ಕದ್ದು ಬೂದಿಯಲ್ಲಿ ಬಚ್ಚಿಟ್ಟನು. ಅವನು ಕದ್ದುದು ತಂದೆಗೆ ತಿಳಿಯುವ ಬಗೆ ಹೇಗೆ? ತಂದೆಯು ಮತ್ತೆ ಮತ್ತೆ ಮೊದಲಿನಂತೆ ಕೂಗತೊಡಗಿದನು. ತಂಗಿಯು ಮುಂದೆ ಕೂತಿದ್ದರಿಂದ ಹೇಳಲಿಕ್ಕೆ ಮಗನಿಗೆ ಮಾರ್ಗ ದೊರೆಯ ಲಿಲ್ಲ. ತನ್ನ ಸಂಕೇತಾರ್ಥವು ಮಗನಿಗೆ ತಿಳಿಯಲಿಲ್ಲೆಂದು ತಂದೆಯು ಬಡ (ಕೂಗಿ)ಕೊಳ್ಳುವುದನ್ನು ಬಿಡಲೊಲ್ಲನು. ಆದ್ದರಿಂದ ಮಗನಿಗೆ ಪಂಚಯತಿ (ತೊಂದರೆ) ಬಿತ್ತು. ತಾನು ಬಂಗಾರ ಕದ್ದುದನ್ನು ತಿಳಿಸಿದ ಹೊರತು ಮುದುಕನು ಸುಮ್ಮನಾಗುವುದಿಲ್ಲೆಂದು ಅವನು ಮನಗಂಡನು. ಹೇಳ ಬೇಕೆಂದರೆ ತಂಗಿಯು ಎದುರಿಗೆ ಕುಳಿತಿದ್ದಳು. ಆದ್ದರಿಂದ ಸಂಕೇತಾರ್ಥದ ಮಾತಿನಿಂದ ತಿಳಿಸಬೇಕೆಂದು ನಿಶ್ಚಯಿಸಿ "ಅಪ್ಪಾ! ರಾಮನು ಲಂಕೆಯನ್ನು ಸುಲಿದು ಬಹಳ ದಿವಸಗಳಾದವು. ಈಗ ಅಲ್ಲೇನೂ ಸುಲಿಯತಕ್ಕದ್ದುಳಿ ದಿಲ್ಲ. ಸುಮ್ಮನೆ ಏಕೆ ಕೂಗಿಕೊಳ್ಳುತ್ತಿ?" ಎಂದನು. ಆ ಮಾತನ್ನು ಕೇಳಿ ಮುದಕನಿಗೆ ಸಂತೋಷವಾದ್ದರಿಂದ ಅವನು "ರಾಮನಿಗೆ ಜಯವಾಗಲಿ" ಎಂದು ಸುಮ್ಮನಾದನು.

ಈ ಕಥೆಯನ್ನು ಕೇಳಿ ಬಾದಶಹನಿಗೆ ಸಂತೋಷವಾಯಿತು.

## ೬. ಸುಖಕರವಾದ ಕಾಲವು ಯಾವುದು? ಎಲ್ಲಕ್ಕೂ ಬೆಳ್ಳಗಿರುವ ವಸ್ತು ಯಾವುದು?

ಒಂದು ದಿವಸ ಒಡ್ಡೋಲಗದ ಕೆಲಸವೆಲ್ಲ ಮುಗಿದ ಬಳಿಕ ಬಾದಶಹನು ತನ್ನ ಸರದಾರರೊಡನೆ ಮಾತನಾಡುತ್ತ ಕುಳಿತಾಗ, ಅವನಿಗೆ ಮೇಲೆ ಬರೆದ ಪ್ರಶ್ನಗಳನ್ನು ಕೇಳಬೇಕೆಂಬ ಲವಲವಿಕೆ ಹುಟ್ಟಿತು. ಆಗ—

ಬಾದ.—ನನಗೆ ಎರಡು ಸಂಶಯುಗಳಿರುತ್ತವೆ. (೧) ಎಲ್ಲ ಜನರಿಗೂ ಸುಖಕರವಾದ ಕಾಲವು ಯಾವುದು? (೨) ಈ ಜಗತ್ತಿನಲ್ಲಿರುವ ವಸ್ತುಗಳಲ್ಲಿ ಎಲ್ಲಕ್ಕೂ ಬೆಳ್ಳಗಿರುವ ವಸ್ತು ಯಾವುದು? ಈ ಪ್ರಶ್ನಗಳಿಗೆ ಸರಿಯಾದ ಉತ್ತರವನ್ನು ಹೇಳಿದವರಿಂದ ನಾನು ಉಪಕೃತನಾಗುವೆನು. ಯಾರು ಬೇಕಾದರೂ ಹೇಳಬಹುದು.

ಈ ಪ್ರಶ್ನಗಳನ್ನು ಕೇಳಿದ ಕೂಡಲೆ ಸರದಾರರು ಉತ್ತರ ಹೇಳಲಿಕ್ಕೆ ಮೇಲಾಡತೊಡಗಿದರು. ಒಬ್ಬನು ಸುಣ್ಣವೆಂತಲೂ ಮತ್ತೊಬ್ಬನು ಹಾಲೆಂತಲೂ ಮೂರನೆಯವನು ಹತ್ತಿಯೆಂತಲೂ ನಾಲ್ಕನೆಯವನು ಮಲ್ಲಿಗೆ ಹೂವೆಂತಲೂ ತಂತಮಗೆ ತಿಳಿದಂತೆ ಎರಡನೆಯ ಪ್ರಶ್ನೆಗೂ, ಚಳಿಗಾಲ ಮಳೆಗಾಲ ಬೇಸಗೆಯಕಾಲವೆಂದು ಮೊದಲನೆಯ ಪ್ರಶ್ನೆಗೂ ಉತ್ತರವಾಗಿ ಹೇಳಿದರು. ಈ ಎಲ್ಲ ಉತ್ತರಗಳು ಸಮರ್ಪಕವಾಗಿ ತೋರದ್ದರಿಂದ ಬಾದಶಹನು ಅವೇ ಪ್ರಶ್ನೆಗಳನ್ನು ಬೀರಬಲ್ಲನಿಗೆ ಹಾಕಿದನು.

ಬೀರ.—ಖುದಾವಂಡ್! ಕಾಲವು ದೃಶ್ಯವಸ್ತುವಲ್ಲ. ಅದು ಭಾವವಾಚಕ ಶಬ್ದವಿರುತ್ತದೆ. ಸುಖದುಃಖಗಳಿಗೆ ಅದು ಕಾರಣವಾಗಲಾರದು. ಮನುಷ್ಯನ ನಲಿವುನೋವುಗಳಿಗೆ ಬೇರೆ ಕಾರಣಗಳಿರುತ್ತವೆ. ಹೊಟ್ಟೆಬಟ್ಟೆಗಳಿಗೆ ಇಲ್ಲದಿರುವುದೇ ಮುಖ್ಯ ಕಾರಣವು. ಜನರಿಗೆ ಹೊಟ್ಟೆಬಟ್ಟೆಗೆ ಸಾಕಾಗುವಷ್ಟಿದ್ದರೆ ಎಲ್ಲ ಋತುಗಳೂ ಹಿತಕರವಾಗಿರುವವು. ಅವಕ್ಕೆ ಸಾಕಷ್ಟು ದೊರೆಯದಿದ್ದರೆ ಎಲ್ಲ ಕಾಲವೂ ದುಃಖಕರವೇ ಸರಿ. ಆದ್ದರಿಂದ ಅನ್ನಅರಿವೆಗಳ ಪೂರೈಕೆಯೇ ಸುಖದ ಕಾರಣವು. ಕಾಲವು ಅದರ ಕಾರಣವಲ್ಲ.

ಬೀರಬಲ್ಲನ ಈ ವಿವೇಚನವನ್ನು ಕೇಳಿ ಎಲ್ಲ ಸರದಾರರೂ ತಲೆದೂಗಿದರು. ಬಾದಶಹನು ಸಂತುಷ್ಟನಾಗಿ ಬೀರಬಲ್ಲನ ವಿವೇಕವನ್ನು ಹೊಗಳಿ "ಎರಡನೆಯ ಪ್ರಶ್ನಕ್ಕೆ ಏನು ಹೇಳುತ್ತೀ?" ಎಂದು ಕೇಳಿದನು.

ಬೀರ.—ಮಹಾರಾಜ! ಈ ನನ್ನ ಗೆಳೆಯರೆಲ್ಲ ಹೇಳಿದ ವಸ್ತುಗಳು ಬೆಳ್ಳನ್ನವೇ ಸರಿ. ಆದರೆ ಇವೆಲ್ಲವುಗಳಿಗಿಂತ ಬೆಳ್ಳಗಿರುವ ವಸ್ತುವು ಹಗಲಿನ ಬೆಳಕು. ಅದು ಇಲ್ಲದಿದ್ದರೆ ಇವೆಲ್ಲ ಕರಿದಾದ ಪದಾರ್ಥಗಳೇ ಸರಿ.

ಬಾದ.—ಬೀರಬಲ್ಲ! ಇದೇನು ಹೇಳುತ್ತೀ? ಹಾಲುಸುಣ್ಣಗಳು ಕಪ್ಪೇ?

ಬೀರ.—ಮಹಾರಾಜ! ಹಗಲಿನ ಬೆಳಕಿಲ್ಲದಿದ್ದರೆ ಅವು ಕಪ್ಪೇ ಸರಿ.

ಬಾದ.—ನಿನ್ನ ಮಾತು ನನಗೆ ತಿಳಿಯಲೊಲ್ಲದು. ಹಾಲು ಎಂದಾದರೂ ಕಪ್ಪಾದೀತೇ?

ಬೀರ.—ಈ ಮಾತಿನ ದಿಟತ್ವವನ್ನು ನಾನು ತಮಗೆ ಸಿದ್ಧಮಾಡಿ (ಅನುಭವಕ್ಕೆ ತಂದು) ತೋರಿಸುವೆನು.

ಬಾದ.—ಹಾಗೆ ತೋರಿಸಿದ ಹೊರತು ನಾನು ನಿನ್ನ ಮಾತನ್ನು ನಂಬಲಾರೆನು. ಆದಷ್ಟು ಬೇಗನೆ ಪ್ರತ್ಯಕ್ಷಪ್ರಮಾಣದಿಂದ ನಿನ್ನ ಮಾತು ನಿಜವಾದ್ದೆಂಬುದನ್ನು ಸಿದ್ಧಮಾಡಿ ತೋರಿಸು.

ಮುಂದೆ ಕೆಲದಿವಸಗಳು ಹೋದಬಳಿಕ ಒಂದು ದಿವಸ ಮಧ್ಯಾಹ್ನದಲ್ಲಿ ಬಾದಶಹನು ಮಲಗಿರುವುದನ್ನು ಕಂಡು, ಬೀರಬಲ್ಲನು ಮೆಲ್ಲನೆ ಕೋಣೆಯೊಳಗೆ ಹೋಗಿ, ಹಾದಿಯಲ್ಲಿ ಒಂದು ಹಾಲಿನ ಪಾತ್ರೆಯನ್ನೂ ಸುಣ್ಣದ ಬುಟ್ಟಿಯನ್ನೂ ಇಟ್ಟು ಎಲ್ಲ ಕಿಡಿಕಿಬೆಳಕಿಂಡಿಗಳನ್ನು ಮುಚ್ಚಿಸಿ, ಬಾಗಿಲು ಹಾಕಿಕೊಂಡು ಹೊರಗೆ ಬಂದು, ಬಾದಶಹನು ಏಳುವ ಸಮಯವನ್ನು ಕಾದುಕೊಂಡಿದ್ದನು. ಕೆಲಹೊತ್ತಿನ ಮೇಲೆ ಬಾದಶಹನು ಎಚ್ಚತ್ತು, ಕೋಣೆಯು ಕತ್ತಲಾಗಿದ್ದನ್ನು ಕಂಡು ಸೋಜಿಗಗೊಂಡು ಸಿಟ್ಟಿಗೆದ್ದು, ಲಗುಬಗೆಯಿಂದ ಬಾಗಿಲು ತೆರೆಯಲಿಕ್ಕೆ ಹೋಗುವಾಗ ಹಾಲಿನ ಪಾತ್ರೆಯನ್ನು

ಉರುಳಿಸಿದ್ದಲ್ಲದೆ ಸುಣ್ಣದ ಬುಟ್ಟಿಯನ್ನೂ ಎಡವಿದನು. ಆ ಸಪ್ಪಳವನ್ನು ಕೇಳಿ ಬೀರಬಲ್ಲನು ಬಾಗಿಲು ತೆರೆದು ಸಲಾಮು ಮಾಡಿದನು.

ಬಾದ. — ಬೀರಬಲ್ಲ! ನನಗೆ ತುಸು ಜಂಪುಹತ್ತಿದಾಗ ಯಾರೋ ಕೋಣೆಯನ್ನು ಕತ್ತಲುಮಾಡಿ ಹಾದಿಯಲ್ಲಿ ಏನೇನೋ ಇಟ್ಟಿದ್ದರು.

ಬೀರ. — ಅವೇನಿದ್ದವು ?

ಬಾದ. — (ಕೋಣೆಯಲ್ಲಿ ಹರಿಯುತ್ತಿರುವ ಹಾಲನ್ನೂ ಬೊಕ್ಕಬಾರಲಾಗಿದ್ದ ಬುಟ್ಟಿಯನ್ನೂ ನೋಡಿ) ಬೀರಬಲ್ಲ! ಯಾರೋ ಹಾಲುತುಂಬಿದ ಪಾತ್ರೆಯನ್ನೂ ಸುಣ್ಣದ ಬುಟ್ಟಿಯನ್ನೂ ಇಟ್ಟಿದ್ದರು. ಇವೇನು ಕಾರಣ ಇಲ್ಲಿ ಇಟ್ಟರೊ ತಿಳಿಯುವುದಿಲ್ಲ.

ಬೀರ. — ಮಹಾರಾಜ! ಹಾಲುಸುಣ್ಣಗಳು ಬೆಳ್ಳನ್ನ ವಸ್ತುಗಳಿದ್ದು ತಮಗೆ ಕಾಣಿಸಬೇಕಾಗಿತ್ತು.

ಬಾದ. — ಎಲ್ಲ ಕಿಡಕಿಕಿಂಡಿಗಳನ್ನು ಮುಚ್ಚಿದ್ದರಿಂದ ಅವು ಕಾಣಿಸಲಿಲ್ಲ.

ಬೀರ. — ಮಹಾರಾಜ! ತಮ್ಮ ಆಳಿನ ದೊಡ್ಡ ತಪ್ಪನ್ನು ಹೊಟ್ಟೆಯೊಳಗೆ ಹಾಕಿಕೊಳ್ಳಬೇಕೆಂದು ಬೇಡಿಕೊಳ್ಳುತ್ತೇನೆ. ನಾನೇ ತಮ್ಮಪ್ಪಣೆಯಂತೆ ಬೆಳಕನ್ನು ಇಲ್ಲದಂತೆ ಮಾಡಿ ಹಾಲಿನ ಪಾತ್ರೆಯನ್ನೂ ಸುಣ್ಣದ ಬುಟ್ಟಿಯನ್ನೂ ಅಲ್ಲಿರಿಸಿದೆನು. ಕ್ಷಮಿಸಿರಿ.

ಬಾದ. — ನಾನು ಎಂದು ನಿನಗೆ ಹೀಗೆ ಮಾಡಲಿಕ್ಕೆ ಹೇಳಿದೆನು ?

ಬೀರ. — ಖುದಾವಂದ್! ಹಗಲಿನ ಬೆಳಕಿಲ್ಲದಾಗ ಹಾಲುಸುಣ್ಣಗಳು ಕಪ್ಪಾಗಿರುತ್ತವೆಂಬುದನ್ನು ಪ್ರತ್ಯಕ್ಷಪ್ರಮಾಣದಿಂದ ತೋರಿಸಲಿಕ್ಕೆ ತಾವು ಹೇಳಲಿಲ್ಲವೇ ?

ಬಾದ. — ಓ, ಓ, ಓ, ಅಹುದು! ನಿನ್ನ ಮಾತು ಸರಿಯಾದ್ದು. ಹಗಲಿನ ಬೆಳಕಿಲ್ಲದಿದ್ದರೆ ಈ ವಸ್ತುಗಳೆಲ್ಲ ಕರಿದಾದವೇ ಸರಿ. ನೀನು ಹೇಳಿದ್ದು ನನ್ನ ಅನುಭವಕ್ಕೆ ಬಂದಿತು. ಹೊಸದೊಂದು ಸಂಗತಿಯನ್ನು ಈ ಹೊತ್ತು ನೀನು ನನಗೆ ತಿಳಿಯಹೇಳಿದೆ. ನಿನ್ನ ಜಾಣ್ಮೆಯನ್ನು ಎಷ್ಟು ಹೊಗಳಿದರೂ ಕಡಮೆ.

## ೭. ಈ ಸಂಸಾರದಲ್ಲಿ ಜಾಣರು ಯಾರು, ಸುಖಿಗಳು ಯಾರು, ಸ್ವರ್ಗಕ್ಕೆ ಹೋಗುವವರು ಯಾರು?

ಒಂದು ದಿವಸ ಸಂಜೆಯ ಹೊತ್ತಿನಲ್ಲಿ ಬಾದಶಹ ಬೀರಬಲ್ಲರು ಆನಂದ ದಿಂದ ಮಾತಾಡುತ್ತ ಕುಳಿತಿರುವಾಗ—

ಬಾದ.—ಬೀರಬಲ್ಲ! ಈ ಜಗತ್ತಿನಲ್ಲಿ ಯಾರು ಜಾಣರೆನ್ನಬೇಕು? ಯಾರು ಸುಖಿಗಳು? ಯಾವ ಸಯ್ಪುಳ್ಳವರು (ಪುಣ್ಯವಂತರು) ಸ್ವರ್ಗಕ್ಕೆ ಹೋಗುತ್ತಾರೆ? ಈ ಮೂರು ಪ್ರಶ್ನಗಳ ಉತ್ತರವನ್ನು ನಾನು ಸರಿಯಾಗಿ ಕೊಡಲಾರೆನು. ಕೆಲವರು ಹಣವುಳ್ಳವರು ಜಾಣರೆಂತಲೂ ಸುಖಿ ಗಳೆಂತಲೂ ಹೇಳುತ್ತಾರೆ. ಮತ್ತೆ ಕೆಲವರು ಮೋಸಮಾಡಿದವರು ಜಾಣ ರೆನ್ನುತ್ತಾರೆ, ಮಕ್ಕಳುಮರಿ ಇದ್ದವರು ಸುಖಿಗಳೆನ್ನುತ್ತಾರೆ. ಎಂತಹ ಕೆಟ್ಟ ಮನುಷ್ಯನಾದರೂ ಸತ್ತಬಳಿಕ ಸ್ವರ್ಗಕ್ಕೆ ಹೋದನೆಂದು ಹೇಳುತ್ತಾರೆ. ಒಬ್ಬನು ಒಂದು ಕೆಲಸವು ಪುಣ್ಯಕರವೆಂದು ಹೇಳಿದರೆ, ಮತ್ತೊಬ್ಬನು ಮತ್ತೊಂದು ಕೆಲಸವು ಪುಣ್ಯಕರವೆಂದು ಹೇಳುತ್ತಾನೆ. ಈ ಪ್ರಶ್ನಗಳ ಉತ್ತರವನ್ನು ನೀನು ಸರಿಯಾಗಿ ಕೊಡಬಲ್ಲೆಯಾ? ಗೊತ್ತಿದ್ದರೆ ಹೇಳು.

ಬೀರ.—ಮಹಾರಾಜ, ಇವೇನು ಬಿಕ್ಕಟ್ಟಾದ ಪ್ರಶ್ನಗಳಲ್ಲ. ನಮ್ಮ ಶಾಸ್ತ್ರಗಳಲ್ಲಿ ಇವುಗಳ ಉತ್ತರಗಳನ್ನು ಸಪ್ರಮಾಣವಾಗಿಯೂ ಸಮರ್ಪಕ ವಾಗಿಯೂ ಸಯುಕ್ತಿಕವಾಗಿಯೂ ಕೊಟ್ಟಿರುತ್ತಾರೆ.

ಬಾದ.—ಹಾಗಾದರೆ ಈ ಪ್ರಶ್ನಗಳ ಸರಿಯಾದ ಉತ್ತರವನ್ನು ಹೇಳು, ನೋಡೋಣ.

ಬೀರ.—ಬರಿ ಓದಿದವರೆಲ್ಲ ಜಾಣರಲ್ಲ. ಅವರೊಳಗೆ ಎಷ್ಟೋ ಮಂದಿ ಪಠಿತಮೂರ್ಖರಿರಬಹುದು. ಓದಿದ್ದನ್ನು ಚೆನ್ನಾಗಿ ಮನನಮಾಡಿ, ಅದರೊಳಗೆ ಹೇಳಿದ ಮುಖ್ಯ ತತ್ವಗಳನ್ನು ಕಂಡುಹಿಡಿದು, ಅವನ್ನು ವ್ಯವ ಹಾರದಲ್ಲಿ ಉಪಯೋಗಿಸಿ, ದೇಶಕಾಲವನ್ನರಿತು ಅವನ್ನು ಉಪಯೋಗಿಸು ವಾಗ ಬರುವ ತೊಂದರೆಗಳನ್ನು ಯುಕ್ತಿಯಿಂದ ದೂರಮಾಡಿಕೊಂಡು, ತನ್ನ ಉದ್ದೇಶವನ್ನು ಕೊನೆಗಾಣಿಸಿಕೊಂಡು, ತನ್ನ ಹಂಚಿಕೆಯನ್ನು ಸಿದ್ಧಿಗೊಯ್ದು,

ತನ್ನ ಮನೋಗತವನ್ನು ಸಫಲಮಾಡಿಕೊಳ್ಳುವವನೇ ನಿಜವಾದ ಜಾಣನು, ಉಳಿದವರು ದಡ್ಡರು.

ಬಾದ. — ಬೀರಬಲ್ಲ, ಇದೆಂತಹ ಲಕ್ಷಣ ಹೇಳುವ ಪದ್ಧತಿಯು ನಿನ್ನದು? ಕಾರ್ಯದಿಂದ ಕಾರಣದ ಲಕ್ಷಣವನ್ನು ಹೇಳುತ್ತೀಯಲ್ಲ!! ಕಾರಣದ ಲಕ್ಷಣವನ್ನು ಕಾರ್ಯಕ್ಕೆ ಸಂಬಂಧವಿಲ್ಲದೆ ಸ್ವತಂತ್ರವಾಗಿ ಹೇಳಿದರೆ ಆ ಜ್ಞಾನದಿಂದ ಎಲ್ಲರಿಗೂ ಉಪಯೋಗವಾಗಬಹುದು. ಜಯಶೀಲರಾದವರು ಜಾಣರೆಂದು ಹೇಳಿದರೆ ಅದರಿಂದಾಗುವ ಪ್ರಯೋಜನವೇನು?

ಬೀರ. — ಮಹಾರಾಜ, ನಿರ್ಜೀವಪದಾರ್ಥಗಳಲ್ಲಿ ಕಾರಣವನ್ನು ಕಾರ್ಯದಿಂದ ಪೂರ್ಣವಾಗಿ ವಿಂಗಡಿಸಬಹುದು. ಆದರೆ ಸಜೀವಪದಾರ್ಥಗಳಲ್ಲಿ ಕಾರ್ಯಕಾರಣಗಳನ್ನು ಬೇರ್ಪಡಿಸುವುದು ಬಲುಕಷ್ಟ. ಉದಾಹರಣಾರ್ಥವಾಗಿ ಸಕ್ಕರೆಯ ಅಥವಾ ಬೇರೆ ಯಾವ ಪದಾರ್ಥದ ರುಚಿಯು ಅದನ್ನು ತಿಂದ ಹೊರತು ಗೊತ್ತಾಗುವುದೇ? ಮನುಷ್ಯನ ಮನಸ್ಸು ವಾಯುವಿನಂತೆ ಅತಿ ಚಂಚಲವಾದುದು. ಎಷ್ಟೋ ಜನರು ಇಂದ್ರಿಯಗಳ ವಶವರ್ತಿಗಳು. ಆದ್ದರಿಂದ ಈ ಸಂಸಾರದಲ್ಲಿ ಮಾನಸಿಕ ಪರಿಸ್ಥಿತಿಯು ಆಗಿಂದಾಗ ಬದಲಾಗುತ್ತದೆ. ಆ ಬದಲಾಗುವ ನೇಮಗಳನ್ನು ಕಂಡುಹಿಡಿಯುವುದು ಅತಿಕಷ್ಟ. ಇಷ್ಟೆಲ್ಲ ಗೊತ್ತುಮಾಡಿಕೊಂಡು ಯಾವನಾದರೊಬ್ಬ ಬಲುಜಾಣನು ಒಂದು ಕೆಲಸವನ್ನು ಆರಂಭಿಸಿದರೂ ಆ ಕೆಲಸವು ಕೈಗೂಡುವುದರೊಳಗೆ ಪರಿಸ್ಥಿತಿಯು ಬದಲಾಗಿ ಅವನ ಮನೋರಥವು ನಿಷ್ಫಲವಾಗಬಹುದು. ಆದ್ದರಿಂದ ಮನುಷ್ಯನು ಎಷ್ಟು ಜಾಣನಾದರೂ ಅವನ ಬುದ್ಧಿಯ ತೂಕವು ಕಪ್ಪೆಯ ತಕ್ಕಡಿಯಂತಿರುತ್ತದೆ. ಒಂದು ಪರಡಿಯಲ್ಲಿ ಹಾಕಿದ ಕಪ್ಪೆಗಳ ತೂಕವನ್ನು ಸರಿಮಾಡುವಷ್ಟರೊಳಗೆ ಒಂದೆರಡು ಕಪ್ಪೆಗಳು ಹಾರಿಹೋಗುತ್ತವೆ. ಅವುಗಳನ್ನು ಹಿಡಿದು ಪರಡಿಯೊಳಗೆ ಹಾಕುವಷ್ಟರಲ್ಲಿ ಬೇರೆ ಕಪ್ಪೆಗಳು ಹಾರಿಹೋಗುತ್ತವೆ. ಇದೇ ಪ್ರಕಾರ ತಮ್ಮ ಬುದ್ಧಿಬಲದಿಂದ ಕಂಡುಹಿಡಿದ ಎಲ್ಲ ಎಡರುಗಳನ್ನೂ ದೂರಮಾಡಿಕೊಳ್ಳುವಷ್ಟರಲ್ಲಿ ಹೊಸ ತೊಂದರೆಗಳು ಬರುತ್ತವೆ. ಅವನ್ನು ನಿವಾರಣ ಮಾಡಿಕೊಳ್ಳುವಷ್ಟರಲ್ಲಿ ಹಳೆಯ ಅಡಚಣಿಗಳು ತಿರುಗಿ ತಲೆದೋರುತ್ತವೆ. ಆದ್ದರಿಂದ ಕರ್ಮಧರ್ಮಸಂಯೋಗ

ದಿಂದ ಯಾವನ ಹಂಚಿಕೆಯು, ಯುಕ್ತಿಯು, ವಿಚಾರವು ಸಫಲವಾಗುವುದೋ ಅವನೇ ಜಾಣನೆಂದು ಹೇಳಬಹುದು. ಜಾಣತನವೆಷ್ಟೇ ಇರಲಿ, ದೈವ ಸಾಹಾಯುವು ಇದ್ದರೆ ಮಾತ್ರ ಕೆಲಸವು ಕೈಗೂಡುವುದು. ನಾನು ಮಾಡಿ ದೆನೆಂಬುದು ದುರಹಂಕಾರವೇ ಸರಿ.

**ಬಾದ.** — ಬೀರಬಲ್ಲ, ನಿನ್ನ ಅರ್ಥಪೂರಿತವಾದ ವಿವರಣೆಯನ್ನು ಕೇಳಿ ನನಗೆ ಬಹಳ ಸಂತೋಷವಾಯಿತು. ಈ ಹೊತ್ತಿನಿಂದ ನಾನು ಗೆದ್ದೆನೆಂಬ ಅಹಂಕಾರವನ್ನು ಬಿಟ್ಟುಬಿಡುವೆನು; ನನ್ನ ಗೆಲವೆಲ್ಲ ದೇವತಾನುಗ್ರಹದಿಂ ದಲೇ ಆದುದೆಂದು ನೆರೆನಂಬುವೆನು. ಇನ್ನು ಸುಖಿಗಳಾರು ಹೇಳು.

**ಬೀರ.** — ಮಹಾರಾಜ, ಬಡ ಸೇವಕನಾದ ನನ್ನನ್ನು ಕ್ಷಮಿಸಬೇಕು. ನನಗೆ ತಿಳಿದುದನ್ನು ಹೇಳಿದರೆ ಖಾವಂದರವರಿಗೆ ಸಿಟ್ಟು ಬರಬಹುದು.

**ಬಾದ.** — ಬೀರಬಲ್ಲ! ಸಿಟ್ಟುಗೊಳ್ಳಲಿಕ್ಕೆ ನಾನು ಹುಚ್ಚನೇ? ಇದ್ದ ದ್ದನ್ನು ಇದ್ದ ಹಾಗೆ ಹೇಳು, ನಾನು ಮುನಿಯುವುದಿಲ್ಲ. ನಾನು ಸುಖಿಯ ಲ್ಲೆಂದು ಹೇಳಿದರೂ ಚಿಂತೆಯಿಲ್ಲ. ಹೆದರಬೇಡ. ನನಗೆ ದಿಟವೇ ಬೇಕು.

**ಬೀರ.** — ಮಹಾರಾಜರು ಈ ಮೇರೆಗೆ ಅಭಯಕೊಟ್ಟರೆ ನನಗೆ ತಿಳಿದುದನ್ನು ಹೇಳುವೆನು.

**ಬಾದ.** — ಹೇಳು, ಅಂಜಬೇಡ, ಏನೂ ಮಾಜದೆ, ಯಾವುದನ್ನೂ ಬಚ್ಚಿಡದೆ ಹೆದರದೆ ಹೇಳು. ಬಹಳ ಕೆಟ್ಟುದೆಂದರೆ, ನಾನು ಸುಖಿಯಲ್ಲೆಂದು ಹೇಳುವೆಯಷ್ಟೆ?

**ಬೀರ.** — ಮಹಾರಾಜ! ಜೀವವುಳ್ಳ ಯಾವ ಪ್ರಾಣಿಗೂ ಸುಖಿಯೆಂದು ಹೇಳಲಾಗದು.

**ಬಾದ.** — ಇದೇನು, ಬೀರಬಲ್ಲ! ಒಳ್ಳೆಯ ಸೋಜಿಗದ ಮಾತು ಹೇಳುತ್ತೀ? ಜೀವಂತ ಪ್ರಾಣಿಗಳಲ್ಲದೆ ಸತ್ತ ಪ್ರಾಣಿಗಳು ಸುಖದುಃಖಗಳನ್ನ ನುಭವಿಸುತ್ತವೆಯೇ?

**ಬೀರ.** — ಮಹಾಪ್ರಭುಗಳು ಹೇಳಿದುದು ಅಕ್ಷರಶಃ ದಿಟವಾಗಿರು ತ್ತದೆ. ಅದರಲ್ಲಿ ಎಳ್ಳಷ್ಟಾದರೂ ತಪ್ಪಿಲ್ಲ. ಜೀವಿಯೇ ಸುಖದುಃಖಗಳಿಗೆ ಬಾಧ್ಯನೆಂಬುದನ್ನು ನಾವು ಕಣ್ಣಾರೆ ನೋಡುತ್ತೇವೆ. ಆತ್ಮಕ್ಕೆ ಸುಖದುಃಖ

ಗಳಿರುತ್ತವಂತೆ. ಆದರೆ ಅದು ನಮಗೆ ದೃಷ್ಟಿಗೋಚರವಾಗುವುದಿಲ್ಲ, ಮತ್ತು ಅದು ನಮ್ಮ ಅನುಭವಕ್ಕೆ ಮೀರಿದ ಮಾತು. "ಇಂಥವನು ಸುಖಿಯಾಗಿದ್ದನು, ಇಂಥವನು ದುಃಖಿಯಾಗಿದ್ದನು" ಎಂದು ಸತ್ತಬಳಿಕ ಹೇಳುವುದೇ ಸರಿಯಾದ ಮಾತು. ಏಕೆಂದರೆ, ಈ ಸಂಸಾರದಲ್ಲಿ ಸುಖದುಃಖಗಳು ಒಂದರ ಹಿಂದೊಂದು ಪರಂಪರೆಯಾಗಿ ಬರುತ್ತವೆ. ಈ ಹೊತ್ತಿನವರೆಗೆ ಸುಖಿಯಾಗಿದ್ದವನು ನಾಳೆ ದುಃಖಿಯಾಗಬಹುದು. ಹರಿಶ್ಚಂದ್ರ ಮಹಾರಾಜನು ಹೊಲೆಯನಿಗೆ ಆಳಾಗಬಹುದೆಂದು ಯಾರಾದರೂ ಕನಸು ಮನಸ್ಸಿದಲ್ಲಿ ನೆನೆದಿದ್ದರೋ? ರಾವಣ ಹಿರಣ್ಯಕಶಿಪು—ಇವರ ಪಾಡು ಏನಾಯಿತು? ಸೀತಾರಾಮರ ಮತ್ತು ನಳದಮಯಂತಿಯರ ದುಃಖಗಳನ್ನು ಬಣ್ಣಿಸಲಳವಲ್ಲ. ತನ್ನ ಸುದರ್ಶನಚಕ್ರದಿಂದ ಮೂರು ಲೋಕಗಳನ್ನು ನಡುಗಿಸುವಷ್ಟು ಕಸುವುಳ್ಳ ಶ್ರೀ ಕೃಷ್ಣನು ಒಬ್ಬ ಬೇಡನ ಸೊಟ್ಟ ಬಾಣದಿಂದ ಸಾಯಬೇಕೇ? ದೈವಗತಿಯು ವಿಚಿತ್ರವಾದ್ದರಿಂದ ಉಸಿರಾಡುವವರೆಗೆ ಯಾವ ಮನುಷ್ಯನೂ ಸುಖಿಯೆಂದು ಹೇಳಲಿಕ್ಕಾಗುವುದಿಲ್ಲ; ಸತ್ತ ಬಳಿಕ ಹಾಗೆ ಹೇಳಲಿಕ್ಕೆ ಅಡ್ಡಿಯಿಲ್ಲ.

ಬಾದ.—ಬೀರಬಲ್ಲ, ನಾನು ಕೇಳಿದ ಪ್ರಶ್ನಗಳಲ್ಲಿ ಎರಡರ ಉತ್ತರವನ್ನು ಸರಿಯಾಗಿ ಹೇಳಿದೆ. ನಿನ್ನ ವಿವರಣೆಯಿಂದಲೂ ನೀನು ಕೊಟ್ಟ ದೃಷ್ಟಾಂತಗಳಿಂದಲೂ ನಿನ್ನ ಉಪದೇಶದ ಮಾತುಗಳೆಲ್ಲ ನನ್ನ ಮನಸ್ಸಿನಲ್ಲಿ ಚೆನ್ನಾಗಿ ನೆಟ್ಟವು. ಆದರೆ ನನ್ನ ಮೂರನೆಯ ಪ್ರಶ್ನದ ಬಗ್ಗೆ ನಿನ್ನ ಉತ್ತರವೇನು?

ಬೀರ.—ಮಹಾರಾಜ, "ಸ್ವರ್ಗಕ್ಕೆ ಹೋಗುವವರಾರು? ನರಕಕ್ಕೆ ಹೋಗುವವರಾರು?" ಎಂಬುದೇ ತಮ್ಮ ಮೂರನೆಯ ಪ್ರಶ್ನವು. ಇದರ ಉತ್ತರವನ್ನು ಸತ್ತಬಳಿಕ ಕೊಡಬಹುದೇ ಹೊರತು, ಉಸಿರಿರುವಾಗ ಕೊಡಲಿಕ್ಕಾಗುವುದಿಲ್ಲ.

ಬಾದ.—ಅದೇಕೆ? ಜೀವಂತವಾಗಿರುವಾಗ ಇಂಥವನು ಸ್ವರ್ಗಕ್ಕೆ ಹೋಗುವನೆಂದು ಹೇಳಲಿಕ್ಕೆ ಏಕೆ ಆಗುವುದಿಲ್ಲ?

ಬೀರ.—ಮಹಾರಾಜ! ಸ್ವರ್ಗನರಕಗಳು ಮನುಷ್ಯನು ಮಾಡುವ ಪುಣ್ಯಪಾಪಗಳನ್ನು ಅನುಸರಿಸುತ್ತವೆ. ಹೆಚ್ಚು ಪುಣ್ಯವಮಾಡಿದವರು ಸ್ವರ್ಗಕ್ಕೆ ಹೋಗುವರು, ಹೆಚ್ಚು ಪಾಪವಮಾಡಿದವರು ನರಕದಲ್ಲಿ ಬೀಳುವರು. ಮನುಷ್ಯನು ಸಾಯುವ ವರೆಗೂ ಪುಣ್ಯಪಾಪಗಳನ್ನು ಮಾಡುತ್ತಿರುವುದರಿಂದ ಅವನ ಪುಣ್ಯಪಾಪಗಳ ಎಣಿಕೆಯನ್ನು ಅವನು ತೀರಿದ ಬಳಿಕ ಮಾಡಬಹುದಲ್ಲದೆ, ಅವನು ಇರುವಾಗ ಮಾಡಲಿಕ್ಕಾಗುವುದಿಲ್ಲ.

ಬಾದ.—ಯಾವನಾದರೊಬ್ಬನು ಐವತ್ತು ಅರವತ್ತು ವರುಷ ಪುಣ್ಯ ಮಾಡಿದ್ದರೆ, ಅವನು ಮುಂದೆ ಎಷ್ಟೇ ವರುಷ ಬದುಕಿದರೂ ಅವನು ಸ್ವರ್ಗಕ್ಕೆ ಹೋಗುವನೆಂದು ಹೇಳಲಿಕ್ಕೆ ಅಡ್ಡಿಯೇನು ?

ಬೀರ.—ಮಹಾರಾಜ! ಹಾಗೆ ಹೇಳಕೂಡದು. ಏಕೆಂದರೆ ತಾವು ಹೇಳಿದ ಗೃಹಸ್ಥನು ತನ್ನ ಉಳಿದ ಆಯುಸ್ಸಿನಲ್ಲಿ ಎಷ್ಟು ಪುಣ್ಯಪಾಪ ಮಾಡುವನೆಂಬುದನ್ನು ಅರಿತುಕೊಳ್ಳುವ ಬಗೆಯಾವುದು ? ಅವನು ಪುಣ್ಯಕೆಲಸ ಮಾಡದೆ, ಪಾಪದ ರಾಶಿಯನ್ನೇ ಒಟ್ಟಿಕೊಂಡು ತಾನು ಹಿಂದೆ ಮಾಡಿದ ಪುಣ್ಯವನ್ನೆಲ್ಲ ಕಳೆದುಕೊಳ್ಳಬಹುದು, ಅಥವಾ ಹೇರಳವಾಗಿ ಪುಣ್ಯವನ್ನೇ ಮಾಡಿ ತಾನು ಹಿಂದೆ ಮಾಡಿದ ಪಾಪದ ಹೊರೆಯನ್ನು ಇಳಿಸಿಕೊಳ್ಳಬಹುದು. ಆದ್ದರಿಂದ ಉಸಿರಾಡುವ ವರೆಗೆ ಮನುಷ್ಯನು ಯಾವ ಲೋಕಕ್ಕೆ ಹೋಗುವನೆಂದು ಹೇಳುವುದು ಎಂದೂ ಸರಿಯಾಗಲಾರದು. ಆದಕಾರಣ ಸತ್ತಬಳಿಕ ಮನುಷ್ಯನು ಇಂತಹ ಲೋಕಕ್ಕೇ ಹೋಗುವನೆಂದು ನಿಃಸಂದೇಹವಾಗಿ ಹೇಳಬಹುದು.

ಬಾದ.—ಬೀರಬಲ್ಲ! ನಾನು ನಿನ್ನ ವಿವರಣೆಗೆ ಮೆಚ್ಚಿದೆನು. ದೊಡ್ಡ ತತ್ವಗಳನ್ನು ನೀನು ಸುಲಭವಾಗಿ ತಿಳಿಯುವಂತೆ ನನಗೆ ಬಿಚ್ಚಿ ಹೇಳಿದ್ದರಿಂದ ನಾನು ನಿನಗೆ ಅತ್ಯಂತ ಕೃತಜ್ಞನಾಗಿದ್ದೇನೆ. ಏನು ಕೊಟ್ಟರೂ ನಿನ್ನ ಉಪಕಾರ ತೀರದು. ಆದರೂ ನನ್ನ ಕೃತಜ್ಞತೆಯ ಗುರುತಿಗಾಗಿ ನನ್ನ ಬೆರಳಲ್ಲಿರುವ ಈ ಹರಳಿನ ಉಂಗುರವನ್ನು ಕೊಡುತ್ತೇನೆ. ಅದನ್ನು ನಿನ್ನ ಬೆರಳಲ್ಲಿ ಇಟ್ಟುಕೊ; ಆ ಉಂಗರವನ್ನು ನಾನು ನೋಡಿದ ಕೂಡಲೆ ನನಗೆ ನೀನು ಹೇಳಿದ ತತ್ವಗಳು ನೆನಪಾಗುವುವು.

## ೭. ಈ ಜಗತ್ತಿನಲ್ಲಿ ಗಂಡಸರು ಹೆಚ್ಚೋ ಹೆಂಗಸರು ಹೆಚ್ಚೋ?

ಒಂದು ದಿನ ಬಾದಶಹ ಬೀರಬಲ್ಲರು ಮಾತಾಡುತ್ತ ಕುಳಿತಿರುವಾಗ—

ಬಾದ.—ಬೀರಬಲ್ಲ, ಈ ಭೂಮಿಯಲ್ಲಿ ಗಂಡಸರ ಸಂಖ್ಯೆ ಹೆಚ್ಚಾಗಿರುವುದೋ ಹೆಂಗಸರ ಸಂಖ್ಯೆ ಹೆಚ್ಚಾಗಿರುವುದೋ ಅಥವಾ ಆ ಇಬ್ಬರ ಸಂಖ್ಯೆಯೂ ಸಮನಾಗಿರುವುದೋ?

ಬೀರ.—ಮಹಾರಾಜ, ಈ ಪ್ರಶ್ನವು ಬಲು ಬಿಗಿಯಾದುದು.

ಬಾದ.—ಇದೇನು! ಇದಕ್ಕೂ ಬಿಗಿಯಾದ ಪ್ರಶ್ನಗಳನ್ನು ಕೂಡಲೆ ಬಿಡಿಸಿರುತ್ತೀ. ಇದರಲ್ಲೇನು ಅಂತಹ ಬಿಗಿಯುಂಟು?

ಬೀರ.—ಖುದಾವಂದ್, ಇದು ಬಹಳ ಕಠಿಣವಾದ ಪ್ರಶ್ನವು. ಏಕೆಂದರೆ ಕೆಲವರು ತೃತೀಯ ಪ್ರಕೃತಿಯವರಾಗಿರುವರು. ಈ ಕೊಜ್ಜಿನನ್ನು ನೋಡಿರಿ. ಇವನನ್ನು ಗಂಡಸರಲ್ಲೆಣಿಸಬೇಕೋ ಹೆಂಗಸರಲ್ಲೆಣಿಸಬೇಕೋ?

ಬಾದ.—ಇವರೆಷ್ಟು ಜನ? ಇವರ ಸಂಖ್ಯೆಯು ತೀರ ಸಣ್ಣದಾಗಿರುತ್ತದೆ. ಇವರು ಇಲ್ಲವೆಂದು ತಿಳಿದು ಲೆಕ್ಕಮಾಡಿದರೆ ಲೆಕ್ಕವು ತಪ್ಪಾಗಲಿಕ್ಕಿಲ್ಲ.

ಬೀರ.—ಮಹಾರಾಜ, ಬಡವನನ್ನು ಕ್ಷಮಿಸಿರಿ. ತಾವು ಹೇಳಿದ್ದು ದಿಟ. ಎಗ್ಗಿಲ್ಲದೆ ತಾವು ಕೊಜ್ಜೆಯರೆಂದು ಹೇಳಿಕೊಳ್ಳುವವರ ಸಂಖ್ಯೆಯು ತೀರ ಕಡಮೆಯಾಗಿದ್ದರೂ ತಾವು ನಪುಂಸಕರಾಗಿದ್ದು ಗಂಡಸರೆಂದು ಹೇಳಿಕೊಳ್ಳುವವರು ಬಹು ಜನರಿರುತ್ತಾರೆ. ಅವರ ನಿಜಸ್ವರೂಪವನ್ನು ಕಂಡುಹಿಡಿಯುವುದು ಅತಿಕಷ್ಟದ ಕೆಲಸ.

ಬಾದ.—ಬಾಡೆತನವು ಕೂಡಲೆ ಹೊರಬೀಳುತ್ತದೆ. ಆದ್ದರಿಂದ ಅಂಥವರನ್ನು ಗೊತ್ತುಹಚ್ಚುವುದು ಹಗುರವಾದ ಕೆಲಸ.

ಬೀರ.—ಖುದಾವಂದ್, ಬಡಾಳಿನ ತಪ್ಪನ್ನು ಕ್ಷಮಿಸಬೇಕು. ಅರಸರೊಳಗೂ ಸರದಾರರೊಳಗೂ ಸಾವಕಾರರೊಳಗೂ ಎಲ್ಲ ವರ್ಗದವರೊಳಗೂ ಬಾಡೆಯರಿರುತ್ತಾರೆ. ಅವರು ತಮ್ಮ ಹುಳುಕು ಹೊರಬೀಳದಂತೆ ಹಲವು ಹೂಟಗಳನ್ನು ಹುಡುಕುತ್ತಾರೆ.

**ಬಾದ.** — ಬಾಡೆಯರು ಎಂದೂ ಮದುವೆಮಾಡಿಕೊಳ್ಳಲಿಕ್ಕಿಲ್ಲ. ಗಂಡ ಸತನವಿದ್ದರಷ್ಟೇ ಅವರು ಮದುವೆಮಾಡಿಕೊಳ್ಳುವುದು ?

**ಬೀರ.** — ಮಹಾರಾಜ, ಅದು ಹಾಗಲ್ಲ. ಬಡಬಾಡೆಯರು ಮದುವೆ ಮಾಡಿಕೊಳ್ಳುವದಿಲ್ಲೆಂಬುದು ನಿಜ. ಏಕೆಂದರೆ ಅವರಿಗೆ ತಮ್ಮ ಕೊರತೆಯನ್ನು ಮುಚ್ಚಿಕೊಳ್ಳಲಿಕ್ಕೆ ಅನುವು ದೊರೆಯುವದಿಲ್ಲ. ಮೋಸಮಾಡಿ ಮದುವೆಕೊಂಡರೆ, ಮೋಸಹೋದ ಹೆಂಡಂದಿರು ಅದನ್ನು ಕೂಡಲೆ ಬಯಲಿಗೆ ತರುತ್ತಾರೆ.

**ಬಾದ.** — ಹಾಗಾದರೆ ಹಣವುಳ್ಳ ಷಂಡರು ಮದುವೆಮಾಡಿಕೊಳ್ಳುತ್ತಾರೇನು ?

**ಬೀರ.** — ಮಹಾರಾಜ, ಸಿರಿವಂತರು ಮದುವೆಮಾಡಿಕೊಳ್ಳುತ್ತಾರೆ. ಇಷ್ಟೇ ಅಲ್ಲ, ಅವರು ತಮ್ಮ ಹೆಂಡಂದಿರನ್ನು ಹಾದರಕ್ಕೆ ಹಚ್ಚಿ ತಮ್ಮ ಪೀಳಿಗೆಯನ್ನು ಬೆಳೆಯಿಸಿಕೊಳ್ಳುತ್ತಾರೆ.

**ಬಾದ.** — ಬೀರಬಲ್ಲ, ಇದೆಷ್ಟು ಅನೀತಿ !! ಇದನ್ನು ಕೂಡಲೆ ನಿಲ್ಲಿಸಬೇಕು.

**ಬೀರ.** — ಮಹಾರಾಜ, ಇದನ್ನು ನಿಲ್ಲಿಸುವುದು ಬಹಳ ಕಷ್ಟವಾಗಿರುತ್ತದೆ.

**ಬಾದ.** — ಮದುವೆಮಾಡಿಕೊಳ್ಳಲೆಳಸುವವರು ಹಕೀಮರಿಂದ ಗಂಡಸೆಂದು ಯೋಗ್ಯತಾಪತ್ರವನ್ನು ಪಡೆಯಲೇ ಬೇಕೆಂದು ಕಟ್ಟುಮಾಡಿದರೆ ಆಯಿತು. ನಪುಂಸಕರು ಮದುವೆಮಾಡಿಕೊಳ್ಳಲಿಕ್ಕೆ ಅನುವೇ ದೊರೆಯುವುದಿಲ್ಲ. ಈ ಕಟ್ಟಪ್ಪಣೆಯನ್ನು ಮೀರುವವರಾರು ?

**ಬೀರ.** — ಖುದಾವಂದ್, ಕ್ಷಮಿಸಿರಿ, ಇಂತಹ ಕಟ್ಟಳೆಯಿಂದ ಹಕೀಮರು ಹಣಗಾರರಾಗುವರೇ ಹೊರತು ತಮ್ಮ ಬಯಕೆಯು ಕೈಗೂಡಲಾರದು.

**ಬಾದ.** — ಅದು ಹೇಗೆ ? ಹಕೀಮರು ಲಂಚತಿಂದು ಸುಳ್ಳು ಯೋಗ್ಯತಾಪತ್ರವನ್ನು ಕೊಟ್ಟರೆ ಅವರನ್ನು ಕಠಿಣ ಶಿಕ್ಷೆಗೆ ಗುರಿಮಾಡಬಹುದು.

ಬೀರ.—ಮಹಾರಾಜ, ಆಡುವುದು ಹಗುರ; ಮಾಡುವುದು ಬಿಗಿ. ಎಲ್ಲ ಹಕೀಮರೂ ಲಂಚಗುಳಿಗಳಾದರೆ ಸಟೆಯಾದ ಯೋಗ್ಯತಾಪತ್ರವನ್ನು ಸುಳ್ಳೆಂದು ನಿರ್ಣಯಿಸುವ ಬಗೆ ಯಾವುದು? ಹಕೀಮರು ದುಡ್ಡು ತೆಗೆದು ಕೊಂಡು ತಮ್ಮ ವರ್ಗದವರ ತಪ್ಪನ್ನು ಬಚ್ಚಿಡುವರು.

ಬಾದ.—ಹೌದು, ನಿನ್ನ ಮಾತು ಸರಿಯೆಂದು ತೋರುತ್ತದೆ. ಈ ಪ್ರಯತ್ನವು ಗಾಳಿಗುದ್ದಿ ಮೈನೋಯಿಸಿಕೊಂಡಂತೆ ಆಗುವುದು. ನಿನ್ನ ಹೇಳಿ ಕೆಯು ಸಮಂಜಸವಾಗಿರುತ್ತದೆ.

## ೯. ದಾತೃವಿನ ಕಯ್ಯು ಯಾವಾಗಲೂ ಮೇಲೆಯೋ?

ಒಮ್ಮೆ ಬಾದಶಹನ ಮನಸ್ಸಿನಲ್ಲಿ ತಾನು ಕೊಡಗಯ್ಯೆಂಬ ಗರ್ವಹುಟ್ಟಿ,

ಬಾದ.—ಬೀರಬಲ್ಲ! ದಾತೃವಿನ ಕಯ್ಯು ಯಾವಾಗಲೂ ಮೇಲಲ್ಲವೇ?

ಬೀರ.—ಅದೇಕೆ? ಕೊಡಗಯ್ಯ ಕಯ್ಯು ಮೇಲಾದಷ್ಟು ಸಾರಿ ಕೆಳ ಗಾಗುತ್ತದೆ.

ಬಾದ.—ಅದು ಹೇಗೆ? ದಾನ ಬೇಡುವವನು ತನ್ನ ಕಯ್ಯನ್ನು ಒಡ್ಡುತ್ತಾನೆ. ದಾತೃವು ಅವನ ಕಯ್ಯಲ್ಲಿ ದಾನವನ್ನಿಡುತ್ತಾನೆ. ಆದ್ದ ರಿಂದ ದಾತೃವಿನ ಕಯ್ಯು ಯಾವಾಗಲು ಮೇಲೆಯೇ.

ಬೀರ.—ಮಹಾರಾಜ! ತಾವು ದಾನವನ್ನು ಯಾವ ಉದ್ದೇಶದಿಂದ ಕೊಡುತ್ತೀರಿ? ದಾನ ತೆಗೆದುಕೊಂಡವನ ಹರಕೆಯನ್ನು ಪಡೆಯಲಿಕ್ಕಲ್ಲವೇ?

ಬಾದ.—ಅಹುದು, ಆದರೇನಾಯಿತು?

ಬೀರ.—ಅವನು ಹರಸಿ ಮಂತ್ರಾಕ್ಷತೆಯನ್ನು ಕೊಡುವಾಗ ದಾನ ತೆಗೆದುಕೊಂಡವನ ಕೈ ಮೇಲೆಯೂ ದಾತೃವಿನ ಕೈ ಕೆಳಗೂ ಆಗುವುದುಂಟು.

ಬಾದ.—ಬೀರಬಲ್ಲ! ನೀನು ಹೇಳುವುದು ಸರಿಯಾದ ಮಾತು. ಅದು ನನ್ನ ಲಕ್ಷ್ಯಕ್ಕೆ ಬರಲೇ ಇಲ್ಲ. ದಾತೃವಿನ ಕಯ್ಯು ಕೆಳಗಾಗುವು ದುಂಟು. ನೀನು ಒಳ್ಳೇ ಚತುರನು.

## ೧೦. ಬಾದಶಹನ ಬೆಲೆ

ಅಕ್ಬರ ಬಾದಶಹನಿಗೆ ತಾನು ಎಲ್ಲರಿಗಿಂತ ಹೆಚ್ಚಿನವನೆಂಬ ಹೆಮ್ಮೆ ಬಂದುದರಿಂದ,

ಬಾದ.—ಬೀರಬಲ್ಲ! ನನ್ನ ಬೆಲೆಯನ್ನು ಗೊತ್ತುಮಾಡಿ ತಿಳಿಸುವಿಯಾ?

ಬೀರ.—(ಚಕಿತನಾಗಿ) ಮಹಾರಾಜ! ಚಿನಿವಾರರೂ ಸಾಹುಕಾರರೂ ರತ್ನಪರೀಕ್ಷಕರೂ ಬೆಲೆಯನ್ನು ಗೊತ್ತುಮಾಡಬಲ್ಲರು. ಆದ್ದರಿಂದ ಅವರನ್ನು ಕೇಳಿದರೆ, ಅವರು ತಮ್ಮ ಬೆಲೆಯನ್ನು ಗೊತ್ತುಮಾಡಿ ಹೇಳಬಹುದು. ಇದು ನನ್ನಿಂದಾಗುವ ಕೆಲಸವಲ್ಲ. ಅವರನ್ನು ಬೇಕಾದರೆ ಕರೆಯಿಸಬಹುದು.

ಬಾದ.—ಹಾಗಾದರೆ ಅವರನ್ನು ನಾಳೆ ದರಬಾರಿಗೆ ಕರಿಸು.

ಮರುದಿವಸ ದಿಲ್ಲಿಯಲ್ಲಿದ್ದ ಎಲ್ಲ ದೊಡ್ಡ ದೊಡ್ಡ ಸಾಹುಕಾರರೂ ಚಿನಿವಾರರೂ ರತ್ನಪರೀಕ್ಷಕರೂ ದರಬಾರಿಗೆ ಬಂದರು.

ಬಾದ.—(ಅವರನ್ನುದ್ದೇಶಿಸಿ) ನಿಮ್ಮೆಲ್ಲರನ್ನೂ ನೋಡಿ ನನಗೆ ಸಂತೋಷವಾಯಿತು. ನಮ್ಮ ರಾಜಧಾನಿಯಲ್ಲಿ ಇಷ್ಟು ಜನರಿರುತ್ತಾರೆಂಬುದು ನನಗೆ ಗೊತ್ತಿರಲಿಲ್ಲ. ನನ್ನ ಬೆಲೆಯು ಎಷ್ಟಿರುತ್ತದೆಂಬುದನ್ನು ತಿಳಿಕೊಳ್ಳುವ ಲವಲವಿಕೆಯು ನನ್ನಲ್ಲಿ ಉಂಟಾಗಿದೆ. ತಾವು ಒಡವೆಗಳ ಬೆಲೆಯನ್ನು ನಿರ್ಣಯಿಸುವುದರಲ್ಲೇ ತಮ್ಮ ಆಯುಸ್ಸನ್ನು ಕಳೆದುದರಿಂದ ಆ ಕೆಲಸದಲ್ಲಿ ಕುಶಲರಿರುತ್ತೀರಿ. ಆದ್ದರಿಂದ ನನ್ನ ಬೆಲೆಯನ್ನು ಗೊತ್ತುಮಾಡಿ ಹೇಳಿರಿ.

ಬಾದಶಹನ ಈ ಮಾತನ್ನು ಕೇಳಿ ಎಲ್ಲರೂ ದಂಗುಬಡಿದು ನಿಂತರು. ಅವರೊಳಗೊಬ್ಬನು—ನೆಲದೊಡೆಯಾ! ನಮ್ಮನ್ನು ಕರಿಸಿದ ಕಾರಣವು ನಮಗೆ ಈಗ ಮಾತ್ರ ತಿಳಿಯಿತು. ಇದು ಘನವಾದ ಪ್ರಶ್ನವಾದ್ದರಿಂದ ನಮಗೆ ವಿಚಾರಮಾಡಲಿಕ್ಕೆ ಕೆಲಕಾಲವು ಬೇಕು, ಈಗಲೇ ನಮಗೆ ಹೇಳಲಿಕ್ಕಾಗಲಾರದು.

ಬಾದ.—ನಿಮಗೆ ಎಷ್ಟು ದಿನಗಳ ಅವಕಾಶಬೇಕು? ೪।೫ ದಿವಸಗಳ ಬಳಿಕ ಹೇಳುವಿರಾ?

ಚಿನಿವಾರ ಮುಂತಾದವರು--ಸಾರ್ವಭೌಮರೇ! ಇದು ೪।೫ ದಿವಸಗಳಲ್ಲಿ ಬಗೆ ಹರಿಯುವ ಕೆಲಸವಲ್ಲ. ಏನಿಲ್ಲೆಂದರೂ ೧೫ ದಿವಸಗಳುಬೇಕಾಗುವವು. ಅದರೊಳಗೆ ಈ ಕೆಲಸವನ್ನು ಮುಗಿಸುವುದು ನಮ್ಮಿಂದಾಗದು.

ಬಾದ.—ಒಳ್ಳೆಯದು, ನೀವು ಬೇಡಿದಂತೆ ೧೫ ದಿವಸಗಳ ಅವಧಿಯನ್ನು ಕೊಟ್ಟಿರುತ್ತೇನೆ. ೧೬ನೆಯ ದಿವಸ ನೀವು ಬಂದು ನನಗೆ ತಿಳಿಸಿರಿ. ಆ ದಿವಸ ನಮ್ಮ ಉದ್ಯಾನದ ಸಭಾಮಂಟಪದಲ್ಲಿ ಸಭೆಯು ನೆರೆಯುವುದು. (ಅಬುಲ್‌ಫಜಲ್ಲನ ಕಡೆಗೆ ನೋಡಿ) ತಾವು ಆ ಸಭೆಯ ವ್ಯವಸ್ಥೆಯನ್ನು ಸರಿಯಾಗಿ ಮಾಡಿಸಿರಿ.



ಅಬುಲ್‌ಫಜಲ್

ಬಾದಶಹನಿಂದ ಬೀಳ್ಕೊಂಡ ಚಿನಿವಾರ ಮುಂತಾದವರು ತಲೆ ತಗ್ಗಿಸಿ ಕೊಂಡು ಮನೆಗೆ ಹೋಗಿ, ಎಣಿಕೆಯಲ್ಲಿ ಮುಳುಗಿದರು. ಅವರಿಗೆ ಏನು ಮಾಡಬೇಕೆಂಬುದು ಗೊತ್ತಾಗಲಿಲ್ಲ. ಆದ್ದರಿಂದ ಮರುದಿವಸವೇ ಅವರು ಬೀರಬಲ್ಲನಿಗೆ ಶರಣುಹೋಗಿ ತಮ್ಮ ತೊಂದರೆಗಳನ್ನೆಲ್ಲ ತೋಡಿಕೊಂಡರು.

ಬೀರ.—ಇದು ಬಲು ಬಿಕ್ಕಟ್ಟಿನ ಪ್ರಶ್ನವು. ಇದಕ್ಕೆ ಏನಾದರೊಂದು ತೋಡು (ಉಪಾಯ) ತೆಗೆಯಲು ಬೇಕು. ನಾನು ಈ ಬಗ್ಗೆ ಅಳೆದು ಹಾಕುವೆನು (ವಿಚಾರ ಮಾಡುವೆನು). ನೀವು ಈಗ ಮನೆಗೆ ಹೋಗಿರಿ. ನಿಮ್ಮೊಳಗೆ ಹಿರಿಯರಾದವರು ಹದಿನೈದನೆಯ ದಿವಸ ಬನ್ನಿರಿ, ಆಗ ನಾನು ಏನು ಮಾಡಬೇಕೆಂಬುದನ್ನು ಹೇಳುವೆನು.

ಚಿನಿವಾರ ಮು.—ಮಹಾರಾಜ! ನಮಗೆ ಇದೊಂದು ದೊಡ್ಡ ಗಂಡಾಂತರ ಬಂದಿರುತ್ತದೆ. ಇದರಿಂದ ನಮ್ಮನ್ನು ಕಾಪಾಡುವ ಭಾರವು ತಮ್ಮನ್ನು ಕೂಡಿರುತ್ತದೆ. ಹೇಗಾದರೂ ಮಾಡಿ ನಮ್ಮನ್ನು ಕಾಪಾಡಿರಿ. ತಾವು ಮಾಡಿದ ಒಳಿತನ್ನು ನಾವು ಸಾಯುವ ವರೆಗೆ ಮರೆಯಲಿಕ್ಕಿಲ್ಲ.

ಬೀರ.—ನೀವು ಏನೂ ಚಿಂತೆ ಮಾಡಬೇಡರಿ. ನಿಶ್ಚಿಂತೆಯಾಗಿರಿ. ಏನಾದರೊಂದು ಹರವನ್ನು ಹುಡುಕುವೆನು. ನೀವು ಸ್ವಸ್ಥಚಿತ್ತರಾಗಿರಿ.

ಬೀರಬಲ್ಲನ ಈ ಭರವಸೆಯಿಂದ ಸಾಹುಕಾರರ ತಲೆಯ ಮೇಲಿನ ಹೊರೆ ಇಳಿದಂತಾಯಿತು. ಏಕೆಂದರೆ ಅವನು ಕೊಟ್ಟಮಾತಿಗೆ ಎಂದೂ ತಪ್ಪುವವನಲ್ಲೆಂದು ಹೆಸರಾಗಿದ್ದನು. ಇತ್ತ ಬೀರಬಲ್ಲನು ಟಂಕಸಾಲೆಯವನಿಗೆ ಹೇಳಿ ಒಂಬು ರತಿ ಹೆಚ್ಚು ತೂಕವುಳ್ಳ ಒಂದು ಮೊಹರವನ್ನು (ಚಿನ್ನದ ನಾಣ್ಯ) ಮಾಡಿಸಿ ತಂದು ಮನೆಯಲ್ಲಿಟ್ಟನು. ಹದಿನೈದನೆಯ ದಿವಸ ಸಾಹುಕಾರರು ಬರಲು,

ಬೀರ.—ಬಾದಶಹನ ಬೆಲೆಯನ್ನು ಗೊತ್ತುಪಡಿಸಿದ್ದೇನೆ. ಈ ಮೊಹರವನ್ನು ತೆಗೆದುಕೊಳ್ಳಿರಿ. ಇದು ಉಳಿದ ಮೊಹರುಗಳಿಗಿಂತ ೧ ರತಿ ಹೆಚ್ಚು ತೂಕವಿರುತ್ತದೆ. ಬಾದಶಹನ ಬೆಲೆಯು ಈ ಮೊಹರಿನಷ್ಟೇ ಇರುತ್ತದೆ.

**ಸಾಹುಕಾರ**—ಮಹಾರಾಜ! ಇದೇನು? ಇಷ್ಟು ತುಸು ಬೆಲೆಯೆಂದು ಹೇಳಿದರೆ ಬಾದಶಹರು ಸಿಟ್ಟಿಗೇಳಲಿಕ್ಕಿಲ್ಲವೇ?

**ಬೀರ.**—ನೀವು ಅದರ ಗೊಡವೆಗೆ ಹೋಗಬೇಡರಿ. ನಾನೆಲ್ಲ ಅದನ್ನು ನೋಡಿಕೊಳ್ಳುವೆನು. ನೀವು ೩೦೦।೪೦೦ ವರಹಗಳೊಳಗೆ ಈ ವರಹವನ್ನು ಬೆರಕಿಮಾಡಿಕೊಂಡು ಸರಿಯಾದ ಹೊತ್ತಿಗೆ ಸಭೆಗೆ ಬಂದು, ಒಂದೊಂದೇ ವರಹವನ್ನು ತೂಗುತ್ತ ಕೂಡಿರಿ. ನಾನು ಕೊಟ್ಟ ವರಹದ ತೂಕವು ಹೆಚ್ಚು ಇರುವುದು ಕಂಡ ಕೂಡಲೆ, ಎಲ್ಲರು ಬಾದಶಹನ ಬೆಲೆಯು ಗೊತ್ತಾಯಿತೆಂದು ಕೂಗಿ ಚಪ್ಪಾಳೆ ಬಡಿಯಿರಿ. ನಿಮ್ಮನ್ನು ನೋಡಿ ಎಲ್ಲ ಜನರೂ ಸಂತೋಷದಿಂದ ಚಪ್ಪಾಳೆ ಬಡಿಯುವರು. ಆ ಗದ್ದಲವು ತೀರಿದ ಬಳಿಕ ನಿಮ್ಮೊಳಗೆ ಒಬ್ಬ ಮುದುಕನು ಆ ಮೊಹರವನ್ನು ತೆಗೆದುಕೊಂಡು ಸಿಂಹಾಸನದ ಬಳಿಗೆ ಹೋಗಿ, ದಂಡವತ್ಪ್ರಣಾಮ ಮಾಡಿ ಆ ಮೊಹರವನ್ನು ಬಾದಶಹನ ಮುಂದಿಟ್ಟು "ಸರಕಾರ್! ಇದೇ ತಮ್ಮ ಬೆಲೆಯು" ಎಂದು ಹೇಳಿ, ಕೈಮುಗಿದುಕೊಂಡು ನಿಲ್ಲಲಿ. ಬಾದಶಹನು ಮತ್ತೇನಾದರೂ ಕೇಳಿದರೆ ಸಮಯೋಚಿತವಾದ ಉತ್ತರವನ್ನು ಕೊಡಿರಿ.

**ಸಾಹುಕಾರ**—ಮಹಾರಾಜ! ನಮ್ಮ ಪರವಾಗಿ ತಾವೇ ಮಾತಾಡಿದರೆ ನಮ್ಮ ಜೀವ ಉಳಿಯಬಹುದು. ಇಲ್ಲವಾದರೆ ಬಾದಶಹರು ಸಿಟ್ಟಿಗೆದ್ದು ಏನು ಮಾಡುವರೋ ತಿಳಿಯದು.

**ಬೀರ.**—ನೀವು ಇಷ್ಟು ಹೆದರುವ ಕಾರಣವಿಲ್ಲ. ನಾನು ನಿಮಗೆ ಹೇಳಿಕೊಟ್ಟ ಹೂಟದ ಸಂಗತಿಯು ಬಾದಶಹನಿಗೆ ತಿಳಿಯಕೂಡದು. ಅದು ತಿಳಿದರೆ, ನಾವು ಮಾಡಿದ್ದೆಲ್ಲ ಮಸಣಿಸಿ ಹೋಗುವುದು. ಆದಕಾರಣ ಬಾದಶಹನ ಮುಂದೆ ನಿಂತಾಗ ನೀವು ನನ್ನ ಕಡೆಗೆ ನೋಡಕೂಡದು. ಅವನು ನನ್ನನ್ನು ಏನಾದರೂ ಪ್ರಶ್ನಮಾಡಿದರೆ, ನಾನು ನಿಮಗೆ ಅನುಕೂಲವಾಗಿ ಮಾತಾಡುವೆನು. ನೀವು ಗಾಬರಿಯಾಗಬೇಡರಿ. ಕಾಳಜಿ ಮಾಡಲಿಕ್ಕೆ ಕಾರಣವಿಲ್ಲ. ಎಲ್ಲವೂ ಲೇಸಿನಲ್ಲಿ ಕೊನೆಗಾಣುವುದು.

ಮರುದಿನ ಗೊತ್ತಾದ ಹೊತ್ತಿಗೆ ಸಭೆಯು ನೆರೆಯಿತು. ಬಾದಶಹನ ಬೆಲೆಯನ್ನು ಗೊತ್ತುಮಾಡುವ ಕೌತುಕವನ್ನು ನೋಡಲಿಕ್ಕೆ ಸಾವಿರಾರು



ಅಕ್ಬರ ಬಾದಶಹ

ಜನರು ಬಂದಿದ್ದರು. ಎಲ್ಲ ಸರದಾರರೂ ತಂತಮ್ಮ ಸ್ಥಳಗಳಲ್ಲಿ ಕುಳಿತಿದ್ದರು. ಬಾದಶಹನು ತನ್ನ ಗದ್ದಿಗೆಯಲ್ಲಿ ಒಪ್ಪುತ್ತಿದ್ದನು. ನಟ್ಟನಡುವೆ ಸಾಹುಕಾರ ಚಿನಿವಾರರು ಕೂಡಲಿಕ್ಕೆ ಎತ್ತರವಾದ ಜಗಲಿಯನ್ನು ಮಾಡಿದ್ದರು. ಅವರು ಮಾಡುವುದು ಎಲ್ಲ ಪ್ರೇಕ್ಷಕರಿಗೂ ಕಾಣಿಸುತ್ತಿತ್ತು. ಅವರು ಒಂದೊಂದೇ ವರಹವನ್ನು ತೂಗತೊಡಗಿದರು. ಅವರು ಏನು ಕಾರಣ ಹೀಗೆ ತೂಗುತ್ತಾರೆಂಬುದು ಜನರಿಗೆ ಗೊತ್ತಾಗದ್ದರಿಂದ ಅವರು ತಂತಮ್ಮೊಳಗೆ ಮಾತಾಡಲಾರಂಭಿಸಿದರು. ಸಭೆಯಲ್ಲೆಲ್ಲ ಗದ್ದಲವೇ ಹರಡಿತು. ರಾಜಭಟರು

ಆಗಿಂದಾಗ “ಸುಮ್ಮನಾಗಿರಿ, ಸುಮ್ಮನಾಗಿರಿ” ಎಂದು ಒತ್ತಿ ಒದರುತ್ತಿದ್ದರು. ಅವರು ಒದರಿದಾಗ ಸುಮ್ಮನಾಗಿ ಜನರು ಮತ್ತೆ ಗುಣಗುಟ್ಟುತ್ತಿದ್ದರು. ಈ ಗೊಂದಲದೊಳಗೆ ಒಮ್ಮಿಂದೊಮ್ಮೆ (ಅಕಸ್ಮಾತ್ತಾಗಿ) ವರಹಗಳನ್ನು ತೂಗುವ ಚಿನಿವಾರನು “ಗೊತ್ತಾಯಿತು! ಗೊತ್ತಾಯಿತು” ಎಂದು ಗಟ್ಟಿಯಾಗಿ ಹೇಳಿದನು. ಒಡನೆ ಉಳಿದ ಚಿನಿವಾರರು ಚಪ್ಪಾಳೆಯನ್ನು ಬಾರಿಸಿದರು. ಸಭಿಕರೆಲ್ಲ ಚಪ್ಪಾಳೆ ಹೊಡೆದು ಚಿನಿವಾರರ ಜಗಲಿಯನ್ನು ಎವೆಯಿಕ್ಕದೆ ನೋಡತೊಡಗಿದರು. ಒಬ್ಬ ಚಿನಿವಾರನು ಎದ್ದು ಗದ್ದಿಗೆಯ ಕಡೆಗೆ ಹೋಗಿ—

ಮಹಾರಾಜ! ನಾವೆಲ್ಲರೂ ಕೂಡಿ ಕಳೆದ ೧೫ ದಿವಸ ಒಂದೇ ಸವನೇ ಎಣಿಕೆಹಾಕಿ, ಶ್ರಮಪಟ್ಟದ್ದರ ಫಲವು ಮಹಾರಾಜರ ಕೃಪೆಯಿಂದ ಈಗ ತಾನೇ ದೊರೆಯಿತು. ಇಗೊ ನೋಡಿರಿ. ಈ ವರಹವೇ ತಮ್ಮ ಬೆಲೆಯು, ಎಲ್ಲ ವರಹಗಳಲ್ಲಿ ಇದು ಹೆಚ್ಚಿನದಿದ್ದಂತೆ ತಾವು ಎಲ್ಲ ಮನುಷ್ಯರಲ್ಲಿ ಹೆಚ್ಚಿನವರಾಗಿರುತ್ತೀರಿ. ಈ ವರಹದ ಬೆಲೆಯೂ ತಮ್ಮ ಬೆಲೆಯೂ ಒಂದೇ.

ಬಾದ.—ಇದೇನು? ನನ್ನ ಬೆಲೆ ಒಂದು ವರಹ ಮಾತ್ರವೇ? ಬೀರಬಲ್ಲ! ಇವರ ನಿರ್ಣಯವು ಎಂತಹದು?

ಬೀರ.—ಮಹಾರಾಜ! ಹಾಗಲ್ಲ. ಅವರ ಹೇಳಿಕೆಯ ಇಂಗಿತವು ಬೇರೆ. ವರಹಗಳಲ್ಲಿ ಈ ವರಹವು ಶ್ರೇಷ್ಠವಾಗಿರುವಂತೆ ತಾವು ಮನುಷ್ಯರೊಳಗೆ ಶ್ರೇಷ್ಠರು. ಈ ವರಹದ ತೂಕವು ತುಸು ಹೆಚ್ಚಿದ್ದಂತೆ ತಾವು ಉಳಿದವರಿಗಿಂತ ತುಸು ಹೆಚ್ಚಿನವರು. ತಾವು ಮನುಷ್ಯರೆಂದು ಒಡಂಬಡುತ್ತೀರಷ್ಟೆ. ಮನುಷ್ಯರಲ್ಲಿರುವ ಕೆಲವು ಗುಣಾತಿಶಯಗಳು ತಮ್ಮಲ್ಲಿ ತುಸು ಅಂಶದಿಂದ ಹೆಚ್ಚಾಗಿರುವುದೇ ತಮ್ಮ ಹೆಚ್ಚಳದ ಲಕ್ಷಣವು.

ಬೀರಬಲ್ಲನ ಮಾತನ್ನು ಕೇಳಿ ಬಾದಶಹನ ಹೆಮ್ಮೆಯು ತಗ್ಗಿತು. ಅವನಲ್ಲಿ ವಿವೇಕ ಹುಟ್ಟಿತು. ತಾನು ಬಹಳ ಹೆಚ್ಚಿನವನೆಂಬ ಜಂಬವು ಅಡಗಿತು. ಹೆಚ್ಚಿಗೆ ಕೇಳಿದರೆ, ತನ್ನ ಹೆಡ್ಡತನವು ಹೊರಬಿದ್ದು ನಗೆಗೇಡಾಗಬಹುದೆಂಬ ಹೆದರಿಕೆಯು ಹುಟ್ಟಿತು. ಆದ್ದರಿಂದ ಅವನು ಜಾಣನಾದ್ದರಿಂದ ತನ್ನ ದುರಹಂಕಾರವನ್ನು ಹತ್ತಿಕ್ಕಿಟ್ಟು ನಗೆಮೋರೆಯಿಂದ—

ಸಾಹುಕಾರರೇ, ನೀವು ನನ್ನ ಬೆಲೆಯನ್ನು ಸರಿಯಾಗಿ ಕಟ್ಟಿದ್ದರಿಂದ ನನಗೆ ಬಹಳ ಸಂತೋಷವಾಯಿತು. ನನ್ನ ಇಚ್ಚಿಗರು ನನ್ನನ್ನು ಅಳತೆ ಗೆಟ್ಟು ಹೊಗಳಿ ಜನರಲ್ಲಿ ತಪ್ಪು ತಿಳಿವಳಿಕೆಯನ್ನು ಹುಟ್ಟಿಸತೊಡಗಿದ್ದಾರೆ. ಅದನ್ನು ಬೆಳೆಯಗೊಡಬಾರದೆಂಬ ಉದ್ದೇಶದಿಂದ ನಾನು ಈ ಸಭೆಯನ್ನು ಮಾಡಿಸಿದೆನು. ಈ ಸಭೆಯಲ್ಲಿ ನನ್ನ ಬೆಲೆಯು ಉಳಿದವರಿಗಿಂತ ತುಸು ಮಾತ್ರ ಹೆಚ್ಚಿರುತ್ತದೆಂದು ನಿರ್ಣಯವಾದ್ದರಿಂದ, ನನಗೆ ತುಂಬಾ ಸಂತೋಷ ವಾಯಿತು. ಇನ್ನು ಮುಂದೆ ಸ್ವಾರ್ಥಪರರಾದ ಜನರು ನನ್ನನ್ನು ಅಳತೆ ಗೆಟ್ಟು ಹೊಗಳಲಾರರು. ಹೊಗಳಿದರೆ ನಾನು ಅವರನ್ನು ಜರೆದು ನಾಚಿ ಸುವೆನು. ಆದ್ದರಿಂದ ನೀವು ನನ್ನ ಬೆಲೆಯನ್ನು ಗೊತ್ತುಮಾಡಿ ನನ್ನ ಮೇಲೆ ಬಹಳ ಉಪಕಾರ ಮಾಡಿದಿರಿ. ಆದಕಾರಣ ಈ ನನ್ನ ಉಡುಗೊರೆ ಯನ್ನು ದಯವಿಟ್ಟು ತೆಗೆದುಕೊಳ್ಳಿರಿ.

ಈ ಮೇರೆಗೆ ಮಾತಾಡಿ ಬಂದ ಚಿನಿವಾರ, ಸಾಹುಕಾರ, ರತ್ನಪರೀ ಕ್ಷಕರಿಗೆ ಬೆಲೆಯುಳ್ಳ ಅರಿವೆಗಳನ್ನು ಕೊಟ್ಟು, ಎಲ್ಲರಿಗೂ ಹೂವೀಳೆಯಗಳು ಮುಟ್ಟಿದ ಬಳಿಕ ಸಭೆಯನ್ನು ಮುಗಿಸಿದನು.

## ೧೧. ದೇವರು ಮಾಡಿದ ವಸ್ತುಗಳು ಹೆಚ್ಚಿನವೋ ಮನುಷ್ಯರು ಮಾಡಿದ ವಸ್ತುಗಳು ಹೆಚ್ಚಿನವೋ?

ಒಂದು ದಿವಸ ಬಾದಶಹನು ತನ್ನ ಸರದಾರರೊಡನೆ ಮಾತಾಡುತ್ತ ಕುಳಿತಿರುವಾಗ ಮಾತಿಗೆ ಮಾತು ಹೊರಟು, ಸೃಷ್ಟ ಮತ್ತು ಕೃತ್ರಿಮ ವಸ್ತು ಗಳ ಬೆಲೆಯ ವಿಷಯವು ಹೊರಟಿತು.

ಬಾದ.—ಸೃಷ್ಟಪದಾರ್ಥಗಳ ಬೆಲೆ ಹೆಚ್ಚೋ ಕೃತ್ರಿಮ ಪದಾರ್ಥಗಳ ಬೆಲೆ ಹೆಚ್ಚೋ?

ಸರದಾರರು—ಖುದಾವಂದ್! ಮನುಷ್ಯರು ಮಾಡಿದ ವಸ್ತುಗಳು ದೇವರು ನಿರ್ಮಿಸಿದ ವಸ್ತುಗಳನ್ನು ಸರಿಗಟ್ಟಲಾರವು. ನೈಸರ್ಗಿಕ ವಸ್ತು ಗಳ ಅಂದಚಂದವೂ ಇನಿಯೂ ಇಂಪೂ ಕೃತ್ರಿಮ ಪದಾರ್ಥಗಳಿಗೆ ಎಂದೂ

ಬರಲಾರವು. ಆದ್ದರಿಂದ ದೇವರು ಮಾಡಿದ ವಸ್ತುಗಳ ಬೆಲೆಯೇ ಹೆಚ್ಚಿ ರುತ್ತದೆ. ಇದಕ್ಕೇನೂ ಸಂದೇಹವಿಲ್ಲ.

ಬಾದ.— ಬೀರಬಲ್ಲ! ನೀನೇಕೆ ಸುಮ್ಮನೆ ಕುಳಿತಿರುತ್ತೀ? ನಿನ್ನ ಅಭಿ ಪ್ರಾಯವೇನು?

ಬೀರ.— ಮಹಾರಾಜರ ಅಭಿಪ್ರಾಯವು ತಿಳಿದ ಬಳಿಕ ನನ್ನ ಅಭಿಪ್ರಾ ಯುವನ್ನು ಹೇಳುವೆನು.

ಬಾದ.— ನನ್ನ ಅಭಿಪ್ರಾಯವು ಈ ಸರದಾರರ ಅಭಿಪ್ರಾಯದಂತೇ ಇರುತ್ತದೆ. ಕೃತ್ರಿಮ ಪದಾರ್ಥಗಳು ಎಷ್ಟು ಉತ್ತಮವಾದರೂ ಸೃಷ್ಟ ಪದಾರ್ಥಗಳನ್ನು ಹೋಲಲಾರವು. ಆದ್ದರಿಂದ ಸೃಷ್ಟ ಪದಾರ್ಥಗಳ ಬೆಲೆ ಯೇ ಹೆಚ್ಚು.

ಬೀರ.— ಮಹಾರಾಜ! ನಾನು ಈ ಸರದಾರರಷ್ಟು ಜಾಣನಲ್ಲ. ನಾನು ಮಂದಬುದ್ಧಿಯು. ನನಗೆ ತಿಳಿವಳಿಕೆಯು ಕಡಮೆ. ಆದ್ದರಿಂದ ನನ್ನ ತಪ್ಪನ್ನು ದಯವಿಟ್ಟು ಹೊಟ್ಟೆಯೊಳಗೆ ಹಾಕಿಕೊಳ್ಳಬೇಕು.

ಬಾದ.— ಬೀರಬಲ್ಲ! ನೀನೇನು ತಪ್ಪು ಮಾಡಿರುತ್ತೀ?

ಬೀರ.— ಮಹಾರಾಜ! ನನ್ನ ಅಭಿಪ್ರಾಯವು ತಮ್ಮ ಅಭಿಪ್ರಾಯಕ್ಕೆ ತೀರ ಭಿನ್ನವಾಗಿರುತ್ತದೆ. ನನ್ನ ಮನಸ್ಸಿಗೆ ವಿರುದ್ಧವಾಗಿ ತಮ್ಮಂತೆ ನಾನು ಹೇಳಲಾರೆನು. ಇದೇ ನನ್ನ ಅಪರಾಧವು. ಮಹಾರಾಜರು ದಯವಿಟ್ಟು ಕ್ಷಮಿಸಬೇಕು.

ಬಾದ.— ಬೀರಬಲ್ಲ! ನನ್ನಂತೆ ಹೇಳೆಂದು ನಾನು ನಿನಗೆ ಎಂದಾದರೂ ಜುಲುಮೆ ಮಾಡಿರುತ್ತೇನೆಯೇ? ಹೇಳು ನೋಡೋಣ. ನಿನ್ನ ನಿಜವಾದ ಅಭಿಪ್ರಾಯವನ್ನು ತಿಳಿದುಕೊಳ್ಳುವುದೇ ನನ್ನ ಮುಖ್ಯವಾದ ಉದ್ದೇಶವು. ನಿನ್ನ ದಿಟವಾದ ಮಾತಿನಿಂದ ನನ್ನ ತಪ್ಪು ತಿಳಿವಳಿಕೆಗಳು ಎಷ್ಟೋ ಇಲ್ಲದಂ ತಾಗಿವೆ. ಆದ್ದರಿಂದ ಹೆದರದೆ ನಿನ್ನ ನಿಜವಾದ ಅಭಿಪ್ರಾಯವನ್ನು ಕೊಡು.

ಬೀರ.— ಮಹಾರಾಜ! ಹಾಗಾದರೆ, ಸೃಷ್ಟಪದಾರ್ಥಗಳಿಗಿಂತಲೂ ಕೃತ್ರಿಮ ಪದಾರ್ಥಗಳಿಗೆ ಬೆಲೆ ಹೆಚ್ಚೆಂದು ನನ್ನ ಅಭಿಪ್ರಾಯವು. ಏಕೆಂದರೆ

ದೇವರು ನಮ್ಮ ಉಪಯೋಗದ ಬಗ್ಗೆ ಪದಾರ್ಥಗಳನ್ನು ನಿರ್ಮಿಸಿ ನಮಗೆ ಅನಾಯಾಸವಾಗಿ ದೊರೆಯುವಂತೆ ಮಾಡಿಟ್ಟಿದ್ದಾನೆ. ಆದರೆ ಕೃತ್ರಿಮ ಪದಾರ್ಥಗಳು ಹಾಗಲ್ಲ. ಮನುಷ್ಯನು ತನಗೆ ಪ್ರತಿಫಲ ದೊರೆಯಬೇಕೆಂಬ ಉದ್ದೇಶದಿಂದ ಶ್ರಮಪಟ್ಟು ಅವನ್ನು ಮಾಡುತ್ತಾನೆ.

ಬಾದ.— ಬೀರಬಲ್ಲ! ದೇವರು ಮಾಡಿದ ವಸ್ತುಗಳು ಹೆಚ್ಚು ಚೆಲುವಾದವಲ್ಲವೇ?

ಬೀರ.— ಮಹಾರಾಜ! ತಾವು ಹೇಳುವುದು ನಿಜ. ಆದರೆ ಕೃತ್ರಿಮ ಪದಾರ್ಥಗಳು ಕೃತಾರ್ಥವಾಗಿ ಮಾಡಿದುವಲ್ಲ. ಅವು ಹಣದ ಉದ್ದೇಶದಿಂದ ಮಾಡಿದುವು ಮತ್ತು ಅವಕ್ಕೆ ಜಾಣ್ಮೆಯೂ ದುಡಿತವೂ ಬಹಳವಾಗಿ ಬೇಕಾಗುತ್ತವೆ. ಉದಾಹರಣಾರ್ಥವಾಗಿ, ದೇವರು ಮಾಡಿದ ಹೂವು ಹಣ್ಣುಗಳಿಗೆ ಒಂದು ವರಹ ಕೊಟ್ಟರೆ, ಅಂತಹವೇ ಮತ್ತು ಅಷ್ಟೇ ಕೃತ್ರಿಮ ಹೂಹಣ್ಣುಗಳಿಗೆ ೫೦/೬೦ ವರಹಗಳನ್ನು ಕೊಡುತ್ತೀರಿ. ಇದು ತಮಗೆ ಗೊತ್ತಿದ್ದ ಮಾತೇ ಆಗಿದೆ. ಇದರಲ್ಲೇನೂ ಅರಿದಿಲ್ಲ.

ಬಾದ.— ಬೀರಬಲ್ಲ! ನೀನು ಬಹು ಸತ್ಯವಾದಿ. ನಿನ್ನ ವಿಚಾರಗಳು ಗಂಭೀರವಾದವು. ನಿನ್ನ ದೂರದರ್ಶಕತ್ವವು ಬಣ್ಣಿಸಲಿಕ್ಕೆ ತಕ್ಕಂತಹದೇ ಸರಿ. ಉಳಿದವರೆಲ್ಲ ನನ್ನಂತೆ ಮಾತಾಡಿ ನನ್ನನ್ನು ಉಬ್ಬಿಸಿ ಕೆಡಿಸುತ್ತಾರೆ. ನೀನೊಬ್ಬನು ಮಾತ್ರ ನಾನು ಬಿದ್ದ ಅಡ್ಡಹಾದಿಯಿಂದ ತಿರುಗಿಸಿ, ನನ್ನನ್ನು ಸರಿಯಾದ ದಾರಿಯನ್ನು ಹಿಡಿಸುತ್ತಿ. ನೀನು ಮಾಡುವ ಈ ಉಪಕಾರವನ್ನು ನಾನೆಂದಿಗೂ ಮರೆಯಲಾರೆನು.

## ೧೨. ಯಾರ ಮಕ್ಕಳು ಹೆಚ್ಚು ಮುದ್ದಾದುವು?

ಒಂದು ದಿವಸ ಬಾದಶಹ ಬೀರಬಲ್ಲರು ಮಾತಾಡುತ್ತ ಕುಳಿತಿರುವಾಗ, ಸೃಷ್ಟಜಡಪದಾರ್ಥಗಳ ಅಂದದ ವಿಚಾರವು ಮುಗಿದ ಬಳಿಕ, ಮನುಷ್ಯನ ಚಂದದ ಬಗ್ಗೆ ಮಾತು ಹೊರಟಿತು.

ಬಾದ.— ಬೀರಬಲ್ಲ! ಈ ಜಗತ್ತಿನಲ್ಲಿ ಯಾವ ವರ್ಗದವರ ಮಕ್ಕಳು ಹೆಚ್ಚು ಮುದ್ದಾದವರು?

ಬೀರ.—ಮಹಾರಾಜ! ಈ ಪ್ರಶ್ನೆಗೆ ಉತ್ತರ ಕೊಡುವುದು ಸಾಧ್ಯವಲ್ಲ.

ಬಾದ.—ಅದೇಕೆ? ಚೆಲುವರಿಗೆ ಎಲ್ಲರು ಚೆಲುವರೆನ್ನುವರು. ಚೆಲುವರು ಕುರೂಪಿಗಳಾಗಲಾರರು ಮತ್ತು ಕುರೂಪಿಗಳು ಚೆಲುವರಾಗ ಲಾರರು.

ಬೀರ.—ಮಹಾರಾಜ! ತಾವು ಹೇಳುವುದು ಸರಿಯಾದ್ದು. ಆದರೆ ಜನರ ರುಚಿಯು ಭಿನ್ನವಾಗಿರುತ್ತದೆ. ಒಂದು ದೇಶದವರ ರುಚಿಯು ಮತ್ತೊಂದು ನಾಡಿನವರ ರುಚಿಯನ್ನು ಹೋಲುವುದಿಲ್ಲ. ಒಂದು ವರ್ಗದ ವರ ಅಥವಾ ಜಾತಿಯವರ ರುಚಿಯು ಮತ್ತೊಂದು ವರ್ಗದವರ ಅಥವಾ ಜಾತಿಯವರ ರುಚಿಗೆ ಬೇರೆಯಾಗಿರುತ್ತದೆ. ಆದ್ದರಿಂದ ಕೆಲವರಿಗೆ ಚೆಲು ವರಾದವರು ಬೇರೆಯವರಿಗೆ ಚೆಲುವರಾಗಿ ತೋರಲಿಕ್ಕಿಲ್ಲ.

ಬಾದ.—ಬೀರಬಲ್ಲ! ನಿನ್ನ ಹೇಳಿಕೆಯು ಸರಿಯಾದ್ದೆಂದು ತೋರು ವುದಿಲ್ಲ. ದೊಡ್ಡ ದೊಡ್ಡ ತತ್ವವಿಚಾರಗಳಲ್ಲಿ ಭಿನ್ನಮತವಿರಬಹುದು. ರೂಪಚೆಲುವಿಕೆಗಳ ಬಗ್ಗೆ ಭಿನ್ನಾಭಿಪ್ರಾಯವಿರಲಾರದು.

ಬೀರ.—ಮಹಾರಾಜ! ಇದರಲ್ಲಿಯೂ ಭಿನ್ನಾಭಿಪ್ರಾಯವಿರುತ್ತದೆಂದು ನನ್ನ ಅಲ್ಪಮತಿಗೆ ತೋರುತ್ತದೆ.

ಬಾದ.—ಬೀರಬಲ್ಲ! ನಿನ್ನ ಹೇಳಿಕೆಯು ನನಗೆ ಸ್ಪಷ್ಟವಾಗಿ ತಿಳಿಯ ಲೊಲ್ಲದು. ಅದನ್ನು ನನಗೆ ಪ್ರತ್ಯಕ್ಷವಾಗಿ ತಿಳಿಸಿಕೊಡು. ತರುವಾಯ ಒಡಂಬಡುವೆನು.

ಬೀರ.—ಮಹಾರಾಜ! ಇಂತಹ ಹುಡುಗನನ್ನು ಹುಡುಕಿ ತರಲಿಕ್ಕೆ ಒಬ್ಬ ಜಾಣನಾದ ಅಧಿಕಾರಿಯನ್ನು ಕಳುಹಿದರೆ, ನಾನು ಹೇಳಿದ ಮಾತು ತಮ್ಮ ಪ್ರತ್ಯಯ (ಅನುಭವ)ಕ್ಕೆ ಬರಬಹುದೆಂದು ತೋರುತ್ತದೆ.

ಬಾದ.—ಯಾರನ್ನು ಕಳುಹಿದರೆ ಈ ಕೆಲಸವು ಸರಿಯಾಗಿ ನಡೆಯ ಬಹುದು?

ಬೀರ.—ತಮ್ಮ ಆಳಾದ ಮಲೀಕಸಿದ್ದಿಯು ಜಾಣನೂ ಎಚ್ಚರವುಳ್ಳ ವನೂ ಇರುತ್ತಾನೆ. ಅವನು ಈ ಕೆಲಸಕ್ಕೆ ತಕ್ಕವನೆಂದು ನನಗೆ ತೋರು ತ್ತದೆ.

ಬಾದ.—ಆಹಾ! ಅವನನ್ನು ಕಳುಹಿಸಬಹುದು. (ಆಳುಗಳಿಗೆ) ಯಾರಿದ್ದೀರೊ ಅಲ್ಲಿ? ಮಲೀಕಸಿದ್ದಿಯನ್ನು ಕರೆದುಕೊಂಡು ಬನ್ನಿರಿ.

ಮಲೀಕಸಿದ್ದಿಯು ಬಂದು ನೇಮದಂತೆ ಕುರ್ನಿಸಾತ (ಸಲಾಮು) ಮಾಡಿ ಕಯ್ಜೋಡಿಸಿಕೊಂಡು ನಿಂತ ಬಳಿಕ,

ಬೀರ.—ಮಲೀಕಸಾಹೇಬ್, ಬಾದಶಹರ ಹತ್ತಿರ ಯಾವಾಗಲೂ ಇರಲಿಕ್ಕೆ ಒಬ್ಬ ಬಲು ಚೆಲುವನಾದ ಹುಡುಗನು ಬೇಕಾಗಿರುತ್ತಾನೆ. ಅಂತಹ ಹುಡುಗನನ್ನು ಹುಡುಕಿ ತಂದರೆ, ಬಾದಶಹರು ಇನಾಮು ಕೊಡುವರು. ಹುಡುಗನು ೧೦|೧೮ ವಯಸ್ಸಿನವನಿರಬೇಕು. ಯಾವ ಜಾತಿಯವನಾದರೂ ಅಡ್ಡಿಯಿಲ್ಲ. ಹುಡುಗ ಮಾತ್ರ ಅತಿ ಸುಂದರನಾಗಿರಬೇಕು.

ಮಲೀಕ.—ಮಹಾರಾಜ! ನಾನು ಆದಷ್ಟು ಯತ್ನಮಾಡಿ ಅತಿ ಚೆಲುವನಾದ ಒಬ್ಬ ಹುಡುಗನನ್ನು ಗೊತ್ತುಹಚ್ಚಿ ಕರೆಕೊಂಡು ಬರುವೆನು. ಧನಿಯರು ಅವನು ಬೇಡಿದಷ್ಟು ಸಂಬಳ ಕೊಡುವರಲ್ಲವೇ?

ಬೀರ.—ನೋಡು; ನಿನಗೆ ಯೋಗ್ಯಕಂಡ ಸಂಬಳವನ್ನು ಗೊತ್ತು ಮಾಡಿ ಕರೆಕೊಂಡು ಬಾ. ನಿನ್ನ ಖರ್ಚಿಗೆ ೧೦೦ ವರಹ ತೆಗೆದುಕೊ. ಅಷ್ಟು ಸಾಕಲ್ಲವೇ?

ಮಲೀಕ—ಸಾಕು, ಮಸ್ತ ಆಯಿತು. ನಾನು ನಾಳೆ ಅಥವಾ ನಾಡಿದ್ದು ಹೊರಟು ಒಬ್ಬ ಹುಡುಗನನ್ನು ಹುಡುಕಿ ತರುವೆನು.

ಪ್ರಯಾಣದ ಜೋಡಣೆಯನ್ನು ಮಾಡಿಕೊಂಡು, ಮರುದಿವಸ ಮಲೀಕನು ತನ್ನ ಕೆಲಸಕ್ಕೆ ಹೊರಟನು. ಊರಿಂದೂರಿಗೆ ಹೋಗಿ ೬ ತಿಂಗಳುಗಳ ವರೆಗೆ ಶೋಧನೆ ಮಾಡಿದನು. ಆದರೂ ಅವನ ಮನಸ್ಸಿಗೆ ತಕ್ಕ ಹುಡುಗನು ದೊರೆಯಲಿಲ್ಲ. ಆದ್ದರಿಂದ ಬೇಸತ್ತು ತಿರುಗಿ ಬಂದು, ಮುಂದೆ ಏನು ಮಾಡಬೇಕೆಂಬ ಎಣಿಕೆಯಲ್ಲಿ ಮುಳುಗಿದನು. ಒಂದು ದಿವಸ ಅವನ ಹೆಂಡತಿಯು ಅವನ ಉಮ್ಮಳಿಕೆಯನ್ನು ನೋಡಿ "ಏಕೆ ಇಷ್ಟು ಚಿಂತೆ ಹೊಂದಿರುವಿರಿ? ಕಾರಣವೇನು? ನನಗೆ ಹೇಳದಂತಹ ಕೆಲಸವು ಯಾವುದು? ಹೇಳಿರಿ ನೋಡೋಣ. ನನ್ನಿಂದೇನಾದರೂ ಆಗಬಹುದಾದ ಕೆಲಸವಿದ್ದರೆ ಮಾಡುವೆನು?

ಮಲೀಕ—ನೀನೇನು ಮಾಡುತ್ತಿ? ೬ ತಿಂಗಳು ಊರೂರು ತಿರುಗಿ ಬೇಸತ್ತೆನು. ಬಾದಶಹರಿಗೆ ಅತಿ ಚೆಲುವನಾದ ಒಬ್ಬ ಹುಡುಗನನ್ನು ಹುಡುಕಿ ತರಲಿಕ್ಕೆ ಹೋಗಿದ್ದೆನು. ಒಬ್ಬನಾದನೂ ದೊರೆಯುಲಿಲ್ಲ.

ಹೆಂಡತಿ—ಎಂಥವರು ನೀವು!! ಮನೆಯೊಳಗೇ ಅತಿ ಮುದ್ದಾದ ಮಗನಿರುವಾಗ ಊರೂರು ತಿರುಗಬೇಕೆ? ನಮ್ಮ ಹುಸೇನನಷ್ಟು ಚೆಲುವರು ಇಡೀ ಜಗತ್ತಿನಲ್ಲೇ ಇಲ್ಲ!!

ಮಲೀಕ—ಹೌದು!! ಮರೆತೇ ಬಿಟ್ಟಿದ್ದೆನು; ನನಗೆ ಮಂಕು ಬೂದಿಯಾರು ಹಾಕಿದ್ದರೋ? ನೀನು ಒಳ್ಳೆಯ ಹೊತ್ತಿಗೆ ನನ್ನನ್ನು ಎಚ್ಚರಿಸಿದೆ. ಹುಸೇನನನ್ನು ಕರೆ.

ಹೆಂಡತಿಯು ಹೊರಗೆ ಹೋಗಿ ಹುಸೇನನನ್ನು ಕರೆದುಕೊಂಡು ಬಂದಳು. ಅವನಿಗೆ ೧೫ ವರ್ಷ ತುಂಬಿದ್ದವು. ಬಣ್ಣ ಇದ್ದಲಿಯಷ್ಟು ಕಪ್ಪು. ಮೂಗು ಕಪ್ಪೆಯ ಹಾಗಿತ್ತು. ಹಲ್ಲು ಹೊಲಸು ಮುಣಗಿದ್ದರೂ ಆ ಕರಿಮೋರೆಯಲ್ಲಿ ಎದ್ದು ಕಾಣಿಸುತ್ತಿದ್ದವು. ಮೈಯೆಲ್ಲ ದೂಳು ಮುಚ್ಚಿತ್ತು. ಆ ಹುಡುಗನನ್ನು ನೋಡಿ ತಾಯಿತಂದೆಗಳ ಅಕ್ಕರವು ಉಕ್ಕೇರಿತು. ಅವರಿಗೆ ಅವನು ಮನ್ಮಥನಿಗಿಂತ ಸುಂದರವಾಗಿ ಕಂಡನು. ತಂದೆಯು ದುಗುಡು ಇಲ್ಲದಂತಾಯಿತು. ಬಾದಶಹನಿಗೆ ಬೇಕಾದ ಅತಿ ಚೆಲುವನು ದೊರೆತನು. ತಂದೆ ತಾಯಿಗಳ ಹಿಗ್ಗು ಹಿಡಿಯಲಾಸಲ್ಲ. ಮಲೀಕನು ಅವನನ್ನು ಬಾದಶಹನ ಬಳಿಗೆ ಕರೆಕೊಂಡು ಹೋಗಬೇಕೆಂದು ನಿಶ್ಚಯಿಸಿ,

ಮಲೀಕ—ಇದು ನಿನ್ನ ಉಪಕಾರ. ನನ್ನ ಧ್ಯಾಸ ಹಾರಿತ್ತು. ಹುಡುಗನ ಮೈಯನ್ನು ಜಳಜಳವಾಗಿ ತೊಳೆ. ಊಟಾದ ಮೇಲೆ ಅವನನ್ನು ದರಬಾರಿಗೆ ಕರೆಕೊಂಡು ಹೋಗುವೆನು. ನಾನು ಈಗ ಪೇಟೆಗೆ ಹೋಗಿ ಜರತಾರಿ ಅಂಗಿ ರುಮಾಲು ವಲ್ಲಿಗಳನ್ನು ಬೇಗನೆ ತರುವೆನು.

ಊಟವಾದ ಬಳಿಕ ಮಗನನ್ನು ಸಿಂಗರಿಸಿ, ಅವನ ಚಂದವನ್ನು ನೋಡಿ ನಲಿದು, ಮಲೀಕನು ಮಗನೊಡನೆ ದರಬಾರಿಗೆ ಹೋಗಿ, ಮಗನನ್ನು ದೂರ ನಿಲ್ಲಿಸಿ, ಬಾದಶಹನಿಗೆ ವಂದಿಸಿ ಕಯ್ಜೋಡಿಸಿಕೊಂಡು ನಿಂತನು.

ಬಾದ.—ಮಲೀಕ, ನಮಗೆ ಬೇಕಾದ ಹುಡುಗನು ದೊರೆತನೇನು?

ಮಲೀಕ—ಸರಕಾರ, ಅತಿ ಚೆಲುವನಾದ ಹುಡುಗನು ಸಿಕ್ಕಿರುತ್ತಾನೆ. ಇಂತಹ ಸುಂದರನಾದ ಹುಡುಗನು ಈ ಜಗತ್ತಿನಲ್ಲೇ ಇಲ್ಲೆಂದು ನನ್ನ ಹೆಂಡತಿಯು ಹೇಳಿದಳು.

ಬಾದ.—ಅವನೆಲ್ಲಿದ್ದಾನೆ ಕರೆ.

ಮಲೀಕನು ಮಗನನ್ನು ಕರೆತಂದು, ಬಾದಶಹನ ಮುಂದೆ ನಿಲ್ಲಿಸಿದನು. ಬಾದಶಹನು ಆ ಹುಡುಗನ ವರ್ಣರೂಪಗಳನ್ನು ನೋಡಿ ಬೆಚ್ಚಿ ಬೆರಗಾಗಿ, ಆಲೋಚನೆ ಮಾಡತೊಡಗಿದನು. ಬೀರಬಲ್ಲನು ಹಿಂದೆ ಹೇಳಿದ್ದೆಲ್ಲ ಅವನ ನೆನಪಿಗೆ ಬಂತು. ಬೇರೆ ಬೇರೆ ವರ್ಗದ ಜನರ ಮನಸ್ಸಿನಲ್ಲಿ ಚೆಲುವಿಕೆಯ ಅರ್ಥವು ಭಿನ್ನಭಿನ್ನವಾಗಿರುತ್ತದೆಂದು ಹೇಳಿದ ಬೀರಬಲ್ಲನ ಮಾತು ಅವನ ಲಕ್ಷ್ಯಕ್ಕೆ ಬಂತು. ಆದ್ದರಿಂದ ಅವನು ಮುಗುಳುನಗೆ ನಗುತ್ತ ಬೀರಬಲ್ಲನ ಕಡೆಗೆ ನೋಡಿದನು.

ಬೀರ.—ಮಹಾರಾಜ! ಮಲೀಕನು ನಾನು ಹೇಳಿದಂತೆ ಅತಿ ಚೆಲುವನಾದ ಹುಡುಗನನ್ನು ಶ್ರಮಪಟ್ಟು ಹುಡುಕಿ ತಂದಿರುತ್ತಾನೆ. ಅವನಿಗೆ ತಕ್ಕ ಇನಾಮನ್ನು ಕೊಟ್ಟು ಆ ಹುಡುಗನನ್ನು ತನ್ನ ಊಳಿಗದಲ್ಲಿಟ್ಟುಕೊಳ್ಳಬೇಕೆಂದು ಪ್ರಾರ್ಥಿಸುತ್ತೇನೆ.

ಬಾದ.—ಮಲೀಕ, ಈ ಹುಡುಗನು ನಿನಗೆ ಹತ್ತಿಹೊಂದಿದವನೇನು?

ಮಲೀಕ—ಸರಕಾರ, ಅವನು ಹತ್ತಿಹೊಂದಿದವನೇಕೆ? ನನ್ನ ಎರಡನೆಯ ಮಗನು. ಅವನ ಹೆಸರು ಹುಸೇನ. ನಾನು ಸುಮ್ಮನೇ ಊರೂರು ತಿರುಗಿ ಬೇಸತ್ತು ಬಂದ ಬಳಿಕ, ನನ್ನ ಹೆಂಡತಿಯು ಇವನ ಚೆಲುವಿಕೆಯನ್ನು ನನ್ನ ಲಕ್ಷ್ಯಕ್ಕೆ ತಂದುಕೊಟ್ಟಳು. ಆಗ ಇಂತಹ ಅತಿಸುಂದರನಾದ ಹುಡುಗನು ಮನೆಯಲ್ಲೇ ಇರುತ್ತಿರಲು, ನಾನು ಪೋಲಾಗಿ ಊರೂರು ತಿರುಗಿದೆನೆಂದು ಬಹಳ ಹಳಹಳಿಸಿ, ಆ ಹುಡುಗನನ್ನು ಮಹಾರಾಜರ ಸನ್ನಿಧಿಗೆ ಕರೆತಂದೆನು.

ಬಾದ.—(ತುಸು ಆಲೋಚಿಸಿ) ಒಳ್ಳೆಯ ಕೆಲಸ ಮಾಡಿದೆ. ಹೇಳಿ ದಂತೆ ನಿನಗೆ ಇನಾಮು ಕೊಡುವೆನಲ್ಲದೆ, ಈ ನಿನ್ನ ಮಗನನ್ನು ನನ್ನ ಹತ್ತಿರ ಇಟ್ಟುಕೊಳ್ಳುವೆನು. ನಾಳೆಯಿಂದ ಅವನು ಕೆಲಸಕ್ಕೆ ಬರಲಿ.

ಮರುದಿವಸ ಬಾದಶಹ ಬೀರಬಲ್ಲರು ಮಾತಾಡುತ್ತ ಕುಳಿತಿರುವಾಗ ಬಾದಶಹ "ಬೀರಬಲ್ಲ! ನೀನು ಹೇಳಿದ್ದನ್ನು ನಾನು ಈಗ ಮನಗಂಡೆನು. ಪುತ್ರಮೋಹವು ಮನುಷ್ಯನ ವಿಚಾರಶಕ್ತಿಯನ್ನು ಕುಗ್ಗಿಸಿ, ಅವನಲ್ಲಿ ಭ್ರಮೆಯ ನ್ನುಂಟುಮಾಡುತ್ತದೆ. ಆದ್ದರಿಂದ ಅವನು ಕೆಟ್ಟುದನ್ನು ಚೆಲುವಾಗಿ ಭಾವಿ ಸುತ್ತಾನೆಂದು ನೀನು ಹೇಳಿದ ಮಾತು ಈಗ ನನ್ನ ಅನುಭವಕ್ಕೆ ಬಂದಿತು. ನಿನ್ನ ಅನುಭವವೂ ದೂರದೃಷ್ಟಿಯೂ ಹೊಗಳತಕ್ಕಂತಹವೇ ಸರಿ. ನಿನ್ನಂ ತಹ ಬುದ್ಧಿವಂತನನ್ನು ನನ್ನ ಗೆಳೆಯನಾಗಿ ಕೊಟ್ಟುದಕ್ಕೆ ನಾನು ಜಗದೀಶನಿಗೆ ಅತ್ಯಂತಕೃತಜ್ಞನಾಗಿದ್ದೇನೆ."

## ೧೩. ಅಕ್ಬರೀ ರಾಮಾಯಣ ಭಾರತಗಳ ರಚನೆ.

ಒಂದು ದಿವಸ ಬಾದಶಹ ಬೀರಬಲ್ಲರು ವಿನೋದದಿಂದ ಮಾತಾಡುತ್ತ ಕುಳಿತಿರುವಾಗ—

ಬಾದ.—ಬೀರಬಲ್ಲ! ರಾಮಾಯಣ ಭಾರತ ಗ್ರಂಥಗಳು ಆಗಿರು ವುದರಿಂದ ರಾಮಚಂದ್ರನನ್ನೂ ಕೃಷ್ಣಾರ್ಜುನಧರ್ಮರಾಯರನ್ನೂ ಜನರು ಈಗಲೂ ಕೊಂಡಾಡುತ್ತಾರೆ. ಅವರು ಸಾವಿರಾರು ವರುಷಗಳ ಹಿಂದೆ ಇದ್ದು ಹೋದರೂ ಜನರು ಇನ್ನೂ ಅವರನ್ನು ಮರೆತಿಲ್ಲ; ಮತ್ತು ಈ ಗ್ರಂಥಗಳಿರುವ ವರೆಗೆ ಮರೆಯುವ ಸಂಭವವೂ ಇಲ್ಲ. ಆದ್ದರಿಂದ ಅಕ್ಬರೀ ರಾಮಾಯಣ ಭಾರತಗಳೆಂಬ ಗ್ರಂಥಗಳನ್ನು ಬರಿಸಿಟ್ಟರೆ, ನಿನ್ನನ್ನೂ ನನ್ನನ್ನೂ ಮುಂದಿನ ಜನರು ನೆನಪಿನಲ್ಲಿಡುವರು. ಆದಕಾರಣ ನೀನು ಮನಸ್ಸಿಟ್ಟು ಈ ಗ್ರಂಥಗಳನ್ನು ಬರೆಯಿಸಿದರೆ, ನಿನ್ನ ನನ್ನ ಹೆಸರುಗಳು ಆಚಂದ್ರಾರ್ಕವಾಗಿ ಈ ಜಗತ್ತಿನಲ್ಲಿ ಉಳಿಯುವುವು. ಹೇಗಾದರೂ ಮಾಡಿ ಈ ಗ್ರಂಥಗಳನ್ನು ಬರಿಸು. ತಗಲಿದಷ್ಟು ಹಣವನ್ನು ಕೊಡುವೆನು.

ಬೀರ.—ಮಹಾರಾಜ! ತಮಗೆ ಅಕ್ಬರೀ ರಾಮಾಯಣ ಭಾರತಗಳೇ ಬೇಕೊ? ತಮ್ಮ ಸಾದ್ಯಂತ ಚರಿತ್ರಬೇಕೊ? ಎರಡನೆಯದು ಸುಲಭ, ಆದರೆ ಮೊದಲನೆಯದು ಕಷ್ಟತಮ.

ಬಾದ.—ಬೀರಬಲ್ಲ! ನನ್ನ ಚರಿತ್ರವನ್ನು ಮತ್ತೊಮ್ಮೆ ಬರಿಸುವ ಕಾರಣವಿಲ್ಲ. ಅಬುಲ್ ಫಾಜಲ್ಲನು ಅದನ್ನು ಬರೆಯತೊಡಗಿದ್ದಾನೆ. ನನ್ನ ರಾಮಾಯಣ ಭಾರತದಿಂದ ನಾನು ಹೆಚ್ಚು ಹೆಸರುವಾಸಿಯಾಗಿ ಚಿರ ಸ್ಮರಣೀಯನಾಗಬಹುದು. ಆದ್ದರಿಂದ ಹೇಗಾದರೂ ಮಾಡಿ ನನ್ನ ರಾಮಾಯಣ ಭಾರತಗಳನ್ನು ಬರೆಯಿಸು. ಹಾಗೆ ಮಾಡಿದರೆ ನಿನ್ನ ಹೆಸರೂ ಉಳಿಯುವುದು. ಏಕೆಂದರೆ ನನ್ನ ವರ್ಣನೆಯಲ್ಲಿ ನಿನ್ನ ವರ್ಣನೆಯು ಬರಲೇ ಬೇಕು.

ಬೀರ.—ಏಕಾಗಬಾರದು? ಪ್ರಯತ್ನಮಾಡುವೆನು. ರಾಮಾಯಣವು ಸಣ್ಣ ಗ್ರಂಥವಾದ್ದರಿಂದ ಅದನ್ನು ಬರಿಸಲಿಕ್ಕೆ ೨೫,೦೦೦ ರೂ. ಸಾಕಾಗಬಹುದು. ಆದರೆ ಭಾರತವು ಬಹಳ ದೊಡ್ಡದು. ಅದರಲ್ಲಿ ೧೨೫೦೦೦ ಶ್ಲೋಕಗಳಿರುತ್ತವೆ. ಶ್ಲೋಕಕ್ಕೆ ೧ ರೂ. ಹಿಡಿದರೂ ಒಂದು ಲಕ್ಷ ಇಪ್ಪತ್ತಯ್ದು ಸಾವಿರ ರೂಪಾಯಿಗಳು ಬೇಕಾಗುವುವು. ಅಷ್ಟು ಹಣ ಕೊಡಿಸಿದರೆ ಕೆಲಸವನ್ನು ಆರಂಭಿಸುವೆನು.

ಬಾದ.—ಎಷ್ಟು ದಿವಸಗಳಲ್ಲಿ ಈ ಗ್ರಂಥಗಳು ಮುಗಿಯಬಹುದು?

ಬೀರ.—ರಾಮಾಯಣಕ್ಕೆ ೨೩ ತಿಂಗಳ ಕಾಲ ಬೇಕಾಗುವುದು. ಭಾರತಕ್ಕೆ ಏನಿಲ್ಲೆಂದರೂ ೪೯ ತಿಂಗಳು ಬೇಕು.

ಬಾದ.—ಆಗಲಿ, ಒಂದುವರೆ ಲಕ್ಷ ರೂಪಾಯಿಗಳನ್ನು ಬೊಕ್ಕಸದಿಂದ ತೆಗೆದುಕೊಂಡು ಕೆಲಸವನ್ನು ಆರಂಭಿಸು. ಆದಷ್ಟು ಬೇಗನೆ ಮಾಡಿಸಿದರೆ ಒಳ್ಳೆಯದಾಗುವುದು.

ಬೀರಬಲ್ಲನು ಹಣವನ್ನು ತೆಗೆದುಕೊಂಡು ಮನೆಗೆ ಹೋಗಿ ಆಲೋಚಿಸಿ, ಭರತಭೂಮಿಯಲ್ಲಿದ್ದ ಎಲ್ಲ ಪಂಡಿತರನ್ನೂ ಕರಿಸಿಕೊಂಡು, ಅವರ ಊಟುಡಿಗೆಯ ಏರ್ಪಾಡನ್ನು ಮಾಡಿ, ಬಾದಶಹನ ಬಯಕೆಯನ್ನು ಅವರ ಮುಂದಿಟ್ಟನು.

**ಪಂಡಿತರು**—ನಿಮ್ಮ ಬಾದಶಹನ ಬಯಕೆಯನ್ನು ಕೈಯ್ಗೂಡಿಸುವ ಬಗೆ ಹೇಗೆ? ಶ್ರೀ ರಾಮಕೃಷ್ಣರು ವಿಷ್ಣುವಿನ ಅವತಾರ. ಅವರ ಚರಿತ್ರವೆತ್ತ? ನಿಮ್ಮ ಹೆಂಡಗುಳಿಯೂ ವಿಷಯಾಸಕ್ತನೂ ಆದ ಬಾಹಶಹನ ಚರಿತ್ರವೆತ್ತ? ಇವನನ್ನು ಅವತಾರ ಪುರುಷರಿಗೆ ಹೋಲಿಸಿ ಸ್ತುತಿಮಾಡುವ ಅಧರ್ಮದ ಕೆಲಸವನ್ನು ನಾವು ಕಯ್ಕೊಳ್ಳಲಾರೆವು. ಇಂತಹನನ್ನು ಸ್ತುತಿಸಿ ನಾವು ಯಾವ ಅಧೋಗತಿಗೆ ಹೋಗಬೇಕು? ನಮ್ಮಿಂದ ಈ ಕೆಲಸವಾಗದು.

**ಬೀರ.**—ಮಹಾಸ್ವಾಮಿಗಳೇ? ತಮಗೆ ಈ ಕೆಲಸವು ಸರಿಯೆಂದು ತೋರದಿದ್ದರೆ ಬಿಟ್ಟುಬಿಡಬಹುದು. ನಾನು ಏನಾದರೂ ಹಂಚಿಕೆಮಾಡಿ ಬಾದಶಹನನ್ನು ಸಮಾಧಾನಗೊಳಿಸುವೆನು. ತಾವೆಲ್ಲರೂ ವರ್ಷಾರು ತಿಂಗಳು ಇಲ್ಲಿದ್ದು, ಇಲ್ಲಿಯ ಜನರಿಗೆ ಪುರಾಣಪುಣ್ಯಕಥೆಗಳನ್ನು ಶ್ರವಣ ಮಾಡಿಸಬೇಕೆಂದು ಸೆರಗೊಡ್ಡಿ ಬೇಡಿಕೊಳ್ಳುತ್ತೇನೆ. ತಾವು ಇಲ್ಲಿರುವಾಗ ತಮ್ಮ ಆದರಾತಿಥ್ಯವನ್ನು ಸರಿಯಾಗಿ ಮಾಡುವೆನಲ್ಲದೆ, ತಾವು ಮರಳಿ ಹೋಗುವಾಗ ತಮಗೆ ಯೋಗ್ಯಸಂಭಾವನೆಯನ್ನು ಕೊಟ್ಟು ಸತ್ಕರಿಸುವೆನು.

**ಪಂಡಿತರು**—ಮಹಾರಾಯಾ! ಏಕಾಗಲೊಲ್ಲದು. ಅನುಕೂಲವಿದ್ದಷ್ಟು ದಿವಸ ನಾವು ಇಲ್ಲಿದ್ದು ಭಗವತ್ಪುರಾಣಶ್ರವಣಮಾಡಿಸುವೆವು.

ಈ ಮೇರೆಗೆ ೨॥ ತಿಂಗಳು ಕಳೆದು ಹೋದವು. ಒಂದು ದಿವಸ ಬೀರಬಲ್ಲನು ಯಾವದೋ ಒಂದು ಪುರಾಣದ ಗಂಟನ್ನು ಬಗಲಲ್ಲಿ ಹಿಡಿದು ಕೊಂಡು ಬಾದಶಹನ ಬಳಿಗೆ ಹೋದನು.

**ಬಾದ.**—ಬೀರಬಲ್ಲ! ನನ್ನ ರಾಮಾಯಣವು ಮುಗಿಯಿತೇನು?

**ಬೀರ.**—ಮಹಾರಾಜ! ಕೆಲಸ ನಡೆದಿದೆ. ಆದರೆ ಒಂದೆರಡು ಸಂಶಯಗಳು ಬಂದಿರುತ್ತವೆ.

**ಬಾದ.**—ಸಂಶಯವೇನು? ಹೇಳು.

**ಬೀರ.**—ವಿಶೇಷವೇನೂ ಇಲ್ಲ. ಶ್ರೀರಾಮಚಂದ್ರನಿಗೆ ಮೂರು ಮಂದಿ ತಮ್ಮಂದಿರಿದ್ದರು. ತಮಗೆ ಒಬ್ಬನೇ ತಮ್ಮನಿದ್ದಾನೆ. ಇನ್ನಿಬ್ಬರು ತಮ್ಮಂದಿರು ಯಾರು?

ಬಾದ.—ನನ್ನ ಕಕ್ಕನ ಮಕ್ಕಳಿದ್ದಾರಲ್ಲ. ಅವರೊಳಗೆ ಇಬ್ಬರನ್ನು ಆರಿಸು.

ಬೀರ.—ಇದೊಂದು ಸಂಶಯಪರಿಹಾರವಾಯಿತು. ಮತ್ತೊಂದು ಮಾತು. ಶ್ರೀರಾಮಚಂದ್ರನಿಗೆ ಸೀತಾದೇವಿಯೊಬ್ಬಳೇ ಹೆಂಡತಿಯಾಗಿದ್ದಳು. ತಮಗೆ ಬಹಳ ಮಂದಿ ಹೆಂಡಂದಿರುವರು. ಅವರೊಳಗೆ ಯಾರನ್ನು ಆರಿಸಬೇಕು?

ಬಾದ.—ನನ್ನ ಪಟ್ಟದ ರಾಣಿಯೊಬ್ಬಳನ್ನೇ ನಮೂದಿಸಿದರೆ ಸಾಕು. ಉಳಿದವರನ್ನು ಬಿಟ್ಟುಬಿಡಬಹುದು. ಜೋಧಬಾಯಿಯೊಬ್ಬಳೇ ಸಾಕು.

ಬೀರ.—ಒಳ್ಳೆಯದು, ಅವರನ್ನು ಕೆಲವು ಮಾತುಗಳ ಬಗ್ಗೆ ಕೇಳಬೇಕಾಗಿದೆ.

ಬಾದ.—ಹೋಗಿ ಆಕೆಯನ್ನು ಕೇಳು. ಆಕೆಯು ನಿನಗೆ ಬೇಕಾದ ಎಲ್ಲ ಸಂಗತಿಗಳನ್ನು ಹೇಳುವಳು. ಆಕೆಯನ್ನು ಕಂಡು ನಿನ್ನ ಸಂಶಯಗಳನ್ನು ಪರಿಹರಿಸಿಕೊ.

ಬೀರಬಲ್ಲನು ಪಟ್ಟದರಸಿಯ ಬಳಿಗೆ ಹೋಗಿ, ಉಚಿತರೀತಿಯಿಂದ ವಂದಿಸಿ ಕುಶಲಪ್ರಶ್ನಗಳನ್ನು ಕೇಳಿದ ಬಳಿಕ,—

ಪಟ್ಟದರಸಿ—ಬೀರಬಲ್ಲ! ಈಗೇನು ಕಾರಣ ಬರೋಣವಾಯಿತು? ಬಗಲಲ್ಲಿರುವ ಪುಸ್ತಕ ಯಾವುದು?

ಬೀರ.—ಸರಕಾರ್, ಇದು ತಮ್ಮ ಯಜಮಾನರು ಹೇಳಿ ಬರಿಸಿದ ಅಕ್ಬರೀ ರಾಮಾಯಣವು. ಇದನ್ನು ಬರಿಸುವಾಗ ಕೆಲವು ಸಂಶಯಗಳು ಬಂದುದರಿಂದ ಅವುಗಳನ್ನು ಹೋಗಲಾಡಿಸಿಕೊಳ್ಳಲಿಕ್ಕೆ, ಬಾದಶಹರು ನನ್ನನ್ನು ತಮ್ಮ ಕಡೆ ಕಳುಹಿಸಿರುತ್ತಾರೆ. ದಯವಿಟ್ಟು ನನಗೆ ಆಡಗಾಣಿಸಿದ (ಅವಶ್ಯವಾಗಿ ಬೇಕಾದ) ಕೆಲವು ಮಾತುಗಳನ್ನು ತಿಳಿಸಬೇಕೆಂದು ಅತಿ ನಮ್ರತೆಯಿಂದ ಬೇಡಿಕೊಳ್ಳುತ್ತೇನೆ.

ಪಟ್ಟದರಸಿ—ನಿನಗೆ ಬೇಕಾದ ಸಂಗತಿಗಳನ್ನು ಕೇಳು. ನಾನು ಸಂತೋಷದಿಂದ ಹೇಳುವೆನು. ನೀನು ಸಂಕೋಚಮಾಡಿಕೊಳ್ಳುವ ಕಾರಣ

ವಿಲ್ಲ. ಬಾದಶಹರು ಬರಿಸಲಿಕ್ಕೆ ಹೇಳಿದ ರಾಮಾಯಣವು ಮುಗಿದರೆ ಹದಿ ಬದೆಯರ ಶಿರೋಮಣಿಯಾದ ಸೀತಾದೇವಿಯ ಯೋಗ್ಯತೆಯು ನನಗೆ ಬರುವುದು. ನನ್ನ ಪೂರ್ವಜನ್ಮದ ಪುಣ್ಯದಿಂದಲೇ ಬಾದಶಹರ ಮನಸ್ಸಿನಲ್ಲಿ ಈ ವಿಚಾರವು ಬಂದಿರುತ್ತದೆ.

ಬೀರ.—ಈ ರಾಮಾಯಣದಿಂದ ತಮ್ಮ ಮತ್ತು ಬಾದಶಹರ ಹೆಸರು ಬಹುಕಾಲ ಉಳಿಯುವುದು.

ಪಟ್ಟದರಸಿ—ಅದರಲ್ಲೇನು ಸಂದೇಹ? ಈಗ ಸೀತಾರಾಮರ ಹೆಸರು ಉಳಿದಿಲ್ಲವೇ?

ಬೀರ.—ಪ್ರತಿಯೊಬ್ಬ ಭಾರತೀಯನೂ ಪ್ರತಿದಿನವೂ ಅವರ ಹೆಸರನ್ನು ಕೊಂಡಾಡದೆ ಇರನು. ಅವರ ನಾಮೋಚ್ಚಾರಣದಿಂದ ಸಕಲ ಸಂಕಟಗಳೂ ಪರಿಹಾರವಾಗುತ್ತವೆಂದು ನಮ್ಮಲ್ಲಿ ತಿಳಿವಳಿಕೆಯುಂಟು.

ಪಟ್ಟದರಸಿ—ಬೀರಬಲ್ಲ! ನಿನ್ನ ಬಗಲಲ್ಲಿರುವುದು ಇದೇ ರಾಮಾಯಣವೇನು?

ಬೀರ.—ಆಹುದು. ನಮಗೆ ಬಂದ ಕೆಲವು ಸಂಶಯಗಳನ್ನು ತಾವು ದಯವಿಟ್ಟು ದೂರಮಾಡಿದರೆ ೮।೧೦ ದಿವಸಗಳಲ್ಲಿ ಈ ಪುರಾಣವು ಮುಗಿದು ಅಕ್ಬರೀ ಭಾರತಕ್ಕೆ ಆರಂಭವಾಗುವುದು.

ಪಟ್ಟದರಸಿ—ಭಾರತವನ್ನೂ ಬರಿಸುವರೇನು? ದೇವರು ದಯಮಾಡಿದನು. ಏನು ಬೇಕು? ಬೇಗನೆ ಹೇಳು. ನಿನ್ನ ಸಂಶಯವನ್ನು ದೂರಮಾಡುವೆನು.

ಬೀರ.—ದೊಡ್ಡಮ್ಮನವರೇ ತಮಗೆ ರಾಮಾಯಣದ ಕಥೆಯು ಗೊತ್ತಿರುತ್ತದಷ್ಟೇ. ಸೀತಾದೇವಿಯನ್ನು ದುಷ್ಟನಾದ ರಾವಣನು ಕಪಟದಿಂದ ಎತ್ತಿಕೊಂಡು ಹೋಗಿ, ೧೪ ವರ್ಷ ತನ್ನ ಬಳಿಯಲ್ಲಿಟ್ಟುಕೊಂಡು, ಪರಿಪರಿಯಾಗಿ ಪೀಡಿಸಿದನು. ಅದರಂತೆಯೇ ತಮ್ಮನ್ನು ಯಾರು ಎತ್ತಿ ಒಯ್ದು ಪೀಡಿಸಿದರೆಂಬುದನ್ನು ದಯವಿಟ್ಟು ತಿಳಿಸಬೇಕೆಂದು ಪ್ರಾರ್ಥಿಸುತ್ತೇನೆ. ಮಹಾರಾಣಿಯವರು ಅನುಗ್ರಹಿಸಬೇಕು.

ಪಟ್ಟದರಸಿ—ಬೀರಬಲ್ಲ! ನಿನಗೆ ಎಚ್ಚರದಪ್ಪಿತೇನು? ಏನು ಹುಚ್ಚು ಪ್ರಶ್ನ ಕೇಳುತ್ತೀ? ಅತಿಶೂರನಾದ ನನ್ನ ಪತಿ ಇರಲಿಕ್ಕೆ ನನ್ನನ್ನು ಒತ್ತಾಯದಿಂದ ಒಯ್ಯುವವರಾರು? ನಾನು ೧೪ ವರುಷ ಮಂದಿಯ ಮನೆಯಲ್ಲಿರಬೇಕೇ? ಛೀ, ಭ್ರಷ್ಟಮಾತು. ಇಂತಹ ಪುರಾಣ ನನಗೆ ಬೇಡ. (ಒಬ್ಬ ದಾಸಿಯನ್ನು ಕರೆದು) ಈ ಪುಸ್ತಕವನ್ನು ಈಗಲೇ ಸುಟ್ಟು ಬೂದಿ ಮಾಡು. ಬೇಗನೆ ಸುಡು.

ದಾಸಿಯು ಕೂಡಲೇ ಆ ಪುಸ್ತಕವನ್ನು ಒಯ್ದು ಉರಿಹಚ್ಚಿದಳು. ಆ ಗದ್ದಲದಲ್ಲಿ ಬೀರಬಲ್ಲನು ಮೆಲ್ಲಗೆ ಜಾರಿಕೊಂಡು, ಬಾದಶಹನ ಎಡೆಗೆ ಹೋಗಿ ನಡೆದ ಸಂಗತಿಯನ್ನೆಲ್ಲ ದುಃಖದಿಂದ ಹೇಳಿದನು.

ಬಾದ.—ಬೇಗಮ್ಮಳು ಸಿಟ್ಟಿನ ಭರದಲ್ಲಿ ರಾಮಾಯಣವನ್ನು ಸುಡಿಸಿದ್ದು ಅಚಾತುರ್ಯದ ಕೆಲಸವಾಯಿತು. ಉಪಾಯವಿಲ್ಲ, ಮಿಂಚಿ ಹೋದ ಮಾತಿಗೆ ಚಿಂತಿಸಿ ಫಲವೇನು? ರಾಮಾಯಣ ಹೋದರೂ ಹೋಗಲಿ. ಭಾರತವನ್ನು ಬೇಗನೆ ಬರಿಸು. ಅದು ಬಲು ದೊಡ್ಡ ಗ್ರಂಥ.

ಬೀರಬಲ್ಲನು ಬೀಳ್ಕೊಂಡು ಮನೆಗೆ ಹೋದನು. ಅಕ್ಬರೀ ರಾಮಾಯಣದ ಕೆಲಸವು ದೇವತಾನುಗ್ರಹದಿಂದ ಪಾರುಬಿದ್ದಿತು. ಅಕ್ಬರೀಭಾರತದ ಕೆಲಸವೊಂದು ಹೇಗೆ ಪಾರುಬೀಳಬೇಕೆಂಬ ಎಣಿಕೆಯಲ್ಲಿ ಮುಳುಗಿ ಪಂಡಿತರೊಡನೆ ಮಾತು ಎತ್ತಿದನು.

ಬೀರ.—ಸ್ವಾಮಿಾ ಅಕ್ಬರೀ ಭಾರತವನ್ನು ಬರಿಸಬೇಕೆಂದು ಬಾದಶಹನ ಆಗ್ರಹ (ಹಟ)ವಿರುವುದು. ತಾವು ದಯವಿಟ್ಟು ಅದನ್ನು ಬರೆಯುವಿರಾ?

ಪಂಡಿತರು—ಅಕ್ಬರೀ ಭಾರತವೆಂದರೇನು? ಅಕ್ಬರನು ಭರತಕುಲದವನೇ? ಅವನು ಮ್ಲೇಂಛನು. ಭರತಕುಲವೆಲ್ಲಿ ಅಕ್ಬರನೆಲ್ಲಿ? ಅಕ್ಬರೀ ಭಾರತವೆಂಬುದು ಅಬದ್ಧಮಾತು. ನಿಮ್ಮ ಬಾದಶಹನು ಮಾಡಿದ ಶೂರ ಕೃತ್ಯಗಳನ್ನು ವರ್ಣಿಸಬಹುದು. ಆದರೆ ಪಾಂಡವರಲ್ಲಿದ್ದ ದೈವಿಕ ಪ್ರಸಾ

ದವು ಇವನಿಗೆ ಬರುವ ಬಗೆ ಹೇಗೆ? ನಾವು ಈ ಭಾರತವನ್ನು ಬರೆಯ ಲಾರೆವು.

ಬೀರ.—ಒಳ್ಳೆಯದು. ಅವನ ಮಹಾಕೃತ್ಯಗಳನ್ನೇ ಬಣ್ಣಿಸಿರಿ.

ಮುಂದೆ ನಾಲ್ಕಯ್ದು ತಿಂಗಳು ಕಳೆದ ಬಳಿಕ ಬೀರಬಲ್ಲನು ಪಂಡಿತರು ಬರೆದ ಓಲೆಗಳನ್ನು ತೆಗೆದುಕೊಂಡು ಬಾದಶಹನೆಡೆಗೆ ಹೋದನು.

ಬಾದ.—ಏನು ಬೀರಬಲ್ಲ! ನನ್ನ ಭಾರತವು ಮುಗಿಯಿತೇನು?

ಬೀರ.—ಕೆಲಸವು ಲಗುಬಗೆಯಿಂದ ನಡೆದಿದೆ. ಕೆಲವು ಮಾತುಗಳ ಬಗ್ಗೆ ತಮ್ಮೊಡನೆ ಆಲೋಚಿಸಲು ಬಂದೆನು. ತಮ್ಮನ್ನು ಅರ್ಜುನನ್ನಾಗಿ ವರ್ಣಿಸಬೇಕೆಂದು ಕೋರುತ್ತೇನೆ. ಅರ್ಜುನನು ಸುಭದ್ರೆಯನ್ನು ಕಪಟ ದಿಂದ ಮದುವೆಯಾದನು. ಹಾಗೆ ತಾವು ಯಾರನ್ನು ಪಾಣಿಗ್ರಹಣ ಮಾಡಿದಿರಿ.

ಬಾದ.—ನಾನು ಜೋಧಬಾಯಿಯನ್ನು ಮದುವೆಯಾದ್ದು ಕಪಟ ದಿಂದಲ್ಲವೇ? ಅದಕ್ಕೆ ಎಷ್ಟು ಪ್ರಯತ್ನ ಸಾಹಸಗಳನ್ನು ಮಾಡಬೇಕಾಯಿ ತೆಂಬುದು ನಿನಗೆ ಗೊತ್ತೇ ಇರುತ್ತದೆ. ಬಗೆಬಗೆಯ ತಗಲುಗಳನ್ನು ಮಾಡ ದಿದ್ದರೆ, ಆ ಕೆಲಸವು ಸಾಧ್ಯವಾಗುತ್ತಿತ್ತೆ? ಆ ಕೆಲಸದಲ್ಲಿ ಮಾನಸಿಂಗ ರಾಜನು ನಮಗೆ ಬಹುಪರಿಯಿಂದ ನೆರವಾದನು. ಆದ್ದರಿಂದ ಅವನೇ ನಮ್ಮ ಭಾರತದ ಕೃಷ್ಣನಾಗಬಹುದು.

ಬೀರ.—ತಾವು ಹೇಳಿದ್ದು ಬಹಳ ಯುಕ್ತಿಕವಾಗಿರುತ್ತದೆ. ಇದು ನನಗೆ ಹೊಳೆದಿದ್ದಿಲ್ಲ. ಆದರೆ ಯಾರನ್ನು ಧೃತರಾಷ್ಟ್ರನಾಗಿ ಮಾಡಬೇಕು?

ಬಾದ.—ಅದಕೇಕಿಷ್ಟು ಚಿಂತೆ? ಧೃತರಾಷ್ಟ್ರನು ಪಾಂಡವರಿಗೆ ಕಕ್ಕ ನಾಗಬೇಕು. ಕಾಮುರಾನಹಿಂಡಾಲ-ಅಸ್ಕಾರಿಯರು ನನ್ನ ಕಕ್ಕಂದಿರಲ್ಲವೇ?

ಬೀರ.—ಆದರೆ ಧೃತರಾಷ್ಟ್ರನು ಹುಟ್ಟು ಕುರುಡನಾಗಿದ್ದನು. ಆದರೆ ತಮ್ಮ ಕಕ್ಕಂದಿರೆಲ್ಲರು ಕಣ್ಣುಳ್ಳವರು.

ಬಾದ.—ಈ ಎಡರು ನಿನ್ನ ಬುದ್ಧಿಗೆ ಈಡೇ? ಅವರೆಲ್ಲ ಕಣ್ಣಿದ್ದ ಕುರುಡರಲ್ಲವೇ? ಅವರು ಮಾಡಿದ ದಡ್ಡ ಕೆಲಸಗಳೆಲ್ಲ ಕುರುಡರ ಕೆಲಸ

ಗಳಲ್ಲವೇ ? ಅವರೊಳಗೆ ಯಾವನಾದರೊಬ್ಬನನ್ನು ಆರಿಸಿ ಕುರುಡನೆಂದು ವರ್ಣಿಸಿದರೆ ತೀರಿತು.

**ಬೀರ.** — ಸರಿ. ತಮ್ಮ ಅರಸಿಯರಲ್ಲಿ ಯಾರನ್ನು ದ್ರೌಪದಿಯಾಗಿ ಮಾಡಬೇಕು ? ಜೋಧಬಾಯಿಯಂತೂ ಸುಭದ್ರಾದೇವಿಯಾದಳು.

**ಬಾದ.** — ಸುಲ್ತಾನಸಾಲಿಮಾ ಬೇಗಮ್ಮಳನ್ನು ದ್ರೌಪದಿಯಾಗಿ ತಿಳಿಯಲಿ.

**ಬೀರ.** — ಮಹಾರಾಜ! ತಾವು ದಯವಿಟ್ಟು ಮಾಡಿದ ಸೂಚನೆಗಳಿಂದ ಗ್ರಂಥ ಮುಗಿಸಲಿಕ್ಕೆ ತುಂಬಾ ಅನುಕೂಲವಾಯಿತು. ಬೇಗಮ್ಮಳವರ ಸನ್ನಿಧಿಗೆ ಹೋಗಿ ಕೆಲವು ಮಾತುಗಳನ್ನು ಕೇಳಿಕೊಂಡು ಬರುವೆನು, ಅಪ್ಪಣೆ ದಯಪಾಲಿಸಿರಿ.

**ಬಾದ.** — ಹೋಗು, ಬೇಗಮ್ಮ ಸಾಹೇಬರನ್ನು ಸಿಟ್ಟಿಗೆಬ್ಬಿಸಬೇಡ ಕಂಡೆಯಾ. ಅವರ ಮುನಿಸು ಬಹಳ. ನಿನಗೆ ಬೇಕಾದ್ದನ್ನೆಲ್ಲ ನಮ್ರಭಾವದಿಂದ ಕೇಳು. ಒಳ್ಳೆಯದು, ಅವರನ್ನು ನೀನು ಕೇಳುವುದಾದರು ಏನು ?

**ಬೀರ.** — ಖುದಾವಂದ್! ತಮ್ಮನ್ನು ಮನಸ್ಸುಬಿಚ್ಚಿ ಕೇಳುವಂತೆ ಅವರನ್ನು ಕೇಳುವುದಿಲ್ಲ. ತಮ್ಮಿಂದ ಕೋರುವಂತೆ ಅವರಿಂದ ಸೂಚನೆಗಳನ್ನು ಬಯಸುವುದಿಲ್ಲ. ಅವರನ್ನು ಸಮಾಧಾನ ಮಾಡಲಿಕ್ಕೆ ದ್ರೌಪದಿ ಸುಭದ್ರೆಯರ ಕಥೆಯನ್ನು ಅವರ ಮುಂದೆ ಹೇಳಿ, ಅವರನ್ನು ಆಯಾ ಚರಿತ್ರೆಗಳಿಗೆ ಒಡಂಬಡಿಸುವುದೇ ನನ್ನ ಮುಖ್ಯ ಉದ್ದೇಶವು.

**ಬಾದ.** — ಆಗಲಿ, ಏನೂ ಅಡ್ಡಿಯಿಲ್ಲ. ಇಷ್ಟರಿಂದ ಅವರು ಕನಲರಾರರು. ಹೋಗಿ ಬಾ. ಸಂತೋಷದಲ್ಲಿದ್ದಾಗ ಅವರನ್ನು ಕಾಣು. ಒಂದೆರಡು ದಿನ ತಡವಾದರೂ ಅಡ್ಡಿಯಿಲ್ಲ. ಮುಖ್ಯವಾಗಿ ಅವರು ಒಡಂಬಡಲಿಕ್ಕೆ ಬೇಕಾದ್ದನ್ನೆಲ್ಲ ಮಾಡು. ಬಹಳ ಎಚ್ಚರದಿಂದ ಈ ಕೆಲಸವನ್ನು ಕೊನೆಗಾಣಿಸಬೇಕು.

**ಬೀರ.** — ಮಹಾಸ್ವಾಮಿ! ಇದನ್ನು ತಾವು ಹೇಳಬೇಕೆ? ನನ್ನ ಎಲ್ಲ ಬುದ್ಧಿಸಾಮರ್ಥ್ಯವನ್ನು ಬಳಿಸಿ, ನಾನು ಸ್ವಾಮಿಕಾರ್ಯವನ್ನು ಜರಗಿಸುವೆನು. ತಾವು ಎಷ್ಟೂ ಉಮ್ಮಳಿಸಕೂಡದು.

ಈ ಮೇರೆಗೆ ಹೇಳಿ ಬೀರಬಲ್ಲನು ಜೋಧಬಾಯಿಯ ಬಳಿಗೆ ಹೋಗಿ ಆಕೆಯ ಮುಂದೆ ಸುಭದ್ರೆಯ ಕಥೆಯನ್ನು ಹೇಳಿ, ಸುಭದ್ರಾದೇವಿಯಾಗಲಿಕ್ಕೆ ಆಕೆಯನ್ನು ಒಡಂಬಡಿಸಿ, ಬೇಗಮ್ ಸಾಹೇಬರ ಕಡೆಗೆ ತೆರಳಿದನು. ಅವರು ಅವನಿಗೆ ಒಳಗೆ ಬರಹೇಳಿ ಉಚಿತಾಸನದಲ್ಲಿ ಕುಳ್ಳಿರಿಸಿದ ಬಳಿಕ, ತಾನು ಬಂದ ಕೆಲಸವನ್ನು ತುಸುದರಲ್ಲಿ ಹೇಳಿದನು.

**ಬೇಗಮ್**—ಮಾಬಾರತಂದರೇಸು? ಬಾದಶಹರು ಅದನ್ನೇಕೆ ಬರಿಸುವರು?

**ಬೀರ.**—ಬೇಗಮ್ ಸಾಹೇಬ್! ಅದು ನಮ್ಮ ಪವಿತ್ರಪುರಾಣ ಗ್ರಂಥವು. ಅದನ್ನು ದಿನಾಲು ನಾವು ಭಕ್ತಿಯಿಂದ ಕೇಳುತ್ತೇವೆ. ಅದರಲ್ಲಿ ಪಾಂಡವರ ಪುಣ್ಯಚರಿತ್ರವಿರುವುದಲ್ಲದೆ, ಎಷ್ಟೋ ತತ್ವವಿಚಾರಗಳೂ ನೀತಿಯ ಮಾತುಗಳೂ ತುಂಬಿರುತ್ತವೆ.

**ಬೇಗ.**—ಅದೇನು ನಮ್ಮ ಕುರಾನಿಗಿಂತ ಹೆಚ್ಚಿನದೋ?

**ಬೀರ.**—ಅದು ನಾನರಿಯೆ. ನಾವು ಮಾತ್ರ ಅದನ್ನು ಅತಿ ಪವಿತ್ರ ಗ್ರಂಥವೆಂದು ಮನ್ನಿಸುತ್ತೇವೆ.

**ಬೇಗ.**—ಏನು ಪವಿತ್ರವೋ ಏನೊ? ನೀವು ಹಿಂದೂಜನರು ಬಾದಶಹರನ್ನು ಮರುಳುಮಾಡಿ ಬಿಟ್ಟಿರುತ್ತೀರಿ. ಅವರಿಗೆ ನಿಮ್ಮ ಮತ, ನಿಮ್ಮ ಗ್ರಂಥ, ನಿಮ್ಮ ವಿಚಾರ, ನಿಮ್ಮ ರೀತಿನಡತೆ, ನಿಮ್ಮ ಹೆಂಗಸರು ಇವೆಲ್ಲ ಪ್ರಿಯತಮವಾಗಿರುತ್ತವೆ. ಅವರಿಗೆ ಯಾರು ಹೇಗೆ ಮೆಚ್ಚುಮದ್ದು ಕೊಟ್ಟರೊ ತಿಳಿಯುವುದಿಲ್ಲ.

**ಬೀರ.**—ಬೇಗಮ್ ಸಾಹೇಬ್! ತಮ್ಮ ಅಭಿಪ್ರಾಯವೇನೋ ನನಗೆ ತಿಳಿಯದು. ಬಾದಶಹರು ಒಳ್ಳೆಯ ವಿಚಾರಿಗಳೂ ಅರಿವುಳ್ಳವರೂ ಸುಜ್ಞರೂ ಇರುತ್ತಾರೆಂದು ನನ್ನ ತಿಳಿವಳಿಕೆಯು. ಅವರಲ್ಲಿ ಮತದ ದುರಭಿಮಾನವಿಲ್ಲ.

**ಬೇಗಮ್**—ನಾವೆಲ್ಲ ದುರಭಿಮಾನಿಗಳೇನು? ಮಹಮ್ಮದೀಯ ಧರ್ಮವು ಹಿಂದೂಧರ್ಮಕ್ಕಿಂತ ಲಕ್ಷಪಾಲಿಗೆ ಲೇಸು. ಹೀಗಿದ್ದು ನಿಮ್ಮ ಧರ್ಮದ ಹುಚ್ಚು ಬಾದಶಹರಿಗೆ ಹಿಡಿದಿರುತ್ತದೆ.

ಬೀರ. — ಬೇಗಮ್ ಸಾಹೇಬ್, ಎರಡೂ ಧರ್ಮಗಳನ್ನು ತೂಗಿ ಯಾವುದು ಎಷ್ಟು ಹೆಚ್ಚೆಂಬುದನ್ನು ನಾನು ಅರಿಯೆನು. ಈಗ ನಮ್ಮ ಧರ್ಮವನ್ನು ಉಪದೇಶಿಸಲಿಕ್ಕೆ ನಾನು ಬಂದವನಲ್ಲ. ಬಾದಶಹರು ತಮ್ಮನ್ನು ದ್ರೌಪದಿಯಾಗಿ ವರ್ಣಿಸಬೇಕೆಂದು ಹೇಳಿದ್ದರಿಂದ ಅದನ್ನು ತಮಗೆ ಅರಿಕೆಮಾಡಿಕೊಳ್ಳಲಿಕ್ಕೆ ಬಂದೆನು.

ಬೇಗ. — ದ್ರೌಪದಿ ಎಂದರೆ ಯಾರು? ಗಂಡಸೊ ಹೆಂಗಸೊ? ಬಗಲಿಲ್ಲುರುವುದೇ ಈ ಹೊಸ ಭಾರತ ಗ್ರಂಥವೇನು? ಅದನ್ನು ಇಲ್ಲಿ ತಾ.

ಬೀರ. — (ಪುಸ್ತಕವನ್ನು ಬೇಗಮ್ಮಳ ಮುಂದಿಟ್ಟು) ಇದೇ ಈ ಹೊಸ ಭಾರತವು. ದ್ರೌಪದಿಯು ಪಂಚಪಾಂಡವರ ಹೆಂಡತಿಯಾಗಿದ್ದಳು. ಆಕೆಯು ಮಹಾಸಾಧ್ವಿ, ಮಹಾಪತಿವ್ರತೆ!!

ಬೇಗ. — ಪಂಚಪಾಂಡವರೆಂದರಾರು? ಅವರೇನು ಅರಸರೊ ಸರದಾರರೊ ಸಾಮಾನ್ಯ ಜನರೊ?

ಬೀರ. — ಪಂಚ ಅಂದರೆ ೫. ಪಂಡುರಾಜನ ಮಕ್ಕಳಾದ್ದರಿಂದ ಅವರನ್ನು ಪಾಂಡವರೆಂದು ಕರೆಯುತ್ತಾರೆ. ಅವರೊಳಗೆ ಹಿರಿಯನ ಹೆಸರು ಧರ್ಮರಾಜ, ೨ನೆಯವನ ಹೆಸರು ಭೀಮಸೇನ, ೩ನೆಯವನು ಅರ್ಜುನನು, ೪ನೆಯವನು ನಕುಲನು, ೫ನೆಯವನು ಸಹದೇವನು. ಇವರೆಲ್ಲರು ಅರಸುಕುವರರು. ಇವರೊಳಗೆ ಧರ್ಮರಾಜನು ಅತಿ ಧರ್ಮಿಷ್ಠನೂ ಸತ್ಯಸಂಧನೂ, ಭೀಮಸೇನನು ಅತಿ ಬಲಾಢ್ಯನೂ ಅಭಿಮಾನಿಯೂ, ಅರ್ಜುನನು ಶಸ್ತ್ರಾಸ್ತ್ರವಿದ್ಯದಲ್ಲಿ ಅತಿ ನಿಪುಣನೂ ಜಾಣನೂ, ನಕುಲಸಹದೇವರು ಅತಿಸುಂದರರೂ ಉದಾರರೂ.

ಬೇಗ. — ಇವರೊಳಗೆ ಬಾದಶಹರನ್ನು ಯಾರನ್ನಾಗಿ ವರ್ಣಿಸಿರುವಿ ?

ಬೀರ. — ಬಾದಶಹರೇ ಈ ಭಾರತದ ಅರ್ಜುನರಾಗುವರು.

ಬೇಗ. — ಹಾಗಾದರೆ ನಾನು ಆಗಬೇಕೆಂದಿರುವ ದ್ರೌಪದಿಯು ಈ ಅರ್ಜುನನ ಹೆಂಡತಿಯೇನು ?

ಬೀರ. — ಹೌದು. ಆಕೆಯು ಅರ್ಜುನನೊಬ್ಬನ ಹೆಂಡತಿಯಲ್ಲ; ೫ ಮಂದಿ ಪಾಂಡವರ ಹೆಂಡತಿಯು.

ಬೇಗ. — ಏನಂತಿ ? ಆಕೆಯು ೫ ಜನರ ಮಡದಿಯೇ ?

ಬೀರ. — ಹೌದು. ಧರ್ಮ, ಭೀಮ, ಅರ್ಜುನ, ನಕುಲ, ಸಹದೇವ ಈ ಅಯ್ವರ ಹೆಂಡತಿಯಾಗಿದ್ದಳು.

ಬೇಗ. — ಅರೇ ಅಲ್ಲಾ !! ಒಬ್ಬ ಹೆಂಗಸಿಗೆ ೫ ಮಂದಿ ಗಂಡಂದಿರಿರುವರೇ ? ಗಂಡಂದಿರೋ ? ಮಿಂಡಂದಿರೋ ?

ಬೀರ. — ಬೇಗಮ್ ಸಾಹೇಬ್ ! ಕ್ಷಮಿಸಿರಿ ; ಸಿಟ್ಟಾಗಬೇಡರಿ. ಅರ್ಜುನನೇ ತನ್ನ ಧನುರ್ವಿದ್ಯೆಯಿಂದ ದ್ರೌಪದಿಯನ್ನು ಗೆದ್ದರೂ ಅವನ ತಾಯಿಯಾದ ಕುಂತಿದೇವಿಯು ೫ ಜನರೂ ಆಕೆಯನ್ನು ಮದುವೆಯಾಗಿರೆಂದು ಅಪ್ಪಣೆ ಮಾಡಿದ್ದರಿಂದ, ವಿಧೇಯರಾದ ಮಕ್ಕಳಯ್ವರೂ ಆಕೆಯನ್ನು ಮದುವೆ ಮಾಡಿಕೊಂಡರು. ಮುಂದೆ ನಾರದ ರುಷಿಗಳ ಅಪ್ಪಣೆಯಂತೆ ಒಬ್ಬೊಬ್ಬರು ಆರಾರು ತಿಂಗಳು ಆಕೆಯನ್ನು ಆಳುತ್ತಿದ್ದರು.

ಬೇಗ. — ಇದೇನು ಮದುವೆತನವೋ ಸೂಳೆತನವೋ ?

ಬೀರ. — ಬೇಗಮ್ ಸಾಹೇಬ್ ! ಕ್ಷಮಿಸಿರಿ. ದ್ರೌಪದಿಯು ಮಹಾ ಪತಿವ್ರತೆಯು. ನಾವು ದಿನಾಲು ಬೆಳಿಗ್ಗೆ ಅಹಲ್ಯಾ, ದ್ರೌಪದೀ, ಸೀತಾ, ತಾರಾ, ಮಂಡೋದರೀ ಈ ಅಯ್ವರನ್ನು ಸ್ಮರಿಸುತ್ತೇವೆ.

ಬೇಗ. — ಕಾಫರ !! ರಜಿಯಾ ! (ದಾಸಿಯ ಹೆಸರು) ಈ ಪುಸ್ತಕವನ್ನು ಇಲ್ಲೇ ನನ್ನ ಕಣ್ಣೆದುರಿಗೆ ಸುಟ್ಟು ಬೂದಿಮಾಡು. ಬೇಗನೆ ಸುಡು. ತಡಮಾಡಬೇಡ. ಸುಡುಗಾಡು ಪುಸ್ತಕ !!!

ಬೀರ. — ಬೇಗಮ್ ಸಾಹೇಬ್ ! ತಡೆಯಿರಿ, ತುಸು ತಡೆಯಿರಿ. ಬಾದಶಹರು ಬಹಳ ಹಣ ವೆಚ್ಚಮಾಡಿ ಅತಿಶ್ರಮದಿಂದ ಈ ಗ್ರಂಥವನ್ನು ಬರೆಯಿಸಿದ್ದಾರೆ. ಈ ಗ್ರಂಥದಿಂದ ತಮ್ಮ ಹೆಸರು ಆಚಂದ್ರಾರ್ಕವಾಗಿ ಉಳಿಯುವುದು. ತಾವು ಅದನ್ನು ಸುಡಿಸಿದರೆ ಬಾದಶಹರು ಬಹಳ ಮುನಿಯುವರು.

ಜೀಗ.—ನನಗೆ ಇಂತಹ ಹೆಸರು ಬೇಡ, ಪೆಸರು ಬೇಡ. ದ್ರೌಪದಿ ಯಾಗುವುದು ನನಗೆ ಕುಂದೇ ಸರಿ! ಇಂತಹ ದ್ರೌಪದಿಯು ನಾನು ಎಂದೂ ಆಗಲಾರೆನು. (ದಾಸಿಯ ಕಡೆಗೆ ನೋಡಿ) ಬೇಗನೆ ಹಚ್ಚು ಬೆಂಕಿ. ಏನು ನೋಡುತ್ತಿ? ಮತ್ತೊಂದು ಕಡೆಗೆ ಹಚ್ಚು. ಹೀಗೆ ಉರಿಯಲಿ. ಆ ಕಡೆಯ ಕಾಗದವನ್ನು ಕಟ್ಟಿಗೆಯಿಂದ ಎತ್ತು. ಈಗ ಎಲ್ಲ ಸುಡುತ್ತ ಬಂತು. ಇನ್ನೊಮ್ಮೆ ತಿರುವಿ ಹಾಕು. ಒಂದು ಚೂರನ್ನಾದರೂ ಉಳಿಸಬೇಡ, ಕಂಡೆಯಾ. (ಬೀರಬಲ್ಲನ ಕಡೆಗೆ ಮೋರೆ ತಿರುವಿ) ಬಾದಶಹರಿಗೆ ಹಿಡಿದ ಹುಚ್ಚನ್ನು ಹೋಗಲಾಡಿಸಲಿಕ್ಕೆ ಈ ಹೋಮವು ಸಾಕಾಗುವಂತೆ ಅಲ್ಲಾನು ಮಾಡಲಿ. ಈ ಸುಟ್ಟ ಭಾರತವು ನಮಗೆ ಬೇಡವೆಂದು ಅವರಿಗೆ ಹೇಳಿರಿ. ಇದರಿಂದ ನಮ್ಮ ಹೆಸರು ಕೆಡುವುದೇ ಹೊರತು ಲೇಸಾಗಲಿಕ್ಕಿಲ್ಲ. ಬಾದ ಶಹರಿಗೆ ಬುದ್ಧಿ ಹೇಳುವವರಾರೂ ಇಲ್ಲವಲ್ಲ!!!

ಬೀರಬಲ್ಲನು ಸಲಾಮು ಮಾಡಿ ಉಚಿತ ಪ್ರಕಾರದಿಂದ ಬೀಳ್ಕೊಂಡು ಬಾದಶಹನೆಡೆಗೆ ಹೋಗಿ, ನಡೆದ ಸಂಗತಿಗಳನ್ನೆಲ್ಲ ಸಾದ್ಯಂತವಾಗಿ ವಿವರಿಸಿ ದನು. ಈ ವೃತ್ತಾಂತವನ್ನು ಕೇಳಿ ಬಾದಶಹನು ಬಹಳ ಹಳಹಳಿಸಿದನು.

## ೧೪. ನಾಲ್ಕು ಮಂದಿ ತಿಳಿಗೇಡಿಗಳು

ಒಂದು ದಿವಸ ಬಾದಶಹ ಬೀರಬಲ್ಲರು ವಿನೋದದಿಂದ ಮಾತಾಡುತ್ತ ಕುಳಿತಿರುವಾಗ ಜನರ ತಿಳಿಗೇಡಿತನದ ವಿಷಯವಾಗಿ ಮಾತು ಹೊರಟಿತು.

ಬಾದ.—ಬೀರಬಲ್ಲ! ಜನರ ತಿಳಿಗೇಡಿತನಕ್ಕೆ ಎಲ್ಲೆಯೇ ಇಲ್ಲವೇನು?

ಬೀರ.—ಮಹಾರಾಜ! ಜನರ ತಿಳಿಗೇಡಿತನಕ್ಕೆ ಪರಿಮಿತಿಯೇ ಇಲ್ಲ. ಒಬ್ಬರಿಗಿಂತ ಮತ್ತೊಬ್ಬರು ಹೆಚ್ಚು ತಿಳಿಗೇಡಿಗಳಿರುವರು.

ಬಾದ.—ಬೀರಬಲ್ಲ! ಹಾಗಾದರೆ ನಾಲ್ವರು ಅತಿಮೂರ್ಖರನ್ನು ನನಗೆ ತಂದು ತೋರಿಸುವೆಯಾ?

ಬೀರ.—ಮಹಾರಾಜ! ಮೂರ್ಖರನ್ನು ಹುಡುಕುವುದು ಸರಿಯಾದ ಕೆಲಸವೇ?

ಬಾದ.—ಸರಿಯಾದ್ದಲ್ಲ. ಆದರೂ ಅವರನ್ನು ನೋಡಬೇಕೆಂಬ ಲವಲವಿಕೆಯು ನನ್ನಲ್ಲಿ ಹುಟ್ಟಿದೆ. ಹೇಗಾದರು ಮಾಡಿ ಗೊತ್ತುಹಚ್ಚಿ, ಕರೆದು ಕೊಂಡು ಬಾ ನೋಡೋಣ. ನಿನ್ನ ಶ್ರಮಕ್ಕೆ ತಕ್ಕ ಬಹುಮಾನವನ್ನು ಕೊಡುವೆನು.

ಬೀರ.—ಖುದಾವಂದ್! ನಮ್ಮ ಯೋಗ್ಯತೆಯು ನಮ್ಮ ಗುಣಕರ್ಮ ಗಳನ್ನನುಸರಿಸುತ್ತದೆ. ಇದು ಸರಿಯಾದ ಕೆಲಸವಾಗದಿದ್ದರೂ ತಮ್ಮ ಒತ್ತಾಯದಿಂದ ನಾನು ಈ ಕೆಲಸವನ್ನು ಕಯ್ಕೊಳ್ಳುವೆನು. ಆದರೆ ಇದ ರಿಂದ ನಮ್ಮಿಬ್ಬರ ಯೋಗ್ಯತೆಯು ಕಡಮೆಯಾಗುವುದೆಂಬ ಮಾತನ್ನು ಮರೆಯಕೂಡದು.

ಬಾದ.—ಅದಿರಲಿ. ನಾಲ್ಕು ಜನ ತಿಳಿಗೇಡಿಗಳನ್ನು ತಂದು ತೋರಿಸು, ನೋಡೋಣ. ಅವರು ಎಂತಹರಿರುತ್ತಾರೆಂಬುದನ್ನು ತಿಳಿದುಕೊಳ್ಳಲಿಕ್ಕೆ ಮನಸ್ಸು ಹಾತೊರೆಯುತ್ತದೆ. ಎಷ್ಟು ದಿವಸಗಳಲ್ಲಿ ತೋರಿಸುವೆ?

ಬೀರ.—ಮಹಾರಾಜ! ಅವರಿಗೇನು ಕಡಮೆ. ಇದೇ ಊರಲ್ಲಿ ಒಟ್ಟಿರುತ್ತಾರೆ. ೧೦।೧೫ ದಿವಸಗಳಲ್ಲಿ ತಂದು ತೋರಿಸುವೆನು.

ಮುಂದೆ ೧೦।೧೨ ದಿವಸಗಳಾದ ಬಳಿಕ ಇಬ್ಬರನ್ನು ಕರೆದುಕೊಂಡು, ಬೀರಬಲ್ಲನು ಅರಮನೆಗೆ ಹೋದನು. ಆ ಮಾತು ಈ ಮಾತು ಆದ ಬಳಿಕ,

ಬಾದ.—ಬೀರಬಲ್ಲ! ನೀನು ಅತಿಮೂರ್ಖರನ್ನು ಇನ್ನೂ ತಂದು ತೋರಿಸಲಿಲ್ಲ?

ಬೀರ.—ಮಹಾರಾಜ! ಕರೆತಂದಿದ್ದೇನೆ. ಅವರು ಹೊರಗೆ ಕಾಯ್ದು ಕೊಂಡಿದ್ದಾರೆ.

ಬಾದ.—ಒಳಗೆ ಕರೆ. ನೋಡೋಣ.

ಬೀರಬಲ್ಲನು ಒಬ್ಬನನ್ನು ಒಳಗೆ ಕರೆದು, ಬಾದಶಹನ ಮುಂದೆ ತಂದು ನಿಲ್ಲಿಸಿ—

ಬೀರ.—ಏನಪ್ಪಾ! ನೀನು ನಿನ್ನೆ ಏನು ತೆಗೊಂಡು ಹೇಗೆ ಬಂದೆ?

ಮೊದಲನೆಯ ಮೂರ್ಖ—ನಾನು ಕುದುರೆಯ ಮೇಲೆ ಕುಳಿತು, ಮೇವಿನ ಹೊರೆಯನ್ನು ತಲೆಯ ಮೇಲೆ ಹೊತ್ತುಕೊಂಡು ಬಂದೆನು.

ಬಾದ.– ಮೇವಿನ ಹೊರೆಯನ್ನು ಕುದುರೆಯ ಮೇಲೆ ಏಕೆ ಹೇರಲಿಲ್ಲ?

ಮೊದಲನೆಯ ಮೂರ್ಖ—ಮಹಾಸ್ವಾಮಿ! ಅದು ಪೂರ್ಣ ಗಬ್ಬಿದೆ. ಮೂಕಪ್ರಾಣಿಗೆ ದಯೆ ತೋರಿಸಬೇಕಲ್ಲವೇ?

ಬಾದ.—ನೀನು ಹೊತ್ತುಕೊಂಡರೆ, ಹೊರೆಯ ಭಾರವು ಕುದುರೆಯ ಮೇಲೆ ಬೀಳಲಿಲ್ಲವೇ?

ಮೊದಲನೆಯ ಮೂರ್ಖ—ಮಹಾರಾಜ! ಆ ಭಾರ ಬೀಳಬಾರ ದೆಂತೆಯೇ ನಾನು ಅದನ್ನು ತಲೆಯ ಮೇಲೆ ಹೊತ್ತುಕೊಂಡೆನು. ಪಾಪ! ಅದಕ್ಕೆ ತನ್ನ ಹೊಟ್ಟೆಯ ಭಾರವೇ ಹೆಚ್ಚಾಗಿತ್ತು.

ಬಾದ.—ಒಳ್ಳೆಯದು ಹೋಗು. ಬೀರಬಲ್ಲ, ಇನ್ನೊಬ್ಬನೆಲ್ಲಿ?

ಎರಡನೆಯ ಮೂರ್ಖನು ಬಂದು ಸಲಾಮು ಮಾಡಿ ಬಾದಶಹನ ಮುಂದೆ ನಿಲ್ಲುತ್ತಾನೆ.

ಬೀರ.—ಏನಪ್ಪಾ! ನೀನು ಈ ಹೊತ್ತು ಮುಂಜಾನೆ ಯಾವ ಯಾವ ಸಾಮಾನುಗಳನ್ನು ತೆಗೆದುಕೊಂಡು ಎಲ್ಲಿಗೆ ಹೋಗುತ್ತಿದ್ದೆ?

ಎರಡನೆಯ ಮೂರ್ಖ—ನನ್ನ ಹೆಂಡತಿಯು ನನ್ನನ್ನು ಬಿಟ್ಟು ಬೇರೊ ಬ್ಬನನ್ನು ಇಟ್ಟುಕೊಂಡು, ಅವನಿಗೆ ಬಸುರಾಗಿ, ಅವನ ಮನೆಯಲ್ಲಿಯೇ ಮೊನ್ನೆ ಒಂದು ಗಂಡು ಮಗುವನ್ನು ಹಡೆದಳು. ಆಕೆಯ ಬಾಣಂತಿತನದ ವೆಚ್ಚವನ್ನು ಒಯ್ಯುವಾಗ ತಾವು ನನ್ನನ್ನು ಕಂಡಿರಿ.

ಬಾದ.—ಎರಡನೆಯವನಿಗೆ ಹಡೆದಿದ್ದರೆ ನೀನೇಕೆ ಸಾಮಾನು ತಂದು ಕೊಡಬೇಕು?

ಎರಡನೆಯ ಮೂರ್ಖ—ಆಕೆಯ ಮಿಂಡನು ನಿನ್ನೆ ಮನೆಮುಟ್ಟ ಬಂದು ಹೇಳಿ ಹೋದನು.

ಬಾದ.—ಏನು ಹೇಳಿದನೋ? ಅವನು ನಿನ್ನ ಮನೆಗೆ ಬಂದುದು ಹೇಗೆ?

ಎರಡನೆಯ ಮೂರ್ಖ—ಮಹಾರಾಜ! ಅವನಿಗೇನು ನನ್ನ ಮನೆ ಗೊತ್ತಿಲ್ಲವೇ? ಅವನು ಬಂದು "ನಿನ್ನ ಹೆಂಡತಿಯು ನಿನ್ನೆ ಹಡೆದಳು. ಹೆರಿಗೆಯ ಸಾಮಾನುಗಳನ್ನು ನಾಳೆ ಬೆಳಿಗ್ಗೆ ನೀನು ತಂದುಕೊಡಬೇಕು. ಇಲ್ಲವಾದರೆ ಕೂಸುಬಾಣಂತಿಯರು ಸಾಯಬಹುದು. ನನ್ನ ಜವಾಬ್ದಾರಿಯು ಮುಗಿಯಿತು. ಅವರಿಗೇನಾದರೂ ಆದರೆ ಅದಕ್ಕೆ ಇನ್ನು ಮುಂದೆ ನೀನೇ ಜವಾಬ್ದಾರನು" ಎಂದು ಹೇಳಿ ಹೋದನು. ಏನು ಮಾಡಬೇಕು ಸ್ವಾಮಿ, ನಿರ್ವಾಹವಿಲ್ಲದೆ ಬಂತು.

ಬಾದ.—ನಿನ್ನ ಹೆಂಡತಿಯು ಅವನಿಗೆ ಹಡೆದಿದ್ದರೆ, ಅವನೇ ಆಕೆಯ ಬಾಣಂತಿತನದ ಖರ್ಚನ್ನು ಮಾಡಬೇಕು. ಅವನು ಹಾಗೆ ಹೇಳಿದರೆ, ನೀನು ತಕರಾರು ಮಾಡಬೇಕಾಗಿತ್ತು.

ಎರಡನೆಯ ಮೂರ್ಖ—ಮಹಾರಾಜ! ನಾನು ಹಾಕಿಯಾಡಿದೆನು. ಆದರೂ ಅವನು ಕೇಳಲಿಲ್ಲ. ಮತ್ತು ಕಾಜಿಸಾಹೇಬರು ಅವನ ಪಕ್ಷದವರಿರುತ್ತಾರೆ.

ಬಾದ.—ನಿನ್ನ ತಕರಾರಿಗೆ ಅವನು ಏನು ಹೇಳಿದನು?

ಎರಡನೆಯ ಮೂರ್ಖ—ನಾನು ಬಾಣಂತಿತನದ ವೆಚ್ಚವನ್ನು ತಂದು ಕೊಡದಿದ್ದರೆ, ಕಾಜಿಯ ಮುಂದೆ ಫಿರ್ಯಾದಿಯನ್ನು ಮಾಡಿ, ನನ್ನ ಹೆಂಡತಿಯನ್ನಿಟ್ಟುಕೊಂಡು ಬಸುರುಮಾಡಿದ ಬಗ್ಗೆ ಇನಾಮಾಗಿ ೧೦೦ ವರಹ ತೆಗೆದುಕೊಳ್ಳುವೆನೆಂದು ಹೇಳಿ ನನ್ನನ್ನು ಬೆದರಿಸಿದನು. ಆದ್ದರಿಂದ ಅಂಜಿ ಸಾಮಾನು ತಂದು ಹಾಕಿದೆನು.

ಬಾದ.—ಶಾಬಾಸ್, ನೀನು ಒಳ್ಳೆಯ ಜಾಣನು. ಸಾಕು ಹೋಗು. (ಬೀರಬಲ್ಲನನ್ನು ಕುರಿತು) ನಾನು ಇಂತಹ ಮೂರ್ಖನನ್ನು ಎಂದೂ ನೋಡಿದ್ದಿಲ್ಲ. ೩ನೆಯ ಮೂರ್ಖನೆಲ್ಲಿ?

ಬೀರ.—ಮಹಾರಾಜ! ಇಲ್ಲೇ ಕುಳಿತಿರುತ್ತೇನೆ.

ಬಾದ.—ನಿನ್ನನ್ನು ಕೇಳಲಿಲ್ಲ. ೩ನೆಯ ಮೂರ್ಖನನ್ನು ಕರೆತರಿಸು.

ಬೀರ.—ಖುದಾವಂದ್! ನಾನೇ ಆ ಮೂರ್ಖನು. ತಮ್ಮ ಎದುರಿಗೆ ಸಿದ್ಧವಾಗಿ ಕುಳಿತಿರುತ್ತೇನೆ.

ಬಾದ. — ಬೀರಬಲ್ಲ! ಇದೇನು ಚೇಷ್ಟೆ? ೩ನೆಯುವನನ್ನು ಕರೆತರಿಸು.

ಬೀರ. — ಮಹಾರಾಜ, ಮೂರ್ಖರಲ್ಲದವರು ಜಾಣರನ್ನೂ ಓದಿದವರನ್ನೂ ವೈರಾಗ್ಯಶೀಲರನ್ನೂ ಹುಡುಕುತ್ತಾರೆ. ನಾನು ಹಾಗೆ ಮಾಡದೆ, ಮೂರ್ಖರನ್ನು ಹುಡುಕುವ ಕೆಲಸ ಮಾಡಿದ್ದರಿಂದ ನಾನು ಹೆಚ್ಚಿನ ಮೂರ್ಖನಲ್ಲವೇ ?

ಬಾದ. — ನೀನಾಗಿ ಮೂರ್ಖರನ್ನು ಹುಡುಕಲಿಲ್ಲ. ನಾನು ಹೇಳಿದೆನೆಂದು ಹುಡುಕಿದಿ.

ಬೀರ. — ತಾವು ಅಪ್ಪಣೆಕೊಟ್ಟಂತೆ ನಾನು ಅದಕ್ಕೂ ಹೆಚ್ಚಿನ ಮೂರ್ಖನಾದೆನು. ತಮ್ಮ ಬಹುಮಾನದಾಶೆಗೆ ನಾನು ಮೂರ್ಖರನ್ನು ಹುಡುಕಿದೆನು. ೨ನೆಯ ಮೂರ್ಖನು ಇನಾಮಿನ ಹಣ ಉಳಿಸಿಕೊಳ್ಳುವ ಆಶೆಯಿಂದ ಬಾಣಂತಿತನದ ವೆಚ್ಚವನ್ನು ಒಯ್ದುಕೊಟ್ಟನು. ನಮ್ಮಿಬ್ಬರೊಳಗೆ ನಾನೇ ಹೆಚ್ಚಿನ ತಿಳಿಗೇಡಿಯಲ್ಲವೇ ?

ಬಾದ. — ಒಳ್ಳೆಯದು, ಅದಿರಲಿ. ನಾಲ್ಕನೆಯುವನೆಲ್ಲಿ?

ಬೀರ. — ಮಹಾರಾಜ ಕ್ಷಮಿಸಿರಿ. ಈ ಮೂರ್ಖರನ್ನು ಹುಡುಕಲಿಕ್ಕೆ ಹೇಳಿದವರೇ ನಾಲ್ಕನೆಯುವರು.

ಬಾದ. — ಅದನ್ನು ಹೇಳಿದವನು ನಾನೇ. ೪ನೆಯ ಮೂರ್ಖನು ನಾನೇ ಏನು ?

ಬೀರ. — ಮಹಾಸ್ವಾಮಿ, ಅದನ್ನೇಕೆ ನನ್ನ ಬಾಯಿಂದ ಆಡಿಸುತ್ತೀರಿ? ನಾನು ಮೊದಲೇ ಈ ಕೆಲಸವು ಸರಿಯಾದ್ದಲ್ಲವೆಂದು ಹೇಳಿದೆನು. ತಾವು ಹಟಹಿಡಿದಿರಿ.

ಬಾದ. — ಹೌದು, ನೀನು ಹೇಳುವುದೆಲ್ಲ ದಿಟ. ನೀನು ನನಗೆ ಒಳ್ಳೆಯ ಬುದ್ಧಿಯನ್ನು ಕಲಿಸಿದೆ, ನಿನ್ನ ಉಪಕಾರವನ್ನು ನಾನು ಮರೆಯಲಾರೆನು. ಇಂದಿನಿಂದ ನಾನು ಎಂದೂ ಇಂತಹ ಮೂರ್ಖತನದ ಕೆಲಸವನ್ನು ಹೇಳುವುದಿಲ್ಲ. ಈಗ ಮಾಡಿದ ತಪ್ಪಿನ ಜುಲ್ಮಾನೆಯಾಗಿ ಈ ವರಹದ ಚೀಲವನ್ನು ಕೊಡುತ್ತೇನೆ. ನನ್ನ ತಪ್ಪನ್ನು ಮನ್ನಿಸು. ಮುಂದೆ ಎಂದೂ ಇಂತಹ ತಪ್ಪು ಮಾಡುವುದಿಲ್ಲ. ನನ್ನನ್ನು ನಿನ್ನ ಶಿಷ್ಯನಾಗಿ ಭಾವಿಸು.

## ೧೫. ಮುತ್ತಿನ ಬಿತ್ತಿಗೆ

ಒಂದು ದಿವಸ ಬಾದಶಹಬೇಗಮ್ಮರು ಮಧ್ಯಾಹ್ನದ ಊಟ ಮಾಡಿ, ವಿನೋದದಿಂದ ಮಾತಾಡುತ್ತ ತೂಗುಮಂಚದ ಮೇಲೆ ಕುಳಿತುಕೊಂಡು ತೂಗಿಕೊಳ್ಳುತ್ತಿರುವಾಗ, ಹೂಸಿನ ಸಂಬಂಧವಾಗಿ ಮಾತು ಹೊರಟಿತು.

ಬಾದ.—ಹೂಸು ಬಿಡುವವರು ಬಲು ಹೇಸಿಗಳು, ಅವರ ಮೋರೆ ನೋಡಬಾರದು.

ಬೇಗ.—ಅಹುದು, ಹೂಸು ಬಿಡುವುದು ಹೊಲಸಾದ ಅಭ್ಯಾಸ. ಕೆಲವರಂತೂ ಟುಸುಟುಸೆಂದು ಬಿಟ್ಟೇ ಬಿಡುತ್ತಾರೆ. ಅವರ ಹತ್ತರ ಕೂಡಲಿಕ್ಕಾಗುವದಿಲ್ಲ.

ಬಾದ.—ತಿನ್ನಾಸಕರೇ ಬಹುಶಃ ಕೆಟ್ಟ ಹೂಸು ಬಿಡುತ್ತಾರೆ. ಅದು ಅಶಿಕ್ಷಣದ ಫಲವೇಸರಿ. ಅಂತಹರನ್ನು ಮನೆಯಲ್ಲಿಟ್ಟುಕೊಳ್ಳಕೂಡದು. ಅವರ ಮೋರೆಯನ್ನು ನೋಡಬಾರದು.

ಈ ಮಾತು ಮುಗಿಯುವಷ್ಟರಲ್ಲಿ ಕರ್ಮಧರ್ಮಸಂಯೋಗದಿಂದ, ಬೇಗಮ್ಮಳು ದುರ್ಗಂಧಯುಕ್ತವಾದ ಕೆಟ್ಟ ಹೂಸನ್ನು ಬಿಟ್ಟಳು. ಬಾದಶಹನಿಗೆ ಬಹಳ ಸಿಟ್ಟು ಬಂದುದರಿಂದ ಅವನ ಕಣ್ಣು ಕೆಂಪಗಾದವು; ಸಿಟ್ಟಿನಿಂದ ಆಕೆಯನ್ನು ಬಿರಬಿರನೆ ನೋಡತೊಡಗಿದನು. ಕೊನೆಗೆ ತಡೆಯಲಾರದಷ್ಟು ಸಿಟ್ಟು ಹೆಚ್ಚಾದ್ದರಿಂದ,

ಬಾದ.—ಬೇಗಮ್ಮ! ನೀನು ಇಷ್ಟು ಹೇಸಿಯೆಂದು ನಾನು ಎಣಿಸಿದ್ದಿಲ್ಲ. ನೀನು ಅರಮನೆಯಲ್ಲಿರಲಿಕ್ಕೆ ತಕ್ಕವಳಲ್ಲ. ಈಗಲೇ ಇಲ್ಲಿಂದ ಹೊರಡು. ತೋಟದ ಮನೆಯಲ್ಲಿರಹೋಗು. ನಾನು ನಿನ್ನ ಮೋರೆ ನೋಡುವುದಿಲ್ಲ. ಏಳು, ನಡೆ. (ಆಳುಗಳ ಕಡೆಗೆ ನೋಡಿ) ಬಂಡಿತೇರುಗಳನ್ನು ಸಿದ್ಧಮಾಡಿ ಈಕೆಯ ಸಾಮಾನುಗಳನ್ನೆಲ್ಲ ಒಯ್ಯಿರಿ. (ಬೇಗಮ್ಮಳ ಕಡೆಗೆ ನೋಡಿ) ಸಂಜೆಯೊಳಗೇ ನೀನು ಇಲ್ಲಿಂದ ಹೋಗಲಿಕ್ಕೇ ಬೇಕು. ತಡಮಾಡಕೂಡದು. ಎಚ್ಚರಿಕೆ ಇರಲಿ.

ದಾಸಿಯರು ಬೇಗಮ್ಮಳನ್ನು ಕರೆದುಕೊಂಡು ಹೋದರು. ಹೊತ್ತು ಮುಳುಗುವುದರೊಳಗೇ ಬೇಗಮ್ಮಳು ತನ್ನ ಸರಂಜಾಮುಸಹಿತವಾಗಿ ತೋಟದ ಮನೆ ಸೇರಿದಳು. ಬೇಗಮ್ಮಳಿಗೆ ಅರಮನೆಯನ್ನು ಬಿಡಲಿಕ್ಕೆ ಹೇಳಿದ ಬಳಿಕ ಬಾದಶಹನು ಓಲಗಕ್ಕೆ ಹೋದನು. ಅವನ ಸಿಟ್ಟು ಇನ್ನೂ ಕಡಮೆಯಾಗಿದ್ದಿಲ್ಲ. ಹೂಸಿನ ವಿಷಯವು ಅವನ ಮನಸ್ಸಿನಲ್ಲಿ ಕುದಿಯುತ್ತಿತ್ತು. ಅಲ್ಲಿ ಹೋದ ಕೂಡಲೆ,

ಬಾದ.—(ಸರದಾರರನ್ನು ನೋಡಿ) ತಿನ್ನಾಸಕರು ಅಳತೆಗೆಟ್ಟು ತಿಂದು ಕೆಟ್ಟ ಹೂಸು ಬಿಡುತ್ತಾರೆ. ಅಂತಹರು ಬಲು ಹೇಸಿಗಳು. ಅವರೊಡನೆ ಬಳಿಕೆ ಮಾಡಕೂಡದು. ನಿಮ್ಮೊಳಗೆ ಅಂತಹರಾರಾದರೂ ಇರುತ್ತಾರೇನು? ಇದ್ದರೆ ಅವರು ನನಗೆ ಬೇಡ.

ಸರದಾರರೆಲ್ಲರೂ ಈ ಮಾತನ್ನು ಕೇಳಿ ಹೆದರಿ, ಒಬ್ಬರ ಮೋರೆಯನ್ನು ಮತ್ತೊಬ್ಬರು ಮಿಕಿಮಿಕಿ ನೋಡತೊಡಗಿದರು. ಬಾದಶಹನ ಮುನಿಸು ಹೆಚ್ಚಿದ್ದರಿಂದ, ಅವನು ಪ್ರತಿಯೊಬ್ಬನನ್ನು ಕೇಳತೊಡಗಿದನು. ಎಲ್ಲರು ಅಂಜಿ ತಾವು ಎಂದೂ ಹೂಸು ಬಿಡುವುದಿಲ್ಲೆಂದು ಹೇಳಿದರು. ಬಾದಶಹನ ಸಿಟ್ಟು ತುಸು ತಗ್ಗಿತು. ಬೀರಬಲ್ಲನ ಸರತಿಯು ಬಂದಿತು.

ಬೀರ.—ಖುದಾವಂದ್, ಇವರೆಲ್ಲರೂ ದೇವತಾಪುರುಷರು. ಆದ್ದರಿಂದ ಇವರು ಹೂಸುಬಿಡುವುದಿಲ್ಲ. ಧನಿಯರು ನನ್ನ ಅಪರಾಧವನ್ನು ದಯವಿಟ್ಟು ಕ್ಷಮಿಸಬೇಕು. ಇವರಷ್ಟು ದೊಡ್ಡ ಯೋಗ್ಯತೆಯುವನು ನಾನಲ್ಲ. ನಾನು ಹುಲ್ಲು ಮನುಜನು. ನಾನು ಒಮ್ಮೊಮ್ಮೆ ಹೂಸು ಬಿಡುತ್ತೇನೆ.

ಬಾದ.—ಬೀರಬಲ್ಲ! ಏನು ಹೇಳುತ್ತೀ? ನೋಡು, ವಿಚಾರಮಾಡು. ಎಚ್ಚರದಿಂದ ಮಾತಾಡು. ನೀನು ಇಷ್ಟು ಹೇಸಿಯಲ್ಲೆಂದು ನನ್ನ ತಿಳಿವಳಿಕೆಯುಂಟು. ಆದಕಾರಣ ವಿಚಾರಮಾಡಿ ಹೇಳು.

ಬೀರ.—ಮಹಾರಾಜ ತಮ್ಮ ಪಾದಸಾಕ್ಷಿಯಾಗಿ ನಾನು ಇದುವರೆಗೆ ತಮ್ಮ ಮುಂದೆ ಸುಳ್ಳು ಹೇಳಿಲ್ಲ. ನಾನು ಯಾವಾಗಲಾದರೂ ಹೂಸು ಬಿಡುವುದುಂಟು.

ಬಾದ. — ಛೀ! ನೀನು ಹೇಸಿಯಾಗಿರುತ್ತಿ. ನೀನು ಇಲ್ಲಿ ಕೂಡಬೇಡ. ಹೂಸು ಬಿಡುವುದನ್ನು ಬಿಡುವ ವರೆಗೆ ನೀನು ನನ್ನ ದರ್ಬಾರಕ್ಕೆ ಬರಬೇಡ.

ಈ ಮಾತು ಮುಗಿಯುವುದಕ್ಕಿಂತ ಮೊದಲೇ ಬೀರಬಲ್ಲನು ತನ್ನ ವಲ್ಲಿಯನ್ನೂ ಕೋಲನ್ನೂ ತೆಗೆದುಕೊಂಡು ಅಣಿಯಾಗಿ (ಸಿದ್ಧನಾಗಿ), ಬಾದಶಹನಿಗೆ ಮುಜರೆ ಹೊಡೆದು, ಮನೆಗೆ ಹೊರಟುಹೋದನು.

ಅತ್ತ ಬೇಗಮ್ಮಳು ಚಿಂತೆಯಲ್ಲಿ ಮುಳುಗಿದಳು. ಹೂಸು ಬಿಡುವುದು ಮನುಷ್ಯ ಸ್ವಭಾವವಾದ್ದರಿಂದ ಬಾದಶಹನು ತನ್ನಮೇಲೆ ಇಷ್ಟು ಏಕೆ ಮುನಿದನೆಂಬುದು ಆಕೆಗೆ ತಿಳಿಯಲಿಲ್ಲ. ಬಾದಶಹನ ಒಲುಮೆಯನ್ನು ಗಳಿಸಲಿಕ್ಕೆ ಹಲವು ಹಂಚಿಕೆಗಳನ್ನು ಹಾಕಿದಳು. ಬಾದಶಹನಿಗೆ ಮರುಕ ಹುಟ್ಟಬಹುದೆಂದು ಎಣಿಸಿದಳು. ಆದರೆ ಅದು ಸುಳ್ಳಾಯಿತು. ಕ್ಷಮಿಸಬೇಕೆಂದು ಬೇಡಿಕೊಳ್ಳಲಿಕ್ಕೆ ದೂತಿಯರನ್ನು ಕಳುಹಿದಳು. ಬಾದಶಹನು ಅವರ ಅರಿಕೆಗೆ ಕಿವಿಗೊಡಲಿಲ್ಲ. ತಾನು ಒಪ್ಪತ್ತೇ ಉಂಡು ಅವನ ಬದಿಯಲ್ಲಿರುವೆನೆಂದು ಹೇಳಿ ಕಳಿಸಿದಳು. ಬಾದಶಹನು ಅದಕ್ಕೆ ಒಡಂಬಡಲಿಲ್ಲ. ಈ ಮೇರೆಗೆ ಎಲ್ಲ ಪ್ರಯತ್ನಗಳೂ ವ್ಯರ್ಥವಾದ್ದನ್ನು ಕಂಡು ದಿನಾಲು ಕೊರಗಿ ಸೊರಗಲಾರಂಭಿಸಿದಳು. ಅದನ್ನು ನೋಡಿ ಕನಿಕರಪಟ್ಟು, ಆಕೆಯ—

ಪ್ರೀತಿಯ ದಾಸಿ. — ಅಮ್ಮಾ! ತಾವು ಹೀಗೆ ಕೊರಗಿದರೆ, ಮುಂದೆ ಗತಿಯೇನು! ತುಸು ತಾಳಿಕೊಳ್ಳಿರಿ, ಸಮಾಧಾನ ಮಾಡಿಕೊಳ್ಳಿರಿ. ಬಾದಶಹರು ತಮ್ಮನ್ನು ಕಡೆತನಕ ಬಿಡುವರೇ? ಛೇ, ಹಾಗೆ ಎಂದೂ ಆಗಲಿಕ್ಕಿಲ್ಲ. ಏನಾದರೂ ಬೇರೆ ಹಂಚಿಕೆ ಮಾಡೋಣ. ಧೈರ್ಯ ಬಿಡಬೇಡರಿ. ಧೈರ್ಯಮ್ ಸರ್ವತ್ರ ಸಾಧನಮ್.

ಬೇಗಮ್. — ಏನು ಮಾಡಬೇಕೇ? ಮಾಡಬಹುದಾದ ಎಲ್ಲ ಪ್ರಯತ್ನವನ್ನೂ ಮಾಡಿದೆನು. ಅವರ ಮನಸ್ಸಿನಲ್ಲಿ ಎಳ್ಳಷ್ಟಾದರೂ ಕರುಣೆ ಹುಟ್ಟಲೊಲ್ಲದು. ಮಾಡಿದ್ದೆಲ್ಲ ಹೊಳೆಯಲ್ಲಿ ಹುಣಸೆಹಣ್ಣು ತೊಳೆದಂತೆ ಆಗುತ್ತದೆ. ನಾನು ಬದುಕಿದ್ದು ಪ್ರಯೋಜನವೇನು? ಬೇಗನೆ ದೇವರು ಕಣ್ಣು ಮುಚ್ಚಿದರೆ ಲೇಸಾಗುವುದು.

ದಾಸಿ. — ಹೀಗೆ ಅಮಂಗಲ್ಯವಾದ ಮಾತನ್ನು ಆಡಬೇಡರೆವ್ವಾ. ತಪ್ಪಾಯಿತೆನ್ನಿರಿ. ಅರಷಣ ಕುಂಕುಮ ಎನ್ನಿರಿ; ನಿಮ್ಮಿಬ್ಬರನ್ನು ಕೂಡಿಸುವುದೇನೂ ಅಸಾಧ್ಯವಲ್ಲ. ನಿಮ್ಮ ನಲ್ಲನ ಅಕ್ಕರೆ ನಿಮ್ಮ ಮೇಲೆ ಬಹಳವಾಗಿರುವದು. ಅವನಿಗೆ ಬೇಗನೆ ಪಶ್ಚಾತ್ತಾಪ ಹುಟ್ಟಿ, ನಿಮ್ಮನ್ನು ಕರೆಯಿಸುವನು. ತಲೆಗೇರಿದ ಅವನ ಹುಚ್ಚೆಲ್ಲವು ಕಡಮೆಯಾಗಲಿ. ತುಸು ತಡೆಯಿರಿ. ಅವನ ಹೃದಯವೇನೂ ಕಲ್ಲಿನದಲ್ಲ.

ಚೀಸ. — ಅವರು ಕಲ್ಲೆದೆಯವರು. ಈಗ ತಿಂಗಳಾಯಿತು. ಅವರ ಮನಸ್ಸು ತುಸುವಾದರೂ ಕರಗಿದೆಯೇ? ಇನ್ನೂ ಅವರು ನನ್ನನ್ನು ನೆನಿಸುವುದಿಲ್ಲ. ಅವರಿಗೇನು ಹೆಂಗಸರು ಕಡಮೆಯೇ? ನನ್ನನ್ನು ಮೆಟ್ಟಿ ಹಾರುವಂತಹರು ಎಷ್ಟೋ ಮಂದಿ ಅವರ ಆಶ್ರಯದಲ್ಲಿದ್ದಾರೆ.

ದಾಸಿ. — ಇಷ್ಟು ವರ್ಷ ಆ ಹೆಂಗಸರಿರಲಿಲ್ಲವೇ? ಇದ್ದರೂ ನಿಮ್ಮ ಮೇಲೆ ಇಷ್ಟು ಜೀವಪ್ರಾಣ ಏಕಾಗಿದ್ದರು. ಪ್ರೀತಿಗೆ ಚೆಲುವಿಕೆ ಒಂದೇ ಕಾರಣವಲ್ಲ. ಒಂದು ವಿಶಿಷ್ಟವಾದ ದೈವಿಕ ಶಕ್ತಿಯು ಗಂಡಹೆಂಡಂದಿರ ಮನಸ್ಸುಗಳನ್ನು ಕೂಡಿಸುತ್ತದೆ. ಈಗ ಸಿಟ್ಟಿನ ಭರದಿಂದ ಆಶಕ್ತಿಯು ಕುಗ್ಗಿದ್ದರೂ ಬೇಗನೆ ಅದು ಚೇತರಿಸಿಕೊಂಡೇಳುವುದು ನಿಶ್ಚಯ. ಹೆದರಬೇಡರಿ.

ಚೀಸ. — ಏನು ಏಳುತ್ತದೆಯೋ? ಏನು ಮಲಗುತ್ತದೆಯೋ? ಈಗಂತೂ ನನಗೆ ಯಾವ ಉಪಾಯವು ತೋರಲೊಲ್ಲದು. ಮುಗಿಲೇ ಕಡಿಕೊಂಡು ಬಿದ್ದಂತಾಗಿದೆ. ಯಾರನ್ನು ಶರಣು ಹೋಗಲಿ? ಯಾರು ನನಗೆ ನೆರವಾದಾರು? ಯಾರಿಗೆ ಹೇಳಿಕೊಂಡರೆ, ನನ್ನ ನಲ್ಲನು ನನ್ನನ್ನು ಕೂಡುವನು? ಏನು ಮಾಡಲಿ? ದೇವರಿಗೆ ನನ್ನ ಮೇಲೆ ಕರುಣೆ ಬರಲೊಲ್ಲದೇಕೆ? (ಎಂದು ದೊಡ್ಡ ದನಿಯಿಂದ ಅಳುತ್ತಾಳೆ).

ದಾಸಿ. — ಅಮ್ಮಾ! ಅಳಬೇಡರಿ. ಸಮಾಧಾನ ಮಾಡಿಕೊಳ್ಳಿರಿ; ನಾನು ಹೇಗಾದರೂ ಮಾಡಿ ನಿಮ್ಮಿಬ್ಬರನ್ನೂ ಕೂಡಿಸುವೆನು. ಚಿಂತೆಪಡಬೇಡರಿ.

ಚೀಸ. — ನೀನು ಏನು ಮಾಡಬಲ್ಲೆ? ನಿನ್ನ ಕಯ್ಯಿಂದ ಏನಾದೀತು? ನಾನು ಮಾಡುವ ವಿಶ್ವಪ್ರಯತ್ನಗಳೆಲ್ಲ ವ್ಯರ್ಥವಾಗಲಿಲ್ಲವೇ?

ದಾಸಿ.— ಆದರೂ ಏನಾಯಿತು? ಮತ್ತೇನೂ ಹರವು ಇಲ್ಲವೇ? ಬಾದಶಹರು ಬೀರಬಲ್ಲನ ಜೀವದ ಗೆಳೆಯರು. ಅವನನ್ನೇ ಶರಣು ಹೋಗಿರಿ. ಅವನು ಏನಾದರೂ ಹರವು ಹುಡುಕುವನು.

ಜೀನ.— ಬೀರಬಲ್ಲ, ಕಾಫರ. ಅವನ ಹೆಸರು ಕೇಳಿದ ಕೂಡಲೆ ನನ್ನ ಮೈಯೆಲ್ಲ ಉರಿಯುತ್ತದೆ. ಅವನು ಆ ರಾಮಾಯಣಭಾರತ ಬರೆಯಿ ಸಲಿಕ್ಕೆ ಆರಂಭಿಸಲಿಲ್ಲವೇ? ನೀನೇ ಅವನ್ನು ಸುಡಲಿಲ್ಲವೇ?

ದಾಸಿ.— ಹೌದು, ಅವನೇನು ಮಾಡಿಯಾನು? ಬಾದಶಹರೇ ಅವು ಗಳನ್ನು ಬರೆಯಿಸಲಿಕ್ಕೆ ಹೇಳಲಿಲ್ಲವೇ? ಅವನ ಮನಸ್ಸಿನಲ್ಲಿ ಅವನ್ನು ಬರೆ ಯಿಸುವದಿರಲಿಲ್ಲವಂತೆ.

ಜೀನ.— ಏನಾದರೂ ಆಗಲಿ, ಅವನನ್ನು ನಾನು ಮರೆಹೋಗಲಾರೆನು. ನಮ್ಮ ಮುಸುಲ್ಮಾನ ಧರ್ಮವನ್ನು ಕೆಡಿಸುವವನೇ ಅವನು. ಬೇರೆ ಯಾರಿ ಗಾದರು ಹೇಳಿಕೊಳ್ಳಲಿಕ್ಕೆ ಅಣಿಯಾಗಿರುತ್ತೇನೆ.

ದಾಸಿ.— ಅಮ್ಮಾಜಿಯವರೇ! ತಾವು ಹೀಗೆ ಹಟಹಿಡಿದರೆ ಹೇಗೆ? ಹೊತ್ತು ಬಂದಾಗ ಕತ್ತೆಯ ಕಾಲು ಹಿಡಿಯಬೇಕು. ಬೀರಬಲ್ಲನಷ್ಟು ಜಾಣರು ನಮ್ಮ ನಾಡಿನಲ್ಲೇ ಇಲ್ಲ. ಅವನಿಗೆ ಬಾದಶಹರ ಮಟ್ಟೆಲ್ಲ ಗೊತ್ತುಂಟು. ಬೇರೆಯವರಿಂದ ಈ ಕೆಲಸವು ಆಗದೆಂದು ತೋರುತ್ತದೆ. ತಾವು ಗಟ್ಟಿ ಮನಸ್ಸು ಮಾಡಿ, ಅವನೊಡನೆ ಅಂಗಲಾಚಿ ಬೇಡಿಕೊಂಡರೆ, ಅವನು ತಮ್ಮನ್ನು ಈ ಗಂಡಾಂತರದಿಂದ ಪಾರುಮಾಡಬಹುದು.

ಜೀನ.— ನನಗೆ ಏನೂ ತಿಳಿಯಲೊಲ್ಲದು. ನನಗೆ ಹುಚ್ಚು ಹಿಡಿ ದಿದೆ. ಏಕಾಗಲೊಲ್ಲದು? ನೀನು ಹೇಳಿದಂತೆ ಮಾಡುವೆನು. ಆ ಕಾಫರ ನಿಗೆ ಹೇಳಿಕೊಂಡುದಕ್ಕೆ ದೇವರು ನನ್ನನ್ನು ಕ್ಷಮಿಸಲಿ, ಹೋಗು; ಅವನನ್ನು ಕರೆದುಕೊಂಡು ಬಾ.

ದಾಸಿ.— ಈಗ ಹಾರವರ (ಬ್ರಾಹ್ಮಣರ) ಜಳಕದ (ಸ್ನಾನದ) ಹೊತ್ತು. ಒಂಬತ್ತು ತಾಸಿನ ಕಡೆಗೆ (ಸುಮಾರಿನಲ್ಲಿ) ಹೋಗಿ ಕರೆಕೊಂಡು ಬರುವೆನು. ದೇವರು ನಮ್ಮ ಕೆಲಸವನ್ನು ಕಯ್ಗೂಡಿಸುವನು. (ಹಲ್ಲಿಯ ಸದ್ದು ಕೇಳಿ) ಅಮ್ಮಾಜಿಯವರೇ ಈ ಹಲ್ಲಿಯ ನುಡಿ ಬಹಳ ಶುಭಕರವಾಗಿರುತ್ತದೆ.

ನಾನು ನಾಲ್ಕಾರು ಸಾರಿ ಪರೀಕ್ಷಿಸಿದ್ದೇನೆ. ನಮ್ಮ ಈ ಪ್ರಯತ್ನವು ಸಫಲ ವಾಗವುದೆನ್ನಲಿಕ್ಕೆ ಅಡ್ಡಿಯಿಲ್ಲ. ಇನ್ನು ಉಮ್ಮಳಿಸುವ ಕಾರಣವಿಲ್ಲ.

ದಾಸಿಯು ತಾನು ಹೇಳಿದಂತೆ ಬೀರಬಲ್ಲನನ್ನು ಕರೆತಂದಳು. ಬೇಗ ಮ್ಮಳು ಅವನನ್ನು ಅತ್ಯಾದರದಿಂದ ಕರೆದು ಕುಳ್ಳಿರಿಸಿಕೊಂಡಳು.

**ಬೇಗ.**—ಬೀರಬಲ್ಲ! ನನಗೊಂದು ದೊಡ್ಡ ವಿಪತ್ತು ಒದಗಿದೆ. ನೀನು ಕೇಳಿರಬಹುದು. ಬಾದಶಹರು ನನ್ನ ಮೇಲೆ ಬಹಳವಾಗಿ ಮುನಿ ದಿರುತ್ತಾರೆ.

**ಬೀರ.**—ನನಗೆ ಗೊತ್ತಿದ್ದಿಲ್ಲ, ಈ ಹೊತ್ತು ಮುಂಜಾನೆ ತಮ್ಮ ದಾಸಿ ಯು ಏನೋ ತುಸು ಹೇಳಿದಳು. ಸಿಟ್ಟಾಗಲಿಕ್ಕೆ ಕಾರಣವೇನು ?

**ಬೇಗ.**—ಕಾರಣವೇನೂ ದೊಡ್ಡದಲ್ಲ. ಅವರು ಹತ್ತರಿದ್ದಾಗ ನಾನು ಹೂಸು ಬಿಟ್ಟುದೇ ಕಾರಣ. ಎಲ್ಲರು ಹೂಸು ಬಿಡುವುದಿಲ್ಲವೇ ? ಬಾದ ಶಹರು ಎಷ್ಟೋ ಸಾರಿ ಹೂಸು ಬಿಟ್ಟುದು ನನಗೆ ಗೊತ್ತಿದೆ. ಏನು ಮಾಡ ಬೇಕು ?

**ಬೀರ.**—ಮಾಡುವುದಿಲ್ಲ ಮುಟ್ಟುವುದಿಲ್ಲ. ಬಂದುದನ್ನು ಅನುಭವಿ ಸಲೇ ಬೇಕು. ಅರಸಿನಿಚ್ಛೆಯೋ ಬದನೆಕಾಯಿಚ್ಛೆಯೋ ? ತಾವು ಹೂಸು ಬಿಟ್ಟುದರಿಂದ ತಮ್ಮನ್ನು ಹೊರಗೆ ಹಾಕಿದರು. ನಾನು ಎಂದಾದರೂ ಹೂಸು ಬಿಡುವುದುಂಟೆಂದು ಹೇಳಿದ್ದರಿಂದ ಬಾದಶಹರು ಸಿಟ್ಟಾಗಿ, ದರ್ಬಾ ರಿಗೆ ಬರಕೂಡದೆಂದು ನನಗೆ ಅಪ್ಪಣೆ ಮಾಡಿದ್ದಾರೆ!! ಏನು ಹೇಳಲಿ!!

**ಬೇಗ.**—ಹಾ ! ಇದೇನು ವಿಪರೀತ ? ನೀನು ದಿಟವಾದ್ದನ್ನು ಹೇಳಿ ದ್ದರಿಂದ ನಿನಗೆ ಶಿಕ್ಷೆಯೇ ? ಎಲ್ಲ ಸರದಾರರು ದರ್ಬಾರನ್ನು ಬಿಟ್ಟರೇನು ?

**ಬೀರ.**—ಅವರೇಕೆ ಬಿಡುವರು ? ಅವರೆಲ್ಲರೂ ತಾವು ಎಂದೂ ಹೂಸು ಬಿಡುವುದಿಲ್ಲೆಂದು ಒತ್ತಿ ಹೇಳಿದರು. ಅವರ ಮಾತು ಕೇಳಿ ಬಾದ ಶಹರು ನಲಿದರು.

**ಬೇಗ.**—ಇದೇನನ್ಯಾಯ ? ಸಟೆಯಾಡಿದವರಿಗೆ ಮೆಚ್ಚಿಗೆ, ದಿಟ ವಾಡಿದವರಿಗೆ ಶಿಕ್ಷೆ? ಇದೆಂತಹ ವಿಪರ್ಯಾಸ? ಒಡೆಯರಿಗೆ ಹುಚ್ಚು ಹಿಡಿದಿರಲಿಲ್ಲವೇ ?

ಬೀರ. — ಹುಚ್ಚು ಹಿಡಿಯಲಿಕ್ಕೇನಾಯಿತು? ಹುಚ್ಚಿಲ್ಲ ಗಿಚ್ಚಿಲ್ಲ. ಅಧಿಕಾರದ ಮದದಿಂದ ಅರಿವುಗೆಟ್ಟಿರುತ್ತಾರೆ. ಅರಿವು ಎಂದು ತಿರುಗಿ ಬರುತ್ತದೊ ನೋಡಬೇಕು.

ಬೇಗ. — ಎಷ್ಟು ದಿವಸ ಕಾಲನಿರೀಕ್ಷಣೆ ಮಾಡುತ್ತ ಕೂಡ್ರಲಿ. ಈಗ ಒಂದು ತಿಂಗಳಾಗಿ ಹೋಯಿತು. ಚಿಂತೆಯಿಂದ ನನ್ನ ಕಸುವು ಕುಗ್ಗುತ್ತ ಬಂದಿದೆ. ಹೀಗೇ ನಡೆದರೆ ಒಂದೆರಡು ತಿಂಗಳಲ್ಲಿ ನಾನು ಗೋರಿಗೆ ಹೋಗ ಬಹುದು. ಏನಾದರೂ ಹಂಚಿಕೆ ಹಾಕಿ, ಏನಾದರೂ ಹೂಟ ತೆಗೆದು, ಏನಾದರೂ ಹರವು ಹುಡುಕಿ, ನನ್ನ ನಲ್ಲನು ನನ್ನನ್ನು ಕ್ಷಮಿಸುವಂತೆ ಮಾಡಿ ದರೆ, ನಿನ್ನ ಉಪಕಾರವನ್ನು ಉಸಿರಿರುವ ವರೆಗೆ ಮರೆಯಲಿಕ್ಕಿಲ್ಲ. ನೀನೇ ಪ್ರಾಣದಾನಕೊಟ್ಟಂತಾಗುವುದು.

ಬೀರ. — ನನಗೆಲ್ಲಿ ಇಂತಹ ದೊಡ್ಡ ಉಪಕಾರ ಮಾಡುವಷ್ಟು ಪುಣ್ಯ! ನಾನು ಬಡ ಹಾರುವನು. ತಮ್ಮ ಮುಸಲ್ಮಾನರಲ್ಲಿ ಇಂತಹ ಸಾಮರ್ಥ್ಯ ವುಳ್ಳ ಜನರಿರಬಹುದು. ಅವರಿಂದ ತಮ್ಮ ಕೆಲಸವು ಕಯ್ಗೂಡುವುದು. ಅವರಿಗೆ ತಾವು ಹೇಳಿಕೊಳ್ಳಬೇಕೆಂದು ಅರಿಕೆ ಮಾಡುತ್ತೇನೆ.

ಬೇಗ. — ಬೀರಬಲ್ಲ! ನನ್ನನ್ನು ಆಡಿಸಿಯಾಡು (ಚೇಷ್ಟೆಮಾಡು)ತ್ತಿ ಏನು? ನಾನು ನಿನ್ನ ಹಗೆಯಲ್ಲ. ಹಿಂದುವಾದರೂ ನಿನ್ನಲ್ಲಿ ನನಗೆ ಪೂಜ್ಯ ಬುದ್ಧಿಯುಂಟು. ನಿನ್ನಷ್ಟು ಜಾಣರು ನಮ್ಮ ಮುಸಲ್ಮಾನರಲ್ಲಿ ಯಾರೂ ಇಲ್ಲೆಂದು ನಾನು ಆಗಿಂದಾಗ ಹೇಳುತ್ತಿರುತ್ತೇನೆ. ನನ್ನ ಮಾತು ನೆಚ್ಚಿಗೆ ಯಾಗದಿದ್ದರೆ, ನನ್ನ ದಾಸಿಯರನ್ನು ಕೇಳು. ನಿನ್ನ ಹೊರತು ಬೇರೆಯವ ರಾರೂ ನನ್ನನ್ನು ಈ ಸಂಕಟದಿಂದ ಪಾರು ಮಾಡಲಾರರು. ನೀನೇ ಗತಿ ಯೆಂದು ನಿನ್ನ ಮರೆಹೊಕ್ಕಿದ್ದೇನೆ. ಕುಡಗೋಲು ಕುಂಬಳಕಾಯಿ ಎರಡನ್ನೂ ನಿನಗೆ ಒಪ್ಪಿಸಿದ್ದೇನೆ. ಬೇಕಾದರೆ ಅಡ್ಡ ಹೆಚ್ಚು, ಬೇಕಾದರೆ ಉದ್ದ ಹೆಚ್ಚು. ನಿನ್ನ ಮನಸ್ಸಿಗೆ ಬಂದ ಹಾಗೆ ಮಾಡು. ನಾನು ಹೆಚ್ಚಿಗೆ ಹೇಳಲಾರೆನು (ಎಂದು ಅಳುತ್ತಾಳೆ).

ಬೀರ. — ಬೇಗಮ್ ಸಾಹೇಬ್! ತಾವು ಅಳಬೇಡರಿ. ನಾನೇ ಪ್ರಯತ್ನಮಾಡಬೇಕೆಂದು ತಮ್ಮ ಮನಸ್ಸಿದ್ದರೆ, ನಾನೇ ಯತ್ನ ಮಾಡುವೆನು.

ಫಲವು ಈಶ್ವರಾಧೀನ. ಮಾಡತಕ್ಕುದನ್ನು ಮಾಡುವುದಷ್ಟೇ ನಮ್ಮ ಕೆಲಸ. ಆದರೆ ತಮ್ಮ ಬಯಕೆಯು ಬೇಗನೆ ಕಯ್ಗೂಡಬೇಕಾದರೆ, ಬಹಳ ಹಣ ವೆಚ್ಚಮಾಡಬೇಕಾಗುವುದು. ನಾನು ಬಡವನು, ಅಷ್ಟು ಹಣ ತಾವು ಕೊಟ್ಟರೆ, ಮುಂದಿನ ಕೆಲಸವನ್ನು ಕಯ್ಕೊಳ್ಳುವೆನು. ಇದು ಸಾಮಾನ್ಯ ಕೆಲಸವಲ್ಲ. ಬಹಳ ಖರ್ಚಿನದು. ಬಡವನಾದ ನನ್ನಿಂದ ಸಾಧ್ಯವಲ್ಲ.

**ಬೇಗ.**— ಹಾಗೆಯೇ? ಎಷ್ಟು ಹಣಬೇಕಾಗುವುದು?

**ಬೀರ.**— ಏನಿಲ್ಲೆಂದರೂ ೧೦ ಸಾವಿರ ವರಹಗಳು ಬೇಕಾಗುವವು. ಅಷ್ಟು ಹಣಕೊಟ್ಟರೆ ಕೆಲಸವನ್ನು ಮೊದಲುಮಾಡುವೆನು.

**ಬೇಗ.**— ಬೀರಬಲ್ಲ! ಅಷ್ಟು ಹಣ ಎಲ್ಲಿಂದ ತರಲಿ. ನನ್ನ ಹತ್ತರ ೫ ಸಾವಿರ ವರಹಗಳು ಮಾತ್ರ ಇರುತ್ತವೆ. ಅಷ್ಟರಿಂದಲೇ ಹೇಗಾದರೂ ಕೆಲಸ ಸಾಗಿಸಿದರೆ ಉಪಕಾರವಾಗುವುದು.

**ಬೀರ.**— ಬೇಗಮ್ ಸಾಹೇಬ್, ಹಣವೇನು ನನಗೆ ಬೇಕಾಗಿರುತ್ತದೆಯೋ? ನನ್ನ ಹೆಂಡರುಮಕ್ಕಳಿಗೆ ಒಡವೆ ಮಾಡಿಸಲಿಕ್ಕೆ ಬೇಕಾಗಿದೆಯೋ? ನಾನು ಬಡವನೆಂದು ಮೊದಲೇ ಅರಿಕೆ ಮಾಡಿಕೊಂಡಿರುತ್ತೇನೆ. ಹಣವಿಲ್ಲದೆ ಏನು ಮಾಡಲಿಕ್ಕಾದೀತು ತಾವೇ ಹೇಳಿರಿ.

**ಬೇಗ.**— (ಒಳಗೆ ಹೋಗಿ ವರಹದ ಚೀಲವನ್ನು ತಂದು ಅವನ ಮುಂದಿಟ್ಟು) ನನ್ನಲ್ಲಿರುವ ಬಂಡವಲವಿಷ್ಟೇ. ಇದರಲ್ಲಿ ೫೦೦೦ ವರಹಗಳಿರುತ್ತವೆ. ಉಳಿದ ೫೦೦೦ ವರಹಗಳನ್ನು ನನ್ನ ಹೆಸರಿನಲ್ಲಿ ಸಾಲವಾಗಿ ತಂದು ಕೆಲಸ ಸಾಗಿಸು. ಹಿಂದಿನಿಂದ ನಾನು ಆ ಹಣವನ್ನು ಕೊಡುವೆನು.

**ಬೀರ.**— ಬೇಗಮ್ ಸಾಹೇಬ್, ನಾನು ರಾಜಸೇವಕನಾದ್ದರಿಂದ, ಸಾಹುಕಾರರು ನನ್ನನ್ನು ನಂಬಿ ಹಣ ಕೊಡುವುದಿಲ್ಲ. ಅಡವಿಡಲಿಕ್ಕೆ ತಮ್ಮ ಮುತ್ತು ಹರಳುಕಲ್ಲಿನ ಒಡವೆಗಳನ್ನು ಕೊಟ್ಟರೆ ಅವನ್ನಿಟ್ಟು, ೫೦೦೦ ವರಹ ಸಾಲವಾಗಿ ತಂದು ಕೆಲಸವನ್ನಾರಂಭಿಸುವೆನು.

**ಬೇಗ.**— ಒಳ್ಳೆಯದು, ಹಾಗೇ ಆಗಲಿ. (ತನ್ನ ಮೆಯ್ಮೇಲಿದ್ದ ಎಲ್ಲ ಮುತ್ತುರತ್ನಗಳ ಒಡವೆಗಳನ್ನು ಉಚ್ಚಿ ಬೀರಬಲ್ಲನ ಮುಂದಿಟ್ಟು) ಇಷ್ಟು ಸಾಕೋ? ಇನ್ನೂ ಏನಾದರೂ ಬೇಕೋ?

ಬೀರ.—ರಾಣಿಸಾಹೇಬ್, ನನಗೆ ಈ ಒಡವೆಗಳ ಬೆಲೆಯು ಗೊತ್ತಾಗುವುದಿಲ್ಲ. ನಾನು ಹುಟ್ಟಾ ಕಂಡಿಲ್ಲ. ಸಾಹುಕಾರರಿಗೆ ತೋರಿಸಿ, ಕಡಮೆ ಬಿದ್ದರೆ ತಮ್ಮ ಬಳಿಗೆ ಮತ್ತೆ ಬರುವೆನು. ಹಣ ಸಿಕ್ಕರೆ ನಾನು ತಮ್ಮ ಬಳಿಗೆ ಬರುವುದಿಲ್ಲ. ಏಕೆಂದರೆ, ನಾನು ಬಹಳ ಸಾರಿ ತಮ್ಮ ಬಳಿಗೆ ಬಂದರೆ ಬಾದಶಹರಿಗೆ ಇಲ್ಲದ ಸಂಶಯ ಬರಬಹುದು. ನಾನು ಮಾಡುವ ಪ್ರಯತ್ನದ ಸುದ್ದಿಯನ್ನು ತಮ್ಮ ದಾಸಿಯ ಮುಖಾಂತರವಾಗಿ ತಿಳಿದುಕೊಳ್ಳಬಹುದು. ಹೋಗಿ ಬರುತ್ತೇನೆ, ಅಪ್ಪಣೆ ಕೊಡಿರಿ.

ಈ ಮೇರೆಗೆ ಮಾತುಕಥೆಗಳಾದ ಬಳಿಕ ಬೇಗಮ್ಮಳನ್ನು ಬೀಳ್ಕೊಂಡು ಬೀರಬಲ್ಲನು ಮನೆಗೆ ಹೋದನು. ಇರುಳೆಲ್ಲ ಏನು ಯುಕ್ತಿಮಾಡಬೇಕೆಂಬ ಎಣಿಕೆಯಲ್ಲಿ ಕಳೆದನು. ಮರುದಿವಸ ಬೆಳಿಗ್ಗೆ ಪ್ರಾತರ್ವಿಧಿಯನ್ನು ತೀರಿಸಿಕೊಂಡು, ನಗೆಮೋರೆಯುಳ್ಳವನಾಗಿ ತನ್ನ ಗೊತ್ತಿನವನಾದ ಒಬ್ಬ ಜಾಣ ಅಕ್ಕಸಾಲಿಗನನ್ನು ಕರೆಯಿಸಿ, ೨೦೦೦ ಮೊಹರು ಅವನ ಕೈಯಲ್ಲಿ ಕೊಟ್ಟು, ಉತ್ತಮವಾದ ದುಂಡು ಮುತ್ತುಗಳನ್ನು ಕೊಳ್ಳಲು ಹೇಳಿದನು. ಬಳಿಕ ತಾನು ಊಟುಡಿಗೆಯನ್ನು ತೀರಿಸಿಕೊಂಡು, ಒಬ್ಬ ಗೊತ್ತುಳ್ಳ ಸಾಹುಕಾರನ ಕಡೆಗೆ ಹೋಗಿ, ಬೇಗಮ್ಮಳ ಕೆಲವು ಒಡವೆಗಳನ್ನು ಒತ್ತೆಯಿಟ್ಟು, ೫೦೦೦ ಮೊಹರುಗಳನ್ನು ತಂದನು. ಮರುದಿವಸ ಪತ್ತಾರ (ಅಕ್ಕಸಾಲಿಗ)ನು ತಾನು ಕೊಂಡುತಂದ ಮುತ್ತುಗಳನ್ನು ತೋರಿಸಿದನು.

ಬೀರ.—ಆಹಾ!! ಈ ಮುತ್ತುಗಳು ಎಷ್ಟು ಅಂದವಾಗಿವೆ? ನೀನು ಒಳ್ಳೆಯ ವ್ಯಾಪಾರ ಮಾಡಿದೆ. ಇವುಗಳನ್ನು ನೋಡಿ ನನಗೆ ಬಹಳ ಸಂತೋಷವಾಯಿತು. ಇಷ್ಟು ಬಂಗಾರದ ಗುನಿಗಳನ್ನು ಮಾಡಿ ಅವುಗಳಲ್ಲಿ ಈ ಮುತ್ತುಗಳನ್ನು ಕೂಡಿಸಿ, ಜೋಳದ ತೆನೆಗಳಂತಹ ೮।೧೦ ತೆನೆಗಳನ್ನು ಆದಷ್ಟು ಬೇಗನೆ ಮಾಡಿಕೊಂಡು ಬಾ. ಮತ್ತೆಯಾರಿಗೂ ಈ ಮಾತನ್ನು ತಿಳಿಸಬೇಡ. ನಿನಗೆ ಇನ್ನೆಷ್ಟು ಹಣಬೇಕು ?

ಅಕ್ಕಸಾಲಿಗ.—ಸ್ವಾಮಿ, ೮।೧೦ ತೆನೆಗಳಿಗೆ ಈ ಮುತ್ತುಗಳು ಸಾಕಾಗಲಿಕ್ಕಿಲ್ಲ. ಅವುಗಳಿಗೆ ಇನ್ನೂ ೨೦೦೦ ಮೊಹರುಗಳು ಬೇಕು. ಚಿನ್ನ

ಮುಂತಾದ್ದಕ್ಕೆ ೧೦೦೦ ಮೊಹರು ಬೇಕಾಗುವುವು. ಕೂಲಿಯ ಬಗ್ಗೆ ೧೦೦೦ ಮೊಹರುಗಳನ್ನು ಧನಿಯರು ಕೊಡಬೇಕೆಂದು ಬೇಡುತ್ತೇನೆ.

ಬೀರ.—ಬಂಗಾರ ಮುತ್ತುಗಳಿಗೆ ಬೇಕಾದ ೩೦೦೦ ಮೊಹರು ತೆಗೆದುಕೊ. ನೀನು ಉತ್ತಮವಾದ ತೆನೆಗಳನ್ನು ಮಾಡಿ ತಂದರೆ ಸಾವಿರನ್ನೇಕೆ? ಒಂದೂವರೆ ಸಾವಿರ ಮೊಹರು ಕೊಡುವೆನು. ಆದರೆ ಬೇಗನೆ ಕೆಲಸವಾಗಲು ಬೇಕು. ತಡ ಮಾಡ ಕೂಡದು.

ಅಕ್ಕ.—ಸ್ವಾಮಿ, ಈ ಕೆಲಸವು ಬಹಳ ಜಿನುಗು. ಆದಷ್ಟು ಲಗು ಮಾಡುವೆನು. ತಾವು ಒಂದು ತಿಂಗಳ ಅವಧಿಯನ್ನು ದಯೆಪಾಲಿಸಬೇಕು. ಅದರೊಳಗೆಯೇ ಕೆಲಸ ಮುಗಿಯುವ ಸಂಭವವಿಲ್ಲ.

ಬೀರ.—ಒಳ್ಳೆಯದು. ಹಾಗೇ ಆಗಲಿ. ಕೆಲಸ ಮಾತ್ರ ಬಹಳ ಅಂದವಾಗಿ ಆಗಲು ಬೇಕು.

ಮುಂದೆ ಒಂದು ತಿಂಗಳೊಳಗೆ ಸೊನ್ನಗಾರನು ಹತ್ತು ಮುತ್ತಿನ ತೆನೆಗಳನ್ನು ಮಾಡಿತಂದು ಬೀರಬಲ್ಲನ ಮುಂದಿಟ್ಟನು. ಅವುಗಳನ್ನು ನೋಡಿ ಬೀರಬಲ್ಲನಿಗೆ ಬಹಳ ಆನಂದವಾಯಿತು. ಇನ್ನು ತನ್ನ ಬಯಕೆಯು ಕಯ್ಗೂಡುವುದೆಂದು ಅವನಿಗೆ ನಂಬಿಗೆ ಹುಟ್ಟಿತು. ಅವನು ಹಿರಿಹಿರಿ ಹಿಗ್ಗಿ ಊಟುಡಿಗೆ ತೀರಿಸಿಕೊಂಡು, ಆ ತೆನೆಗಳನ್ನು ಒಂದು ಸಂದುಕಿನಲ್ಲಿ ಇಟ್ಟು, ಅದನ್ನು ಮನುಷ್ಯನ ಮೇಲೆ ಹೊರಿಸಿಕೊಂಡು, ಅರಮನೆಗೆ ಹೋಗಿ ತಾನು ಬಂದಿರುವೆನೆಂದು ಬಾದಶಹನಿಗೆ ತಿಳಿಸಲಿಕ್ಕೆ ಹೇಳಿದನು.

ಅತ್ತ ಬಾದಶಹನು ಬೀರಬಲ್ಲನ ಅಗಲಿಕೆಯಿಂದ ವ್ಯಸನಪಡುತ್ತ ಚಿಂತೆಯಲ್ಲಿ ಕಾಲ ಕಳೆಯುತ್ತಿದ್ದನು. ಬೀರಬಲ್ಲನನ್ನು ಹೊರಗೆ ಹಾಕಿದ ಬಗ್ಗೆ ಅವನಲ್ಲಿ ಪಶ್ಚಾತ್ತಾಪ ಹುಟ್ಟಿತ್ತು. ಆದ್ದರಿಂದ ಅವನನ್ನು ಹೇಗೆ ತರಿಸಬೇಕೆಂಬ ಎಣಿಕೆಯಲ್ಲಿದ್ದನು. ಇಂತಹ ಸಮಯದಲ್ಲಿ ಬೀರಬಲ್ಲನು ತನ್ನ ದರ್ಶನಕ್ಕೆ ಬಂದಿರುತ್ತಾನೆಂಬ ಮಾತನ್ನು ಕೇಳಿ, ಅವನ ಹಿಗ್ಗು ಹಿಡಿಯಲಾರದಷ್ಟು ಆಯಿತು. ಕೂಡಲೇ ಅವನನ್ನು ಕರೆತರಲಿಕ್ಕೆ ಹೇಳಿದನು. ಬೀರಬಲ್ಲನು ಬಂದು ಉಚಿತವಾಗಿ ವಂದಿಸಿ ಕುಳಿತುಕೊಂಡನು.

ಬಾದ.—ಬೀರಬಲ್ಲ. ಈಗಾದರೂ ಹೂಸು ಬಿಡುವುದನ್ನು ಬಿಟ್ಟಿರುವಿಯಾ? ನೀನು ಹೋದಂದಿನಿಂದ ನನಗೆ ಎತ್ತೆತ್ತಾರ (ಅಸಮಾಧಾನ) ಆಗಿದೆ. ಏಕೆ ನಿನ್ನನ್ನು ಹೊರಗೆ ಹಾಕಿದೆನೋ ಎನಿಸುತ್ತದೆ. ನೀನು ಹೂಸು ಬಿಡುವುದನ್ನು ಬಿಟ್ಟದ್ದರೆ ಲೇಸಾಯಿತು.

ಬೀರ.—ಬಡವನ ಮೇಲೆ ಮಹಾರಾಜರ ಪೂರ್ಣವಾದ ಮಮತೆಯು ಇರುವುದರಿಂದ ಹೀಗಾಗುತ್ತಿರಬಹುದು. ನಾನು ಹೂಸು ಬಿಡಬಾರದೆಂದು ವಿಶ್ವಪ್ರಯತ್ನ ಮಾಡಿದೆನು. ಕಾಶಿಗೆ ಹೋಗಿ ವಿಶ್ವೇಶ್ವರನ ದರುಶನ ಮಾಡಿಕೊಂಡು, ಅಲ್ಲಿ ದೊಡ್ಡ ದೊಡ್ಡ ತಪಸ್ವಿಗಳನ್ನು ಕೇಳಿದೆನು. ಅಲ್ಲಿಂದ ಬದರಿಕಾಶ್ರಮಕ್ಕೆ ಹೋಗಿ, ಅಲ್ಲಿದ್ದ ಮುನಿಗಳ ಸೇವೆಯನ್ನು ಮಾಡಿದೆನು. ಹೂಸನ್ನು ಬಂದು ಮಾಡುವುದು ಪೂರ್ಣನಾಗಿ ಸಾಧ್ಯವಾಗದಿದ್ದರೂ ತಮ್ಮ ಪುಣ್ಯಪ್ರಭಾವದಿಂದ ಮುತ್ತನ್ನು ಬೆಳೆಯುವ ಗುಟ್ಟನ್ನು ಕಲಿತುಕೊಂಡು ಬಂದೆನು. ಇನ್ನು ಮುಂದೆ ಮಹಾರಾಜರು ಬೇಕಾದಷ್ಟು ಮುತ್ತು ಬೆಳೆಯ ಬಹುದು.

ಬಾದ.—ಮುತ್ತು ಬೆಳೆಯುವುದನ್ನು ಕಲಿತು ಬಂದೆಯಾ? ಬಹಳ ಒಳ್ಳೆಯದನ್ನು ಮಾಡಿದೆ. ಆದು ಹೇಗೆ?

ಬೀರ.—ಅದಕ್ಕೆ ತಕ್ಕಸ್ಥಳ ತಕ್ಕ ಸಾಮಗ್ರಿ ತಕ್ಕ ಮನುಷ್ಯರನ್ನು ದೊರಕಿಸಿಕೊಂಡು ಮುತ್ತು ಬಿತ್ತಿಸುವೆವೆಂತಲೂ ಆ ಗುಟ್ಟನ್ನು ಹೊರಗೆಡುವುವುದಿಲ್ಲೆಂತಲೂ ತಾವು ಮಾತು ಕೊಟ್ಟರೆ ಹೇಳುವೆನು.

ಬಾದ.—ಮಾತು ಗಟ್ಟಿಯಾಗಿ ಕೊಡುತ್ತೇನೆ. ಹೇಳು.

ಬೀರ.—ಈ ಬಿತ್ತಿಗೆಗೆ ತಕ್ಕುದಾದ ಹೊಲವನ್ನು ನಾನು ತೋರಿಸುವೆನು. ಅದನ್ನು ಚೆನ್ನಾಗಿ ಹಸನು ಮಾಡಿಸಿ, ಒಂದಾದರೂ ಹರಳುಕಲ್ಲು ಇಲ್ಲದಂತೆ ಮಾಡಿ, ಎಂದೂ ಹೂಸು ಬಿಡದವನಿಂದ ಮುತ್ತುಗಳನ್ನು ಬಿತ್ತಿಸಬೇಕು. ಹಾಗೆ ಮಾಡಿದರೆ ೬ ತಿಂಗಳಲ್ಲೇ ಬೆಳೆ ಬರುವುದು. ಮಾದರಿಗಾಗಿ ಮುತ್ತಿನ ತೆನೆಗಳನ್ನೇ ಕೊಯ್ದು ತಂದಿರುತ್ತೇನೆ. ಒಡೆಯರು ನೋಡಬಹುದು. (ತಾನು ತಂದ ೧೦ ತೆನೆಗಳನ್ನು ಬಾದಶಹನ ಮುಂದೆ ಇಡುತ್ತಾನೆ).

ಬಾದ.—(ಸೋಜಿಗದಿಂದ ಹಿಗ್ಗಿ) ಬೀರಬಲ್ಲ! ಇವೆಷ್ಟು ಚಂದವಾಗಿವೆ!! ದಿಟವಾಗಿ ಮುತ್ತಿನ ಗಿಡಗಳಾಗುತ್ತವೆಯೋ?

ಬೀರ.—ಮಹಾರಾಜ! ನಾನು ಕಣ್ಣಾರೆ ಗಿಡಗಳನ್ನು ನೋಡಿರುತ್ತೇನೆ, ಮತ್ತು ಕಯ್ಯಾರ ಈ ತೆನೆಗಳನ್ನು ಮುರಿದುಕೊಂಡು ಬಂದಿರುತ್ತೇನೆ. ಅದಕ್ಕೇನಾದರೂ ಸಂಶಯವುಂಟೇ?

ಬಾದ.—ಒಳ್ಳೆಯದು. ಬೊಕ್ಕಸದಿಂದ ಬೇಕಾದಷ್ಟು ಹಣ ತೆಗೆದುಕೊಂಡು ಹೊಲವನ್ನು ಸಿದ್ಧಮಾಡಿಸು. ಹೂಸು ಬಿಡದ ಸರದಾರರು ಎಷ್ಟೋ ಮಂದಿ ಇರುತ್ತಾರೆ. ಅವರಿಂದ ಬಿತ್ತಿಸೋಣ.

ಮುಂದೆ ಒಂದು ತಿಂಗಳಲ್ಲಿ ಹೊಲವು ಸಿದ್ಧವಾಯಿತು. ಬಾದಶಹನು ತನ್ನ ಪ್ರೀತಿಪಾತ್ರರಾದ ಸರದಾರರನ್ನು ಕರೆಕೊಂಡು ಬಿತ್ತಿಸಲಿಕ್ಕೆ ಹೋದನು. ಸುಳ್ಳು ಹೇಳಿದ ಸರದಾರರು ಬಿತ್ತಲಿಕ್ಕೆ ಹೆದರಿದರು. ಒಬ್ಬರೂ ಒಡಂಬಡಲೊಲ್ಲರು.

ಬೀರ.—ಮಹಾರಾಜ! ತಾವೇ ಬಿತ್ತಬಹುದು. ತಾವು ಎಂದೂ ಹೂಸು ಬಿಡುವುದಿಲ್ಲವಲ್ಲ?

ಈ ಪ್ರಶ್ನವನ್ನು ಕೇಳಿದ ಕೂಡಲೆ ಬಾದಶಹನಿಗೆ ಅರಿವು ಬಂತು. ತಾನೂ ಹೂಸು ಬಿಡುತ್ತೇನೆಂಬ ಮಾತು ನೆನಪಿಗೆ ಬಂತು.

ಬಾದ.—ಬೀರಬಲ್ಲ! ನಾನೂ ಯಾವಾಗಲಾದರು ಹೂಸು ಬಿಡುತ್ತೇನೆ. ಆದ್ದರಿಂದ ನಾನು ಬಿತ್ತಲಾರೆನು. ಮುತ್ತು ಬಿತ್ತಲಿಕ್ಕೆ ತಕ್ಕವರು ಇಲ್ಲಿ ಯಾರೂ ದೊರೆಯುವುದಿಲ್ಲ.

ಬೀರ.—ಮಹಾರಾಜ! ಹಾಗಿದ್ದರೆ ಬೇಗಮ್ಮ ಸಾಹೇಬರ ತಪ್ಪೇನು? ನನ್ನ ತಪ್ಪೇನು?

ಬಾದ.—(ಸಣ್ಣ ಮೋರೆ ಮಾಡಿಕೊಂಡು, ತಲೆ ಕೆಳಗೆ ಬೊಗ್ಗಿಸಿ) ಉಶ್, ಉಶ್, ಬೀರಬಲ್ಲ! ನಿಮ್ಮದಾರದೂ ತಪ್ಪಿಲ್ಲ. ನನ್ನಿಂದಲೇ ದೊಡ್ಡ ತಪ್ಪಾಯಿತು. ನಾನು ಇಷ್ಟು ದಿವಸ ಭ್ರಮೆಯಲ್ಲಿದ್ದೆನೆಂದು ತೋರುತ್ತದೆ. ನನಗೆ ಹೀಗೆ ಮಾಡಲಿಕ್ಕೆ ಹೇಗೆ ತಿಳಿಯಲಿಲ್ಲವೋ ದೇವರೇ ಬಲ್ಲ. ನೀನು ನಾಳಿನಿಂದ ದರ್ಬಾರಿಗೆ ಬಾ. ಉಳಿದ ಸರದಾರರೆಲ್ಲರು ಸಟೆ ಹೇಳಿ

ನನ್ನನ್ನು ಮೋಸಮಾಡಿದರು. ನೀನೊಬ್ಬನೇ ಇಷ್ಟು ಶ್ರಮಪಟ್ಟು ನನ್ನನ್ನು ಅಡ್ಡಹಾದಿಯಿಂದ ಬಿಡಿಸಿ, ಸರಿಯಾದ ದಾರಿಗೆ ಹಚ್ಚಿದೆ. ನಿನ್ನ ಉಪಕಾರ ವನ್ನು ಎಷ್ಟು ಕೊಂಡಾಡಿದರೂ ಸಾಲದು. ನಾನು ನಿನಗೆ ಋಣಿಯಾಗಿ ರುತ್ತೇನೆ. ಈ ಹೊತ್ತು ಬೇಗಮ್ಮಳ ಬಳಿಗೆ ಹೋಗಿ ಆಕೆಯನ್ನು ಸಮಾ ಧಾನಮಾಡಿ ಕರೆಕೊಂಡು ಬರುವೆನು. ನಿನ್ನ ಉಪಕಾರವನ್ನು ಹೇಗೆ ತೀರಿಸಲಿ ?

ಬೀರ. ಮಹಾರಾಜ ! ಅದರ ಬಗ್ಗೆ ತಾವು ವಿಚಾರಮಾಡುವ ಕಾರ ಣವಿಲ್ಲ. ತಮ್ಮ ದಯೆಯೊಂದಿದ್ದರೆ ಸಾಕು. ನನಗೆ ಮತ್ತೇನು ಬೇಡ. ತಮ್ಮ ಕಲ್ಯಾಣವೇ ನನ್ನ ಕಲ್ಯಾಣ.

ಬಾದಶಹನನ್ನು ಅರಮನೆಗೆ ಮುಟ್ಟಿಸಿ, ಬೀರಬಲ್ಲನು ಹಾಗೆಯೇ ಬೇಗಮ್ಮಳ ಬಳಿಗೆ ಹೋಗಿ, ಈ ಸಂತಸದ ಒಸುಗೆಯನ್ನು ತಿಳಿಸಿದನು. ಎಲ್ಲರೂ ಹಿಗ್ಗಿ ನಲಿದರು.

### ೧೬. ಪ್ರತ್ಯಕ್ಷವಾದರೂ ಪ್ರಮಾಣಿಸಿ ನೋಡಬೇಕು

ಒಂದು ದಿವಸ ಬಾದಶಹ ಬೀರಬಲ್ಲರು ಮಾತಾಡುತ್ತ ಕುಳಿತಿರು ವಾಗ ಸತ್ಯಾಸತ್ಯತೆಯ ವಿಷಯವು ಹೊರಟಿತು.

ಬಾದ.—ಬೀರಬಲ್ಲ ! ನಾವು ಕಣ್ಣಾರೆ ನೋಡುವುದೆಲ್ಲ ಸತ್ಯ; ನಾವು ಕೇಳುವುದೆಲ್ಲ ಅಸತ್ಯ ಅಥವಾ ಅತಿಶಯೋಕ್ತಿಯಲ್ಲವೇ ?

ಬೀರ.—ಮಹಾರಾಜ ! ತಾವು ಹೇಳಿದ್ದು ನಿಜ; ನಾವು ನೋಡಿದ್ದ ರಲ್ಲಿ ಸತ್ಯಾಂಶವು ಬಹಳವಾಗಿರುವುದು, ನಾವು ಕೇಳಿದ್ದರಲ್ಲಿ ಅಸತ್ಯವೇ ಬಹಳವಾಗಿರುವುದು. ಆದರೆ ಸತ್ಯಾಸತ್ಯತೆಗಳ ನಡುವೆ ಅಂತರವು ಬಹಳ ಇರುವುದಿಲ್ಲ. ಕಣ್ಣುಕಿವಿಗಳ ನಡುವಿರುವ ಅಂತರದಷ್ಟೇ ಈ ಅಂತರವಿರು ವುದು.

ಬಾದ.—ಬೀರಬಲ್ಲ ! ನಾವು ಪ್ರತ್ಯಕ್ಷವಾಗಿ ನೋಡಿದ್ದು ಸುಳ್ಳಾಗ ಬಹುದೇ? ಹೇ ! ತೆಗೆ, ಏನು ಮಾತಾಡುತ್ತೀ ? ಎಂದಿಗೂ ಹಾಗೆ ಆಗಲಾ ರದು.

ಬೀರ.—ಮಹರಾಜ! ದಯವಿಟ್ಟು ಕ್ಷಮಿಸಿರಿ. ನಾವು ಕಣ್ಣಾರೆ ನೋಡಿದ್ದು ಒಮ್ಮೊಮ್ಮೆ ಸುಳ್ಳಾಗ ಬಹುದಾದ್ದರಿಂದ ಹಿರಿಯರು "ಪ್ರತ್ಯಕ್ಷ ವಾದರೂ ಪ್ರಮಾಣಿಸಿ ನೋಡಬೇಕೆ"ಂಬ ಗಾದೆಯನ್ನು ಮಾಡಿಟ್ಟಿರುತ್ತಾರೆ. ಬಿಸಿಲ್ಗುದುರೆಯ ಉದಾಹರಣವನ್ನೇ ತೆಗೆದುಕೊಳ್ಳಿರಿ. ಅದು ನೀರಿದ್ದಂತೆ ತೋರುವುದಿಲ್ಲವೇ ?

ಬಾದ.—ಬಿಸಿಲ್ಗುದುರೆಯು ಅನುಮಾನವು, ಪ್ರತ್ಯಕ್ಷವಲ್ಲ. ಕೆಲವು ಲಕ್ಷಣಗಳಿಂದ ದಾರಿಕಾರರು ನೀರಿರುತ್ತದೆಂದು ಅನುಮಾನ ಮಾಡುತ್ತಾರೆ, ಅದು ಪ್ರತ್ಯಕ್ಷವಲ್ಲ.

ಬೀರ.—ಹೀಗೆಯೇ ಎಷ್ಟೋ ಅನುಮಾನಗಳನ್ನು ಜನರು ಪ್ರತ್ಯಕ್ಷ ವೆಂದು ಭಾವಿಸುತ್ತಾರೆ. ಹಾಗೆಯೇ ಸಿಂಪನ್ನು ಬೆಳ್ಳಿಯೆಂತಲೂ ಹಗ್ಗವನ್ನು ಹಾವೆಂತಲೂ ಜನರು ಭಾವಿಸುವುದುಂಟು.

ಬಾದ.—ಬೀರಬಲ್ಲ! ಈ ಮಾತನ್ನು ಅನುಭವದಿಂದ ತೋರಿಸಿದರೆ ನನಗೆ ಮನದಟ್ಟಾಗುವುದು. ನೀನು ಹೇಳಿದ್ದು ನನಗೆ ಚೆನ್ನಾಗಿ ತಿಳಿಯಲಿಲ್ಲ.

ಬೀರ.—ಏಕಾಗಲೊಲ್ಲದು. ಸಂದರ್ಭ ಬಂದಾಗ ತಮಗೆ ಹೇಳು ವೆನು. ನಾನು ಹೇಳಿದ ಗಾದೆಯನ್ನು ತಾವು ಮರೆಯಕೂಡದು. ಅದು ನೆನಪಿನಲ್ಲಿದ್ದರೆ ತಾವು ದುಡುಕಿ ಎಷ್ಟೋ ತಪ್ಪುಗಳನ್ನು ಮಾಡಲಾರಿರಿ.

ಮುಂದೆ ಕೆಲವು ಕಾಲ ಹೋದ ಬಳಿಕ, ಬಾದಶಹನ ಅರಮನೆಯಲ್ಲಿ ಒಂದು ವಿಪರೀತವಾದ ಸಂಗತಿಯು ನಡೆಯಿತು. ಒಂದು ದಿನ ಬಾದಶಹನ ಹಾಸಿಗೆ ಹಾಸುವವನ ಮನಸ್ಸಿನಲ್ಲಿ ಬಾದಶಹನ ಹಾಸಿಗೆಯ ಮೇಲೆ ಮಲಗಿ ಕೊಳ್ಳುವುದರಿಂದ ಎಷ್ಟು ಸುಖವಾಗಬಹುದೆಂಬುದನ್ನು ನೋಡಬೇಕೆಂಬ ಕುತೂಹಲವುಂಟಾಯಿತು. ಆಗ ಅವನು ಬೇಗನೆ ಏಳಬೇಕೆಂಬ ಸಂಕಲ್ಪ ದಿಂದ ಬಾದಶಹನ ಹಾಸಿಗೆಯ ಮೇಲೆ ಶಾಲು ಹೊತ್ತುಕೊಂಡು ಮಲಗಿ ದನು. ಅವನು ದಣಿದವನಾಗಿದ್ದುದರಿಂದ ದುರದೃಷ್ಟದಿಂದ ಅವನಿಗೆ ಗಡ ದ್ದಾಗಿ ನಿದ್ದೆ ಹತ್ತಿತು!! ರಾಣಿಯು ತನ್ನ ಹೊತ್ತಿಗೆ ಬಂದು, ಬಾದಶಹನು ನಿದ್ದೆ ಮಾಡುತ್ತಾನೆಂದೆಣಿಸಿ, ಎಬ್ಬಿಸಲಿಕ್ಕೆ ಧೈರ್ಯ ಸಾಲದೆ, ಮಗ್ಗಲಲ್ಲಿ ಮಲಗಿಕೊಂಡಳು. ಮುಂದೆ ಕೆಲಹೊತ್ತಿನ ಮೇಲೆ ಬಾದಶಹನು ಬಂದು

ನೋಡುತ್ತಾನೆ, ತನ್ನ ರಾಣಿಯು ಪರಪುರುಷನೊಡನೆ ಮಲಗಿದ್ದಳು!! ಬಾದಶಹನಿಗೆ ಬ್ರಹ್ಮೇತಿಸಿಟ್ಟು ಬಂದಿತು; ಒರೆಯಿಂದ ಕತ್ತಿಯು ಹೊರ ಬಿತ್ತು. ಅಷ್ಟರಲ್ಲಿ ಕರ್ಮಧರ್ಮಸಂಯೋಗದಿಂದ ಬೀರಬಲ್ಲನು ಹಿಂದೆ ಹೇಳಿದ ಗಾದೆಯು ಅವನ ನೆನಪಿಗೆ ಬಂತು; ಒಡನೆಯೇ ಅವನು ಕತ್ತಿ ಯನ್ನು ಒರೆಯಲ್ಲಿ ಸೇರಿಸಿ ಹೊರಗೆ ಬಂದು, ಬೀರಬಲ್ಲನನ್ನು ಕರೆಯಿಸಿ ಅವ ನಿಗೆ ನಡೆದ ವೃತ್ತಾಂತವನ್ನೆಲ್ಲ ಹೇಳಿದನು. ಇದೆಲ್ಲ ಆಳಿನ ಅಡ್ನಾಡಿತನ (ದಡ್ಡ ತನ)ವೆಂದು ಬೀರಬಲ್ಲನಿಗೆ ಕೂಡಲೆ ಹೊಳೆಯಿತು. ಆಗ ಅವನು ಮಂಚದ ಬುಡದಲ್ಲಿ ಸದ್ದುಮಾಡದೆ ಕುಳಿತುಕೊಳ್ಳುವಂತೆ ಬಾದಶಹನಿಗೆ ಹೇಳಿ, ತಾನು ಹೊರಗೆ ಬಂದು, ರಾಣಿಯನ್ನು ಎಬ್ಬಿಸಲಿಕ್ಕೂ ಹತ್ತರ ಮಲಗಿದವರು ಯಾರೆಂಬುದನ್ನು ಕೇಳಲಿಕ್ಕೂ ಒಬ್ಬ ದಾಸಿಗೆ ಹೇಳಿದನು. ಆಕೆಯು ರಾಣಿಯನ್ನು ಎಚ್ಚರಿಸಿ ಕೇಳಲು,

ರಾಣಿ— ಇಲ್ಲಿ ಮತ್ತೆ ಯಾರಾದರು ಇರುತ್ತಾರೇನು? ಇಲ್ಲ ಅವರೇ ಮಲಗಿದ್ದಾರೆ. ಗಾಢನಿದ್ದೆ ಹತ್ತಿದ್ದರಿಂದ ನಾನು ಅವರನ್ನು ಎಬ್ಬಿಸಲಿಲ್ಲ.

ದಾಸಿ— ರಾಣಿಸಾಹೇಬ್, ಹವ್ವರಗೆ (ಸದ್ದುಮಾಡದೆ) ಮುಸುಕು ತೆಗೆಯಿರಿ.

ಆಗ ರಾಣಿಯು ಮೆಲ್ಲಗೆ ಮುಸುಕು ತೆಗೆದು ನೋಡಿ 'ಅವ್ವಯ್ಯಾ' ಎಂದು ಮಂಚದ ಕೆಳಗೆ ಹಾರಿದಳು. ದಾಸಿಯು ಆಕೆಯನ್ನು ಕರೆದು ಕೊಂಡು ಬೇರೆ ಕೋಣೆಗೆ ಹೋಗಲು, ಬೀರಬಲ್ಲನು ಒಳಗೆ ಬಂದು, ಆಳನ್ನು ಅಗಳಾಡಿಸಿ ಎಬ್ಬಿಸಿದನು. ಅವನು ಎಚ್ಚತ್ತು ಬೀರಬಲ್ಲನನ್ನು ನೋಡಿ ಗಾಬರಿಯಾಗಿ ಧುಪ್ಪನೆ ಮಂಚದ ಕೆಳಗೆ ಬಿದ್ದನು. ಬಳಿಕ ಅವನು ಚೇತ ರಿಸಿಕೊಂಡೆದ್ದು 'ಕ್ಷಮಿಸಬೇಕು, ಬುಧ್ಧೀ' ಎಂದು ಅವನ ಕಾಲುಗಳನ್ನು ಗಟ್ಟಿಯಾಗಿ ಹಿಡಿದುಕೊಂಡನು.

ಬೀರ.— ಹುಸೇನಾ! (ಆಳಿನ ಹೆಸರು) ನೀನು ಒಡೆಯರ ಹಾಸಿಗೆಯ ಮೇಲೆ ಏಕೆ ಮಲಗಿಕೊಂಡೆ?

ಹುಸೇ.— ಬುಧ್ಧೀ, ಬಡವನ ತಪ್ಪು ಹೊಟ್ಟೆಯೊಳಗೆ ಹಾಕಿಕೊಳ್ಳಿರಿ. ಈ ಹಾಸಿಗೆಯ ಮೇಲೆ ಏನು ಸುಖವಾಗುತ್ತದೆಂಬುದನ್ನು ನೋಡಬೇಕೆಂದು

ತುಸು ಒರಗುವಷ್ಟರಲ್ಲಿ ಭರ್‍ರೆಂದು ನಿದ್ದೆ ಬಂದಿತು. ಸ್ವಾಮೀ, ನಾನು ಬೇಕೆಂದು ಮಲಗಲಿಲ್ಲ. ನೋಡನೋಡುವಷ್ಟರಲ್ಲಿ ಕಣ್ಣೇ ಮುಚ್ಚಿ ಹೋಯಿತು. ಯಾವ ಅರಿವೂ ಉಳಿಯಲಿಲ್ಲ.

**ಬೀರ.**—(ಬಾದಶಹನನ್ನು ಸನ್ನೆ ಮಾಡಿ ಹೊರಗೆ ಕರೆದು) ಹುಸೇನ ನಿನ್ನ ಹತ್ತರ ಯಾರು ಮಲಗಿದ್ದರು.

**ಹು.**—ನನ್ನ ಹಡೆದಪ್ಪಾ! ನನ್ನ ಹತ್ತರ ಯಾರು ಮಲಗುತ್ತಾರೆ? ನಾನೊಬ್ಬನೇ ಒಂದೀಟ (ತುಸು) ಪವಡಿಸಿದೆ. ಜಂಪು ಹತ್ತಿತು. ದಯವಿಟ್ಟು ಕ್ಷಮಿಸಿರಿ. ಇನ್ನೆಂದೂ ಹೀಗೆ ಮಾಡಾಕಿಲ್ಲ. ನಮ್ಮವ್ವನಾಣೆಯೆಂದರೂ ಮಾಡಾಕಿಲ್ಲ. ಕ್ಷಮಿಸಿರಿ (ಎಂದು ಬಾದಶಹನ ಕಾಲು ಹಿಡಿಯುತ್ತಾನೆ).

**ಬಾದ.**—ಹುಸೇನ, ನಿನ್ನನ್ನು ಕ್ಷಮಿಸಿದ್ದೇನೆ. ನೀನು ಎಚ್ಚರಗೇಡಿಯಾದ್ದರಿಂದ ನೀನು ಇನ್ನು ಮುಂದೆ ಓಲಗದ ಕೆಲಸ ಮಾಡು. ಇಲ್ಲಿ ಬೇಡ. ಹೋಗು. (ಬೀರಬಲ್ಲನ ಕಡೆಗೆ ನೋಡಿ) ನೀನು ಹೇಳಿದ ಮಾತು ಈಗ ನನಗೆ ಅನುಭವಕ್ಕೆ ಬಂತು. ನಿನ್ನ ಗಾದೆಯು ಬಹಳ ಬೆಲೆಯುಳ್ಳದ್ದು. ಈಗ ಎರಡು ಜೀವ ಉಳಿದವು.

**ಬೀರ.**—ಮಹಾರಾಜ, ಈಗ ತಾವು ಪ್ರತ್ಯಕ್ಷ ನೋಡಿದ್ದರಲ್ಲೇನೂ ಸುಳ್ಳಿಲ್ಲ. ತಾವು ಮಾಡಿದ ಅನುಮಾನ ಮಾತ್ರ ಸುಳ್ಳಾಗಿರುತ್ತದೆ. ಜನರು ಈ ಅನುಮಾನವೇ ತಾವು ಪ್ರತ್ಯಕ್ಷ ನೋಡಿದ್ದೆಂದು ವಾಡಿಕೆಯಾಗಿ ನಂಬುತ್ತಾರೆ. ಇದು ಶುದ್ಧ ತಪ್ಪು. ಇದನ್ನು ತಾವು ಮರೆಯಕೂಡದೆಂದು ನಾನು ಬೇಡುತ್ತೇನೆ.

## ೧೭. ಅಳಿಯನು ೧೦ನೆಯ ಗ್ರಹವು

ಒಂದು ದಿವಸ ಬಾದಶಹ ಬೀರಬಲ್ಲರು ಮಾತಾಡುತ್ತ ಕುಳಿತಿರುವಾಗ ಅಳಿಯರ ಕಾಟದ ವಿಷಯವು ಹೊರಟಿತು.

ಬಾದ. — ಬೀರಬಲ್ಲ! ಈ ಅಳಿಯರ ಕಾಟವು ತಾಳಲಾಸಲ್ಲ. ಏನಾದರೂ ಮಾಡಿ ಅತ್ತೆಮಾವಂದಿರನ್ನು ನೋಯಿಸುವುದೇ ಇವರ ಜೀವನೊದ್ದೇಶವಿದ್ದಂತೆ ತೋರುತ್ತದೆ.

ಬೀರ. — ಮಹಾರಾಜ! ಇದೇನು ಹೊಸ ಮಾತಲ್ಲ. ಇದನ್ನು ಕಂಡುಹಿಡಿದು ನಮ್ಮ ಪೂರ್ವಜರು 'ಜಾಮಾತಾ ದಶಮೋಗ್ರಹ:' ಅಂದರೆ ಅಳಿಯನು ೧೦ನೆಯ ಗ್ರಹವಾಗಿ ಕಾಡುತ್ತಾನೆ ಎಂಬ ಗಾದೆಯನ್ನು ಮಾಡಿರುತ್ತಾರೆ. ಮುಗಿಲಿನಲ್ಲಿ (ಆಕಾಶದಲ್ಲಿ) ಇರುವ ೯ ಗ್ರಹಗಳು ನಮ್ಮನ್ನು ಕಾಡುವಂತೆ ಈ ನೆಲದ ಮೇಲಿರುವ ಅಳಿಯನೆಂಬ ೧೦ನೆಯ ಗ್ರಹವೂ ನಮ್ಮನ್ನು ನೋಯಿಸುತ್ತದೆ.

ಬಾದ. — ಇಂತಹ ಅಳಿಯಂದಿರನ್ನು ದಂಡಿಸದಿದ್ದರೆ ನಾನು ಬಾದಶಹನಾಗಿ ಪ್ರಯೋಜನವೇನು?

ಬೀರ. — ಇಂತಹ ಕೆಲಸದಲ್ಲಿ ಕಯ್ಹಾಕುವುದು ಸರಕಾರಕ್ಕೆ ಉಚಿತವಲ್ಲ. ಏಕೆಂದರೆ ಇಂತಹ ಸಂಬಂಧದಲ್ಲಿ ಫಿರ್ಯಾದಿಗಳೇ ಬಹುಶಃ ಬರುವುದಿಲ್ಲ. ನೋಯಿಸಲ್ಪಟ್ಟ ಅತ್ತೆಮಾವಂದಿರು ತಮ್ಮ ಅಳಿಯರಿಗೆ ಶಿಕ್ಷೆಯಾಗಬೇಕೆಂದು ಎಂದೂ ಬಯಸುವುದಿಲ್ಲ.

ಬಾದ. — ಬೀರಬಲ್ಲ! ಸರಕಾರದ ಕರ್ತವ್ಯದ ಬಗ್ಗೆ ನಿನ್ನ ವಿಚಾರಗಳು ಬಹಳ ಸಂಕುಚಿತವಾಗಿದ್ದಂತೆ ತೋರುತ್ತದೆ. ನೀನು ಹೆಣ್ಣುಗರಳಿನವನಾದ್ದರಿಂದ ಹೀಗೆ ಕನಿಕರಬಡುತ್ತಿಯೆಂದು ತೋರುತ್ತದೆ. ಎಲ್ಲ ಅನ್ಯಾಯಗಳನ್ನೂ ಕಟ್ಟು ಮಾಡುವುದು ಸರಕಾರದ ಕರ್ತವ್ಯವಾಗಿರುತ್ತದೆ. ಹಾದರಕ್ಕೆ ಹಡೆದವರು ಕೂಸನ್ನು ಕೊಂದು ಹಾದರವನ್ನು ಮುಚ್ಚಲಿಕ್ಕೆ ಯತ್ನಿಸುತ್ತಾರೆ. ಹೆಂಗಸರು ಗಂಡಂದಿರ ಅಥವಾ ಮನೆಯವರ ಕಾಟ ತಾಳಲಾರದೆ ಆತ್ಮಹತ್ಯಮಾಡಿಕೊಳ್ಳುತ್ತಾರೆ. ಇಂತಹ ಸಂದರ್ಭದಲ್ಲಿ ಫಿರ್ಯಾದಿಗಳು ಬರುವುದಿಲ್ಲ. ಆದರೂ ಸರಕಾರದವರು ಕಯ್ಹಾಕುತ್ತಾರೆ. ಈ ಅಳಿಯಂದಿರು ಬಹಳ ನಿರ್ದಯವುಳ್ಳವರಾದ್ದರಿಂದ ಇವರನ್ನೆಲ್ಲ ಶೂಲಕ್ಕೇರಿಸುವುದೇ ಸರಿಯಾದ ಶಿಕ್ಷೆಯು.

ಬೀರ.—ಮಹಾರಾಜ! ಹಾಗೆ ಮಾಡಿದರೆ ಗೋಳಾಟವು ಬಹಳಾಗುವುದು. ಆದ್ದರಿಂದ ವಿಚಾರಿಸಿ ನೋಡಿರಿ. ಹೀಗೆ ಕಡುತರವಾದ ದಂಡನೆಯನ್ನು ವಿಧಿಸುವುದು ಸರಿಯಲ್ಲ.

ಬಾದ.—ಬೀರಬಲ್ಲ! ನೀನು ಹೆಣ್ಣುಗರಳಿನವನಾಗಿ ತೋರುತ್ತಿ. ವಿಚಾರವಿಲ್ಲ, ಪಚಾರವಿಲ್ಲ. ಈಗ ಅಳಿಯಂದಿರು ರಾಜ್ಯವನ್ನೆಲ್ಲ ಗೋಳಾಟದಿಂದ ತುಂಬಿರುತ್ತಾರೆ. ಇಂತಹರಿಗೆ ದಯೆಯನ್ನು ತೋರಿಸಬೇಕೇ? ಇಷ್ಟು ದಿವಸ ಅವರನ್ನು ಶಿಕ್ಷಿಸದೆ ಹೋದದ್ದರಿಂದ ಅವರು ಕೊಬ್ಬೇರಿರುತ್ತಾರೆ. ಈಗಲಾದರೂ ಕಠಿಣಶಿಕ್ಷೆಯಾದರೆ ಮುಂದಿನವರಿಗೆ ಎಚ್ಚರ ಹುಟ್ಟುವುದು. ಈ ಹೊತ್ತೇ ಎಲ್ಲ ಅಳಿಯರನ್ನೂ ಇಂತಹ ದಿವಸ ಗಲ್ಲಿಗೆ ಹಾಕಿಸುತ್ತೇವೆಂದು ಜಾಹೀರನಾಮೆಯನ್ನು ಹೊರಡಿಸಿ, ಊರಲ್ಲಿ ಡಂಗುರ ಹೊಡಿಸು; ಮತ್ತು ಗಲ್ಲಿಗೆ ಹಾಕಿಸುವ ಸಿದ್ಧತೆಯನ್ನು ೧೦ ದಿವಸಗಳಲ್ಲಿ ಮಾಡು. ಬದಲು ಮಾತಾಡಬೇಡ. ನಾನು ಹೇಳಿದಂತೆ ಆಗಲಿಕ್ಕೇ ಬೇಕು. ಬೇಗನೆ ಎಲ್ಲ ಅಣಿ ಮಾಡು.

ಬಾದಶಹನ ಈ ಕಟ್ಟಪ್ಪಣೆಯನ್ನು ಕೇಳಿ ಬೀರಬಲ್ಲನು ನಿರುತ್ತರನಾದನು. ಹೆಚ್ಚಿಗೆ ಹೇಳಲಿಕ್ಕೆ ಅವನಿಗೆ ಅನುವೇ ದೊರೆಯಲಿಲ್ಲ. ಆದರಿಂದ ನಿರುಪಾಯನಾಗಿ ಬಾದಶಹನು ಹೇಳಿದಂತೆ ಎಲ್ಲ ಸಿದ್ಧತೆಯನ್ನೂ ಮಾಡತೊಡಗಿದನು. ಜನರೆಲ್ಲ ಗಾಬರಿಯಾಗಿ "ನನ್ನನ್ನು ಉಳಿಸಿರಿ" "ತನ್ನನ್ನು ಉಳಿಸಿರಿ" ಎಂದು ಬೀರಬಲ್ಲನ ಕಾಲುಮೇಲೆ ಬೀಳತೊಡಗಿದರು.

ಬೀರ.—ನೀವು ಹೆದರಬೇಡರಿ, ಬಾದಶಹರಿಗೆ ಹುಚ್ಚು ತಲೆಗೇರಿ ಹೀಗೆ ಹುಕುಮು ಮಾಡಿರುತ್ತಾರೆ. ಏನಾದರೂ ಹಂಚಿಕೆ ಮಾಡಿ ನಿಮ್ಮೆಲ್ಲರನ್ನೂ ಉಳಿಸುವೆನು. ಚಿಂತೆ ಮಾಡಬೇಡರಿ.

ಎಂದು ಹೇಳಿ ಸಮಾಧಾನ ಮಾಡಿದನು. ಊರ ಹೊರಗಿನ ಒಂದು ಎತ್ತರವಾದ ದಿಬ್ಬದ ಮೇಲೆ ಒಂದು ಬಂಗಾರದ ಕಂಬವನ್ನೂ ನೂರಾರು ಬೆಳ್ಳಿಯ ಕಂಬಗಳನ್ನೂ ಸಾವಿರಾರು ಕಟ್ಟಿಗೆಯ ಕಂಬಗಳನ್ನೂ ನೆಡಿಸಿಟ್ಟನು. ಗೊತ್ತುಮಾಡಿದ ದಿವಸ ಬಾದಶಹನು ಸರದಾರರೊಡನೆ ಅಲ್ಲಿಗೆ ಹೋಗಿ

ನೋಡುತ್ತಾನೆ, ಒಂದು ಬಂಗಾರದ ಕಂಬವೂ ಕೆಲವು ಬೆಳ್ಳಿಯವೂ ಮತ್ತೆ ಕೆಲವು ಕಟ್ಟಿಗೆಯವೂ ಇದ್ದವು.

ಬಾದ. — ಇದೇನು ಬೀರಬಲ್ಲ! ಒಂದು ಬಂಗಾರದ ಕಂಬವೇಕೆ? ಕೆಲವು ಬೆಳ್ಳಿಯ ಕಂಬಗಳೇಕೆ? ವ್ಯರ್ಥವಾಗಿ ದುಡ್ಡು ಹಾಳು ಮಾಡಿರುತ್ತೀಯಲ್ಲ?

ಬೀರ. — ಮಹಾರಾಜ! ಚಿತ್ತಯಿಸಬೇಕು. ಎಲ್ಲ ಅಳಿಯಂದಿರೂ ಒಂದೇ ಯೋಗ್ಯತೆಯುವರಲ್ಲ. ಅವರವರ ಯೋಗ್ಯತೆಗೆ ತಕ್ಕ ಚಿನ್ನಬೆಳ್ಳಿಯ ಕಂಬಗಳನ್ನು ಮಾಡಿಸಬೇಕಾಯಿತು.

ಬಾದ. — ಈ ಚಿನ್ನದ ಕಂಬ ಒಂದೇ ಇರುತ್ತದೆಯಲ್ಲ. ಇದು ಯಾರಿಗೆ? ಈ ಬೆಳ್ಳಿಯ ಕಂಬಗಳು ಯಾರಿಗೆ?

ಬೀರ. — ಖುದಾವಂದ್ ಕ್ಷಮಿಸಬೇಕು. ನನ್ನಂತಹ ಮತ್ತು ಈ ಅಬುಲ್ಫಾಜಲ್ಲನಂತಹ ಸರದಾರರಿಗೆ ಈ ಬೆಳ್ಳಿಯ ಕಂಬಗಳು ಸಾಕು. ತಾವು ಎಲ್ಲರಿಗೂ ಒಡೆಯರಾದ್ದರಿಂದ ಈ ಚಿನ್ನದ ಕಂಬವನ್ನು ಮಾಡಿಸಿರುತ್ತೇನೆ.

ಬಾದ. — ಭಲೆ! ನಾನೂ ಶೂಲವನ್ನೇರಬೇಕೇನು?

ಬೀರ. — ಅದನ್ನು ನಾನು ಹೇಗೆ ಹೇಳಲಿ! ತಾವು ಅಳಿಯರಾದ್ದರಿಂದ ತಮಗೆ ಅಳಿಯಂದಿರು ದೊರೆತರು. ನಮ್ಮೆಲ್ಲರ ಅವಸ್ಥೆಯೂ ಹಾಗೆಯೇ.

ಬಾದ. — ಛೇ, ಛೇ, ಛೇ, ಇದೆಲ್ಲ ಕೆಲಸ ಕೆಡಿಸಿದೆ. ಹೊಸ ಅಳಿಯಂದಿರನ್ನು ಮಾತ್ರ ಗಲ್ಲಿಗೆ ಹಾಕಿಸಬೇಕೆಂದು ನನ್ನ ಉದ್ದೇಶವು.

ಬೀರ. — ಮಹಾರಾಜ, ನಾವೆಲ್ಲರೂ ಹೊಸಬರಾಗಿದ್ದು ಹಳಬರಾಗಿರುವೆವು. ಹೊಸಬರೇನು ಪಾತಕ ಮಾಡಿರುತ್ತಾರೆ? ಅಳಿಯಂದಿರು ತೀರ ಹೊಸಬರಿದ್ದಾಗ ಹೆಚ್ಚು ಕಾಡುವುದಿಲ್ಲ. ಹಳಬರಾದ ಹಾಗೆಲ್ಲ ಹೆಚ್ಚು ಕಾಡುತ್ತಾರೆ. ತೀರ ಹಳಬರಾದ ಬಳಿಕ ತಮ್ಮ ಅಳಿಯಂದಿರ ಕಾಟಕ್ಕೆ ಈಡಾಗುತ್ತಾರೆ. ಅವರು ಮಾಡುವ ತಪ್ಪಿಗೆ ದೇವರೇ ಅವರನ್ನು ಶಿಕ್ಷಿಸುತ್ತಾನೆ.

ಬಾದ. — ಈ ಮಾತನ್ನು ನೀನು ನನಗೆ ಮೊದಲೇ ತಿಳಿಸಬೇಕಾಗಿತ್ತು. ಆಗ ನೀನೇನೂ ಹೇಳಲೇ ಇಲ್ಲ.

ಬೀರ.—ಮಹಾರಾಜ, ಬದಲು ಮಾತಾಡಬಾರದೆಂದು ತಾವು ಕಟ್ಟ ಪ್ಪಣೆ ಕೊಟ್ಟುದರಿಂದ ನನ್ನ ಬಾಯಿಗೆ ಬೀಗ ಬಿತ್ತು. ಕೇಳಿದರೆ ಅಲ್ಲವೆ ಹೇಳುವುದು ?

ಬಾದ.—ನನಗೇನೋ ಆಗ ಬಹಳ ಸಿಟ್ಟು ಬಂದಿತ್ತು. ಒಳ್ಳೆಯದು, ಆದ್ದಾಯಿತು. ಈ ಕಂಬಗಳನ್ನು ಬೇಗನೆ ಕಿತ್ತುಹಾಕಿಸು ಮತ್ತು ಅಳಿಯುಂದಿರು ಕಾಡಬಾರದೆಂತಲೂ ಕಾಡಿದರೆ ದೇವರೂ ಸರಕಾರವೂ ಅವರನ್ನು ದಂಡಿಸುವುದೆಂತಲೂ ಒಂದು ಒಟ್ಟು ಹುಕುಮನ್ನು ಕೊಡಿಸು. ಇಷ್ಟೇ ಸಾಕು.

## ೧೮. ಸ್ವಾರ್ಥದಿಂದ ಒಮ್ಮನಸ್ಸು

ಒಂದು ದಿವಸ ಎಲ್ಲ ರಾಜಕಾರ್ಯವು ಬೇಗನೆ ಮುಗಿದುದರಿಂದ ಬಾದಶಹನು ತನ್ನ ಗಾಯಕನಾದ ತಾನಸೇನನನ್ನು ಕರೆಯಿಸಿ ಸರದಾರರೊಡನೆ ಗಾಯನ ಕೇಳುತ್ತ ಒಡ್ಡೋಲಗದಲ್ಲಿ ಕುಳಿತನು.

ಬಾದ.—(ಸರದಾರರ ಕಡೆಗೆ ನೋಡಿ) ಪ್ರಾಣಿಗಳಿಗೆ ಅತಿ ಪ್ರಿಯಕರ ವಸ್ತು ಯಾವುದು ? ಮತ್ತು ಯಾವ ಸಂದರ್ಭದಲ್ಲಿ ಜನರು ಒಮ್ಮನಸ್ಸಿನವರಾಗುತ್ತಾರೆ ?

ಒಬ್ಬ ಸರದಾರ—ಖುದಾವಂದ್, ಮನುಷ್ಯನಿಗೆ ಹೆಚ್ಚಿನ ಪ್ರೀತಿಯ ವಸ್ತುವೆಂದರೆ ತಾಯಿ ಮತ್ತು ಪರಚಕ್ರದ ಭೀತಿ ಬಂದಾಗ ಜನರು ಒಮ್ಮನಸ್ಸಿನವರಾಗುತ್ತಾರೆ. .

ಮತ್ತೊಬ್ಬ—ಈತ ಹೇಳಿದ್ದು ಸರಿಯಲ್ಲ. ಎಲ್ಲಕ್ಕೂ ಪ್ರಿಯಕರವಾದ ವಸ್ತು ಎಂದರೆ ಮಕ್ಕಳು ಮತ್ತು ಜನರು ಯಾರಿಗಾದರೂ ಕೆಡಕು ಮಾಡಲಿಕ್ಕೆ ಒಮ್ಮನಸ್ಸಿನವರಾಗುತ್ತಾರೆ.

ಹೀಗೆ ಒಬ್ಬೊಬ್ಬರು ಒಂದೊಂದು ತೆರವಾಗಿ ಹೇಳಿದ ಬಳಿಕ, ಬೀರಬಲ್ಲನ ಸರತಿಯು ಬಂದಿತು.

ಬೀರ.—ಮಹಾರಾಜ ! ಈ ಸರದಾರರು ಹೇಳಿದ್ದು ಸರಿಯೆಂದು ನನ್ನ ಅಲ್ಪಮತಿಗೆ ತೋರುವುದಿಲ್ಲ. ಪ್ರಾಣಿಗಳಿಗೆ ಅತಿ ಪ್ರಿಯಕರವಾದ ವಸ್ತುವು



ತಾನಸೇನ

ಪ್ರಾಣವು. ಅದಕ್ಕೂ ಹೆಚ್ಚಿನ ಪ್ರೀತಿಯ ವಸ್ತುವು ಇಲ್ಲವೇ ಇಲ್ಲ. ಜನರು ಒಮ್ಮೊಮ್ಮೆ ಜೀವಕ್ಕಿಂತ ಅದು ಹೆಚ್ಚು ಪ್ರಿಯವಾದ್ದು, ಇದು ಹೆಚ್ಚು ಪ್ರಿಯ ವಾದ್ದು ಎಂದು ಹೇಳುವುದು ನಿಜ. ಆದರೆ ಅದೆಲ್ಲ ಭ್ರಮೆ, ಮಾಯೆ, ಅಜ್ಞಾನವು, ಸುಳ್ಳು. ಪ್ರಾಣ ಕೊಡುವ ಸಂದರ್ಭ ಬಂದ ಕೂಡಲೆ ಆಡಿದ ಮಾತೆಲ್ಲ ಮರೆತು ಹೋಗುತ್ತದೆ. ಆದ್ದರಿಂದ ಪ್ರಾಣವೇ ಎಲ್ಲಕ್ಕೂ ಅಧಿ ಕವು. ಇನ್ನು ಒಬ್ಬಗೆಯ ವಿಷಯವಾಗಿ ಒಂದೇ ತರದ ಸ್ವಾರ್ಥವನ್ನು

ಸಾಧಿಸಲಿಕ್ಕೆ ಜನರು ಒಮ್ಮನಸ್ಸಿನವರಾಗುತ್ತಾರೆ. ಒಂದೇ ಪ್ರಕಾರದ ಸ್ವಾರ್ಥಸಾಧನವೇ ಒಬ್ಬಗೆಯ ಮುಖ್ಯ ಕಾರಣವು.

ಬೀರಬಲ್ಲನ ಈ ಮಾತಿಗೆ ಉಳಿದ ಸರದಾರರು ಒಪ್ಪಲಿಲ್ಲ. ಆದ್ದರಿಂದ,

ಬಾದ.—ಬೀರಬಲ್ಲ! ಇವರು ನಿನ್ನ ಮಾತಿಗೆ ಒಡಂಬಡುವುದಿಲ್ಲ. ಆದ್ದರಿಂದ ಅವುಗಳ ನಿಜತ್ವವನ್ನು ಪ್ರತ್ಯಕ್ಷವಾಗಿ ಮಾಡಿ ತೋರಿಸು. ಇಲ್ಲವಾದರೆ ನಾನೂ ನಂಬಲಾರೆನು.

ಬೀರ.—ಮಹಾಪ್ರಸಾದ. ಸಿದ್ಧಮಾಡಿ ತೋರಿಸುವೆನು.

ಮುಂದೆ ಕೆಲದಿವಸ ಹೋದ ಬಳಿಕ ಬೀರಬಲ್ಲನು ಒಂದು ದೊಡ್ಡ ಕಲ್ಲಿನ ಡೋಣಿಯನ್ನು ತರಿಸಿ, ಅದರಲ್ಲಿ ಒಂದು ಮರಿಯನ್ನೊಡಗೊಂಡಿರುವ ಕೋತಿಯನ್ನು ನಿಲ್ಲಿಸಿ, ಬಾದಶಹನನ್ನೂ ಸರದಾರರನ್ನೂ ನೋಡಲಿಕ್ಕೆ ಕರೆಯಿಸಿದನು. ಅವರೆಲ್ಲರು ಬಂದ ಬಳಿಕ ಆ ಡೋಣಿಯಲ್ಲಿ ನೀರು ತುಂಬಲು ಹೇಳಿದನು, ಎದೆಮಟ ನೀರು ಬಂದ ಕೂಡಲೆ, ಆ ಮಂಗವು ತನ್ನ ಮರಿಯನ್ನು ಹೆಗಲ ಮೇಲೆ ಇಟ್ಟುಕೊಂಡಿತು; ಹೆಗಲಿಗೆ ನೀರು ಬಂದೊಡನೆಯೇ ಅದನ್ನು ತಲೆಯ ಮೇಲೆ ಇಟ್ಟುಕೊಂಡಿತು.

ಸರದಾರರು.—ನೋಡಿರಿ! ಪ್ರಾಣಕ್ಕಿಂತ ಮಕ್ಕಳೇ ಹೆಚ್ಚು (ಎಂದು ಕೂಗಿದರು).

ಬೀರ.—ಸ್ವಲ್ಪ ತಾಳಿರಿ. ಪ್ರಯೋಗವು ಮುಗಿದ ಬಳಿಕ ತೀರ್ಪು ಕೊಡಿರಿ. ಅವಸರ ಪಡಬೇಡರಿ.

ಬಳಿಕ ನೀರು ಬಾಯಿಗೆ ಬಂದಿತು. ಇನ್ನು ತಾನು ಮುಳುಗಿ ಸಾಯುವೆನೆಂದು ಮಂಗಕ್ಕೆ ಹೆದರಿಕೆಯುಂಟಾಯಿತು. ಆಕ್ಷಣವೇ ಅದು ತನ್ನ ಮರಿಯನ್ನು ಕೆಳಕ್ಕೆ ಹಾಕಿ, ಅದರ ಮೇಲೆ ನಿಂತುಕೊಂಡಿತು. ಬೀರಬಲ್ಲನೂ ಬಾದಶಹನೂ ಚಪ್ಪಾಳೆ ಬಾರಿಸಿದರು. “ಹೌದು! ಬೀರಬಲ್ಲ, ನಿನ್ನ ಮಾತು ಸತ್ಯ” ಎಂದು ಎಲ್ಲರೂ ಏಕಕಂಠದಿಂದ ಕೂಗಿದರು. ಕೂಡಲೆ ಬೀರಬಲ್ಲನು ನೀರು ಸುರುವುವುದನ್ನು ನಿಲ್ಲಿಸಿ, ಡೋಣಿಯ ಕೆಳಗಿನ ತೂತಿನಿಂದ ನೀರು ಬಿಡಲಿಕ್ಕೆ ಹೇಳಿ ಮಂಗವನ್ನು ಬಿಚಿಸಿದನು. ಅದು ಮರಿಯನ್ನು ತೆಗೆದುಕೊಂಡು ಓಡಿಹೋಯಿತು. ಎಲ್ಲ ಪ್ರೇಕ್ಷಕರೂ ಬೀರ

ಬಲ್ಲನ ಜಾಣತನವನ್ನು ಕೊಂಡಾಡುತ್ತ ತಂತಮ್ಮ ಮನೆಗೆ ಹೊರಟು ಹೋದರು.

ಮುಂದೆ ೨|೩ ತಿಂಗಳು ಹೋದ ಬಳಿಕ ಒಂದು ದಿವಸ ಬೀರಬಲ್ಲನು ಬಾದಶಹನ ಹೂದೋಟದಲ್ಲಿರುವ ಹೌದವನ್ನು† ತೆರವು ಮಾಡಿಸಿ, ಅದರ ಮೇಲೆ ಒಂದು ಬಿಳಿಯ ಅರಿವೆಯನ್ನು ಗಟ್ಟಿನುಟ್ಟಾಗಿ ಹೊದ್ದಿಸಿ, ಆಹೊತ್ತು ರಾತ್ರಿ ಪ್ರತಿಯೊಬ್ಬ ಸರದಾರನೂ ಒಂದೊಂದು ಕೊಡ ಹಾಲನ್ನು ಅರಿವೆಯ ಮೇಲೆ ಸುರಿಯಬೇಕೆಂದು ಬಾದಶಹನಿಂದ ಹುಕುಮು ಮಾಡಿಸಿದನು. ಪ್ರತಿಯೊಬ್ಬ ಸರದಾರನೂ ಅಷ್ಟು ಹಾಲಿನಲ್ಲಿ ತಮ್ಮದೊಂದು ಕೊಡ ನೀರು ಸುಲಭವಾಗಿ ಅಟ್ಟಿಸುವುದೆಂದೆಣಿಸಿ, ಒಂದೊಂದು ಕೊಡ ನೀರನ್ನು ಹೌದಕ್ಕೆ ಹಾಕಿಸಿಬಿಟ್ಟರು. ಮರುದಿವಸ ಬಾದಶಹ ಬೀರಬಲ್ಲರು ಹೋಗಿ ನೋಡುತ್ತಾರೆ, ಹೌದದ ತುಂಬೆಲ್ಲ ನೀರೇ. ಒಂದು ಕೊಡ ಹಾಲನ್ನಾದರೂ ಯಾರೂ ಹಾಕಲಿಲ್ಲ. ಅದನ್ನು ಕಂಡು ಬಾದಶಹನು ಸಿಟ್ಟುಬೆಂಕಿಯಾಗಿ ಕಾಲಪ್ಪಳಿಸಲಾರಂಭಿಸಿದನು.

**ಬೀರ.**—ಮಹಾರಾಜ! ತಾವು ಸಿಟ್ಟಾಗಬಾರದು. ತಮ್ಮ ಸರದಾರರೊಳಗೆ ಒಬ್ಬನ ಮನಸ್ಸಿನಲ್ಲಿಯಾದರೂ ತಮ್ಮ ಅಪ್ಪಣೆಯನ್ನು ಮಿಾರಬೇಕೆಂದಿರಲಿಲ್ಲ. ಎಲ್ಲರೂ ತಮಗೆ ವಿಧೇಯರಾಗಿಯೇ ಇರುತ್ತಾರೆ. ನಾನು ತಮಗೆ ಮೊದಲು ಹೇಳಿದಂತೆ ಅವರೆಲ್ಲರ ಸ್ವಾರ್ಥಬುದ್ಧಿಯು ಅವರಲ್ಲಿ ಹಾಲಿನ ಬದಲು ನೀರು ಹಾಕಿಸುವ ಒಂದೇ ವಿಚಾರವನ್ನು ಹುಟ್ಟಿಸಿರುತ್ತದೆ. ಆದ್ದರಿಂದ ತಾವು ಮುನಿಯ ಕೂಡದು. ಮನುಷ್ಯ ಸ್ವಭಾವವನ್ನು ತಿಳಿದುಕೊಳ್ಳುವುದು ರಾಜರಿಗೆ ಅವಶ್ಯವಾದ್ದು.

**ಬಾದ.**—ನನ್ನ ಸರದಾರರು ಹಾಲು ಹಾಕಬೇಕೆಂದು ಹೇಳಿರಲು, ಅವರ ಆಳುಗಳು ಹಾಲಿನ ಬೆಲೆಯನ್ನು ಸ್ವಂತ ವೆಚ್ಚಕ್ಕಿಟ್ಟುಕೊಂಡು, ನೀರು ತಂದು ಸುರಿದಿರಬಹುದು.

**ಬೀರ.**—ಹಾಗಾಗಿರಲಾರದು; ಎಲ್ಲ ಆಳುಗಳೂ ಎಂದೂ ಅಪ್ರಮಾಣಿಕರಾಗಿರಲಾರರು. ಒಬ್ಬಿಬ್ಬರು ಮಾತ್ರ ನೀರು ಹಾಕಿದ್ದರೆ ಹಾಗೆ ಹೇಳಬಹುದಾಗಿತ್ತು. ಎಲ್ಲ ಆಳುಗಳು ಹೀಗೆ ಮೋಸ ಮಾಡುವುದು ಅಸಂಭವ.

† ನೀರು ಹಾಕಿಡಲಿಕ್ಕೆ ಮಾಡಿಸಿದ ತಗ್ಗು.

ಬಾದ.—ಇದನ್ನು ಪರೀಕ್ಷಿಸಲಿಕ್ಕೆ ನಾವಿಬ್ಬರೂ ನಾಳೆ ವ್ಯಾಪಾರಿಗಳ ವೇಷ ಹಾಕಿಕೊಂಡು ಹೋಗೋಣ. ಆಗ ದಿಟವಾದ ಸಂಗತಿಯು ಹೊರ ಬೀಳುವುದು.

ಮರುದಿನ ಇರುಳು ೯ ಗಂಟೆಗೆ ಬಾದಶಹ ಬೀರಬಲ್ಲರಿಬ್ಬರು ವೇಷ ಬದಲಾಯಿಸಿಕೊಂಡು ಹೊರಟರು. ಒಂದು ದೊಡ್ಡ ಮನೆಯ ಮುಂದಣ ಬಾಗಿಲನ್ನು ತಟ್ಟಲು, ಆಳು ಬಾಗಿಲು ತೆರೆದನು. ಮನೆಯ ಯಜಮಾನ ನನ್ನು ಕಂಡು,—

ಬೀರ.—ಸ್ವಾಮಿಾ! ನಾವು ಇರಾಣದ ವರ್ತಕರು; ಈಗ ತಾನೆ ಬಂದೆವು. ಇಲ್ಲಿ ನಮಗೆ ಗುರುತು ಪರಿಚಯುದವರು ಯಾರೂ ಇಲ್ಲ. ಈ ಇರುಳು ನಮಗೆ ಉಳಿಯಲಿಕ್ಕೆ ಸ್ಥಳ ಕೊಟ್ಟರೆ, ಬಹಳ ಉಪಕಾರವಾಗುವುದು. ನಾಳೆ ಬೆಳಿಗ್ಗೆ ಬೇರೊಂದು ಮನೆಯನ್ನು ಹುಡುಕಿಕೊಂಡು ಹೋಗುವೆವು.

ಯಜಮಾನ— ತಾವು ಕರೆದರೂ ಬರಲಿಕ್ಕಿಲ್ಲ. ಏನೋ ನಮ್ಮ ಪುಣ್ಯಬಲದಿಂದ ಬಂದಿರುತ್ತೀರಿ. ಈ ೨ ಕೋಣೆಗಳನ್ನು ತಮ್ಮ ಸ್ವಾಧೀನಕ್ಕೆ ಕೊಡುತ್ತೇನೆ, ಇಲ್ಲಿ ಒಂದಿರುಳೇಕೆ ಒಂದು ತಿಂಗಳು ಇದ್ದರೂ ಅಡ್ಡಿಯಿಲ್ಲ; ಊಟಕ್ಕೆ ಏಳಿರಿ. ನಾನು ಈಗ ತಾನೆ ಊಟ ಮಾಡಿದೆನು. ಎಲ್ಲ ಸಿದ್ಧ ವಾಗಿದೆ.

ಬೀರ.—ಮಹಾರಾಯಾ! ದೇವರು ನಿನಗೆ ಕಲ್ಯಾಣ ಮಾಡಲಿ, ನಾವು ಮೂರು ಸಂಜೆಯ ಮುಂದೆ ಊಟ ತೀರಿಸಿಕೊಂಡು ಇಲ್ಲಿಗೆ ಬಂದೆವು. ನಿನ್ನ ಅತಿಥ್ಯವನ್ನು ನೋಡಿ ನಮಗೆ ಬಹಳ ಸಂತೋಷವಾಯಿತು. ಈಗ ಬರುವಾಗ ಒಂದು ಸುದ್ದಿಯನ್ನು ಕೇಳಿದೆವು. ಅದನ್ನು ಕೇಳಿ ಆಶ್ಚರ್ಯವಾಯಿತು. ಅದು ಎಷ್ಟು ಮಟ್ಟಿಗೆ ದಿಟವೋ ಗೊತ್ತಾಗುವುದಿಲ್ಲ.

ಯಜಮಾನ.—ಅದೇನು ಸುದ್ದಿ ಸ್ವಾಮಿಾ? ನನಗೆ ಗೊತ್ತಿದ್ದಷ್ಟು ಹೇಳುವೆನು.

ಬೀರ.—ನಿಮ್ಮ ಬಾದಶಹನು ತೋಟದ ಹೌದದಲ್ಲಿ ಪ್ರತಿಯೊಂದು ಮನೆಯವರು ಒಂದೊಂದು ಕೊಡ ಹಾಲು ಹಾಕಬೇಕೆಂದು ಕಟ್ಟು ಮಾಡಿ

ದ್ದನಂತೆ; ಆದರೆ ಕೆಲವರು ನೀರು ಹಾಕಿದ್ದರಂತೆ. ನಿಮ್ಮ ಬಾದಶಹನಿಗೆ ಇಷ್ಟು ಹಾಲು ಏತಕ್ಕೆ ಬೇಕಾಗಿತ್ತು? ಬೇಕಾಗಿದ್ದರೆ ಒಬ್ಬ ಅಧಿಕಾರಿಯನ್ನು ನೇಮಿಸಿ ಒಂದೊಂದು ಕೊಡ ಹಾಲು ತರಿಸಿಕೊಳ್ಳಲಿಲ್ಲವೇಕೆ? ಹಾಲು ಅಥವಾ ನೀರು ಹಾಕುವಾಗ ನೋಡಲಿಕ್ಕೆ ಯಾರೂ ಇರಲಿಲ್ಲವಂತೆ? ಇದು ಎಂತಹ ಅವ್ಯವಸ್ಥೆ?

ಯಜಮಾನ—ಬಾದಶಹನು ಕೊಡ ಹಾಲು ಹಾಕಬೇಕೆಂದು ಅಪ್ಪಣೆ ಮಾಡಿದ್ದು ನಿಜ. ಇಷ್ಟು ಹಾಲು ಏಕೆ ಬೇಕಾಗಿತ್ತೋ ನನಗೆ ತಿಳಿಯದು. ಇಷ್ಟು ಹಾಲಿನಲ್ಲಿ ನನ್ನದೊಂದು ಕೊಡ ನೀರು ಗೊತ್ತಾಗುವ ಸಂಭವವಿಲ್ಲೆಂದು ನಾನು ಒಂದು ಕೊಡ ನೀರು ಕಳುಹಿದೆನು.

ಬೀರ.—ತಾವು ಮುಚ್ಚುಮರೆ ಮಾಡದೆ, ಇದ್ದುದನ್ನು ಇದ್ದ ಹಾಗೆ ಹೇಳಿದ್ದನ್ನು ಕೇಳಿ ನಮಗೆ ಬಹಳ ಸಂತೋಷವಾಯಿತು. ಅದರೆ ಬಾದಶಹರು ಕೇಳಿದರೆ ಏನು ಹೇಳುವಿರಿ?

ಯಜಮಾನ— ಹಾಲು ಕಳುಹಿಸಿದೆನೆಂದೇ ಹೇಳುವೆನು. ನನ್ನದೊಂದು ಕೊಡ ನೀರು ಅವರಿಗೆ ಗೊತ್ತಾಗಲಿಕ್ಕೆ ಮಾರ್ಗವೇ ಇಲ್ಲ.

ಬಾದ.—(ತನ್ನ ಸ್ವಾಭಾವಿಕ ಸ್ವರದಿಂದ) ನಾನು ಯಾರೆಂಬುದು ಗೊತ್ತಾಗಲಿಲ್ಲವೇ? (ಬೀರಬಲ್ಲನು ಸನ್ನೆ ಮಾಡುತ್ತಾನೆ.)

ಯಜಮಾನ—(ನಿರೀಕ್ಷಿಸಿ ನೋಡಿ, ಬಾದಶಹನನ್ನು ಗುರುತಿಸಿ) ಮಹಾರಾಜ! ಕ್ಷಮಿಸಿರಿ (ಎಂದು ಬಾದಶಹನ ಕಾಲನ್ನು ಗಟ್ಟಿಯಾಗಿ ಹಿಡಿದುಕೊಳ್ಳುತ್ತಾನೆ.)

ಬಾದ.—ಏಳು! ಅಂಜಬೇಡ. ನನಗೆ ಹಾಲು ಬೇಕಾಗಿರಲಿಲ್ಲ. ಸ್ವಾರ್ಥದಿಂದ ಜನರು ಹೇಗೆ ಒಮ್ಮನಸ್ಸಿನವರಾಗುತ್ತಾರೆಂಬುದನ್ನು ಬೀರಬಲ್ಲನು ಸಿದ್ಧಮಾಡಿ ತೋರಿಸಿದನು. ನೀವೆಲ್ಲರೂ ಸ್ವಾರ್ಥಪರರಾಗಿ ಹಾಲಿನ ಬದಲು ನೀರನ್ನೇ ಕಳುಹಿದಿರಿ. ಏನೂ ಚಿಂತೆಯಿಲ್ಲ. ನೀವು ನೊಂದುಕೊಳ್ಳಬೇಡರಿ.

ಬಳಿಕ ಬಾದಶಹ ಬೀರಬಲ್ಲರು ಉಚಿತಪ್ರಕಾರದಿಂದ ಹೊರಟು ಹೋದರು.

## ೧೯. ದಂಡನೆಯಲ್ಲಿ ಹೆಚ್ಚುಕಡಮೆ

ಒಂದು ದಿವಸ ಬಾದಶಹ ಬೀರಬಲ್ಲರು ರಾಜ್ಯದಾಡಳತೆಯ ಬಗ್ಗೆ ಮಾತಾಡುತ್ತ ಕುಳಿತಿರುವಾಗ, ಶಿಕ್ಷೆಯ ಹೆಚ್ಚುಕಡಮೆಯ ವಿಷಯವು ಹೊರ ಟಿತು.

ಬಾದ.—ಬೀರಬಲ್ಲ, ಒಂದೇ ತರದ ತಪ್ಪನ್ನು ಮಾಡಿದವರಿಗೆ ಹೆಚ್ಚು ಕಡಮೆ ಶಿಕ್ಷೆಯಾಗಬಹುದೇನು ?

ಬೀರ.—ಮಹಾರಾಜ, ಆಗಬಹುದು.

ಬಾದ.—ಅದು ಹೇಗೆ ? ಒಂದೇ ತರದ ತಪ್ಪಿಗೆ ಅಷ್ಟೇ ಶಿಕ್ಷೆಯಾಗ ಬೇಕು. ಇಲ್ಲವಾದರೆ ಅನ್ಯಾಯವಾಗುವುದು.

ಬೀರ.—ಮಹಾರಾಜ, ಶಿಕ್ಷೆ ಅಥವಾ ದಂಡನೆಯು ಮೂರು ಸಂಗತಿ ಗಳನ್ನು ಅವಲಂಬಿಸಿರುತ್ತದೆ. ೧ನೆಯದು ಅಪರಾಧ, ಅದು ಸುಲಭವಾಗಿ ಗೊತ್ತಾಗುತ್ತದೆ. ಅದರ ಬಗ್ಗೆ ಭಿನ್ನಮತವಾಗುವ ಸಂಭವವಿಲ್ಲ. ೨ನೆ ಯದು ತಪ್ಪುಗಾರನ ಸ್ಥಿತಿಗತಿಸ್ವಭಾವ. ೩ನೆಯದು ನ್ಯಾಯಾಧೀಶರ ಅವಸ್ಥೆ. ಈಯೆರಡು ಸಂಗತಿಗಳಲ್ಲಿರುವ ಹೆಚ್ಚುಕಡಮೆಯಿಂದ ಶಿಕ್ಷೆ ಯಲ್ಲಿಯೂ ಹೆಚ್ಚುಕಡಮೆ ಆಗಬಹುದು.

ಬಾದ.—ತಪ್ಪುಗಾರರ ಸ್ಥಿತಿಗತಿಸ್ವಭಾವಗಳನ್ನು ನ್ಯಾಯಾಧೀಶನು ತೆಗೆದುಕೊಂಡು ಮಾಡುವುದೇನು ? ಅವನು ಹೇಗೇ ಇರಲಿ, ಅಷ್ಟೇ ಶಿಕ್ಷೆ ಕೊಟ್ಟರಾಯಿತು. ಅವರ ದೊಡ್ಡಸ್ತಿಕೆನಡತೆಗಳ ಗೊಡವೆ ನಮಗೇಕೆ ?

ಬೀರ.—ಮಹಾರಾಜ, ಅದು ಹಾಗಲ್ಲ. ಜನರು ಅಂತಹ ತಪ್ಪನ್ನು ಮುಂದೆ ಮಾಡಬಾರದೆಂಬುದೇ ಶಿಕ್ಷೆಯ ಮುಖ್ಯೋದ್ದೇಶವು. ಆದ್ದರಿಂದ ನ್ಯಾಯಾಧೀಶರು ಅವರ ಶೀಲಸ್ವಭಾವವನ್ನು ಅರಿತವರಾಗಿರಲೇ ಬೇಕು. ಉದಾಹರಣಾರ್ಥವಾಗಿ ಮೊನ್ನೆ ಮಾಡಿದ ಒಂದು ನ್ಯಾಯ ವಿಚಾರಣೆಯಲ್ಲಿ ಒಂದೇ ಅಪರಾಧ ಮಾಡಿದ ಮುವ್ವರೊಳಗೆ ಒಬ್ಬನ ಮೇಲೆ ಸಿಟ್ಟುಮಾಡಿ ಕಳುಹಿಸಿಬಿಟ್ಟೆನು, ಮತ್ತೊಬ್ಬನಿಗೆ ದಂಡ ಮಾಡಿದೆನು, ಮಗದೊಬ್ಬನನ್ನು ಸೆರೆಮನೆಗೆ ಕಳುಹಿಸಿದೆನು.

ಬಾದ.—ಬೀರಬಲ್ಲ, ಮೊದಲನೆಯುವನಿಗೆ ನೀನು ಬಹಳ ಕರುಣೆಯು ನ್ನು ತೋರಿಸಿದೆ. ಅವನು ನಿನ್ನ ಆಪ್ತನೇನು?

ಬೀರ.—ಮಹಾರಾಜ, ಕ್ಷಮಿಸಿರಿ. ಮೊದಲನೆಯುವನು ನನ್ನ ಆಪ್ತ ನಲ್ಲ, ಇಷ್ಟನಲ್ಲ. ಅವನ ಗುರುತು ಕೂಡ ನನಗೆ ಇದ್ದಿರಲಿಲ್ಲ. ಆದರೆ ಪರಿಣಾಮದಿಂದ ನೋಡಲು ನಾನು ಅವನಿಗೆ ಮೂರನೆಯುವನಿಗಿಂತಲೂ ಬಹಳ ಕಠಿಣ ಶಿಕ್ಷೆಯನ್ನು ಕೊಟ್ಟೆನೆಂದು ತೋರುತ್ತದೆ. ನಾನು ಅವನ ಸ್ಥಿತಿಗತಿಯನ್ನು ಹೆಚ್ಚಾಗಿ ತಿಳಿಕೊಳ್ಳದೆ ಇದ್ದುದು ತಪ್ಪೇ ಸರಿ. ಆದ್ದರಿಂದ ನಮ್ಮ ಪೂರ್ವಜರು ಪಂಚರೇ ನ್ಯಾಯನಿರ್ಣಯ ಮಾಡಬೇಕೆಂದು ಕಟ್ಟು ಮಾಡಿದ್ದರು.

ಬಾದ.—ಮೊದಲನೆಯುವನಿಗೆ ನೀನು ಶಿಕ್ಷೆಯನ್ನೇ ಕೊಡಲಿಲ್ಲ. ಹೀಗಿದ್ದೂ ಅದು ಕಠಿನ ಶಿಕ್ಷೆಯಾಯಿತೆಂಬುದರ ಅರ್ಥವೇನು?

ಬೀರ.—ಮಹಾರಾಜ, ಮೊದಲನೆಯುವನ ಮೇಲೆ ಸಿಟ್ಟುಮಾಡಿದ ಕೂಡಲೆ ಅವನ ಮೋರೆ ಅಳಲೆಯ ಕಾಯಷ್ಟು ಸಣ್ಣದಾಯಿತು. ಅವನು ಕತ್ತಲಾಗುವ ವರೆಗೂ ನ್ಯಾಯಸ್ಥಾನವನ್ನು ಬಿಡಲಿಲ್ಲ. ಅವನಿಗೆ ಮಾನವು ಪ್ರಾಣಕ್ಕಿಂತ ಹೆಚ್ಚಾದ್ದರಿಂದ, ಮುಂದಿಗೆ ಮೋರೆಯನ್ನು ತೋರಿಸಲಾರದೆ, ಅವನು ಮನೆಗೆ ಹೋಗದೆ, ಊರ ಹೊರಗಿನ ಬಾವಿಯಲ್ಲಿ ಬಿದ್ದು ಪ್ರಾಣ ಬಿಟ್ಟನು. ಮೂರನೆಯುವನು ಸೆರೆಮನೆಯಿಂದ ಬಿಡುಗಡೆ ಹೊಂದಿ, ಮೊದಲಿ ನಂತೆ ಕುಚೋದ್ಯ ಮಾಡಲಾರಂಭಿಸಿದ್ದಾನೆ!!

ಬಾದ.—ಅಹುದು! ಬೀರಬಲ್ಲ, ನಾನು ಈ ಆತ್ಮಹತ್ಯದ ವೃತ್ತಾಂತ ವನ್ನು ಕೇಳಿರುತ್ತೇನೆ. ಮಾನವಂತರು ಕೆಲವರಿರುತ್ತಾರೆ. ಅವರಿಗೆ ಮಾನ ಹೋದರೆ ಜೀವ ಹೋದಂತಾಗುವುದು. ನಾಚಿಕೆಗೇಡಿಗಳನ್ನು ಎಷ್ಟು ಜರೆ ದರೂ ಅವರ ಮನಸ್ಸಿಗೆ ಅದು ಎಳ್ಳಷ್ಟಾದರೂ ಹತ್ತುವುದಿಲ್ಲ. ಮೂಗು ಕೊಯ್ದರೂ ಮೂಗಿನ ಹೊಳ್ಳೆಗಳಿರುತ್ತವೆಂದು ಜಂಬ ಮಾಡುವವರು ಎಷ್ಟೋ ಜನರಿರುತ್ತಾರೆ. ಆದ್ದರಿಂದ ತಪ್ಪುಗಾರರ ಸ್ಥಿತಿಗತಿಯನ್ನು ಲಕ್ಷಿಸಿ ಶಿಕ್ಷೆಯನ್ನು ವಿಧಿಸಬೇಕೆಂಬ ನಿನ್ನ ಹೇಳಿಕೆಯು ಅಕ್ಷರಶಃ ನಿಜವಾದ್ದು. ೨ನೆಯ ಸಂಗತಿಯು ತಿಳಿದಂತಾಯಿತು. ೩ನೆಯ ಸಂಗತಿಯನ್ನು ತಿಳಿಸಿ

ಹೇಳು. ನ್ಯಾಯಾಧೀಶರ ಅವಸ್ಥೆಯಿಂದ ಶಿಕ್ಷೆಯಲ್ಲಿ ಹೆಚ್ಚುಕಡಮೆ ಹೇಗೆ ಆಗುತ್ತದೆ?

ಬೀರ.—ಮಹಾರಾಜ, ಪಂಚನಿರ್ಣಯ ಪದ್ಧತಿಯಲ್ಲಿ ಈ ವ್ಯತ್ಯಾಸವು ಸ್ಪಷ್ಟವಾಗಿ ತೋರುತ್ತದೆ. ತಾವು ನ್ಯಾಯಾಧೀಶರಿಂದ ವಿಚಾರಣೆಯನ್ನು ಮಾಡಿಸುತ್ತಿರುವುದರಿಂದ ಅವರ ಅವಸ್ಥೆಯಲ್ಲಿ ಹೆಚ್ಚುಕಡಮೆಯಾಗುವುದಿಲ್ಲ.

ಬಾದ.—ಒಳ್ಳೆಯದು. ನೀನು ಏನಾದರೂ ತಪ್ಪು ಮಾಡಿದರೆ ಅದರ ವಿಚಾರಣೆಯನ್ನು ಪಂಚರ ಮುಖಾಂತರ ಮಾಡಿಸುವೆನು. ಆಗ ನನಗೆ ಈ ವ್ಯತ್ಯಾಸವನ್ನು ತೋರಿಸು.

ಬೀರ.—ಏಕಾಗಲೊಲ್ಲದು? ಹಾಗೆಯೇ ಆಗಲಿ. ಸಂದರ್ಭ ಬಂದಾಗ ತಮಗೆ ಈ ಹೆಚ್ಚುಕಡಮೆಯನ್ನು ತೋರಿಸುವೆನು.

ಮುಂದೆ ಕೆಲವು ತಿಂಗಳುಗಳು ಹೋದ ಬಳಿಕ, ಏನೋ ಒಂದು ಜರೂರಿನ ಕೆಲಸ ಬಂದಾಗ, ಬಾದಶಹನು ಬೀರಬಲ್ಲನನ್ನು ಕರೆಕಳುಹಿಸಿದನು. ಆಗ ಬೀರಬಲ್ಲನು ಬೇಕೆಂದು ತಾನು ಅಸ್ವಸ್ಥನಾಗಿರುವುದರಿಂದ ಬರಲಿಕ್ಕಾಗುವುದಿಲ್ಲೆಂದು ತಿರುಗಿ ಹೇಳಿಕಳುಹಿಸಿದನು. ಬಾದಶಹನಿಗೆ ಅದು ದಿಟವೆಂದು ತೋರದ್ದರಿಂದ ತಾನೇ ಸ್ವತಃ ಬಂದು ನೋಡಲು, ಬೀರಬಲ್ಲನಿಗೆ ಬೇನೆಬೇಸರಿಕೆ ಏನೂ ಇರಲಿಲ್ಲ. ಅವನು ಆರೋಗ್ಯದೃಢಕಾಯನಾಗಿದ್ದನು. ಆದ್ದರಿಂದ ಸಿಟ್ಟು ಬೆಂಕಿಯಾಗಿ,

ಬಾದ.—ಬೀರಬಲ್ಲ; ನೀನು ತೀರ ಸುಳ್ಳು ಹೇಳಿದೆ. ಹಿಂದೆ ಎಂದೂ ಮಾಡದ ಅಪರಾಧವನ್ನು ಈಗ ಮಾಡಿರುತ್ತಿ. ಆದ್ದರಿಂದ ನಿನಗೆ ದೊಡ್ಡ ಶಿಕ್ಷೆಯನ್ನು ಕೊಡುವೆನು. ಹೀಗೇಕೆ ಮಾಡಿದೆ?

ಬೀರ.—ಮಹಾರಾಜ! ನಾನು ಬೇಕೆಂದು ಈ ತಪ್ಪು ಮಾಡಿದೆನು. ದಯವಿಟ್ಟು ಕ್ಷಮಿಸಿರಿ. ತಾವು ನ್ಯಾಯವಿಚಾರಣೆಯ ವ್ಯತ್ಯಾಸವನ್ನು ತೋರಿಸಬೇಕೆಂದು ಹೇಳಲಿಲ್ಲವೇ? ಮಾತು ಕೊಟ್ಟಂತೆ, ಈ ತಪ್ಪಿನ ನಿರ್ಣಯವನ್ನು ನಾನು ಆರಿಸಿದ ಪಂಚರಿಂದ ಮಾಡಿಸಿರಿ. ತಮ್ಮ ಅಧಿಕಾರವನ್ನು ಪಂಚರಿಗೆ ಒಪ್ಪಿಸುತ್ತೇವೆಂದು ಮಾತು ಕೊಟ್ಟಿರುತ್ತೀರಷ್ಟೇ? ತಾವು

ಆಡಿದಂತೆ ಮಾಡುವವರೆಂದು ಇಷ್ಟು ವರ್ಷ ಶ್ರಮಪಟ್ಟು ಸಂಪಾದಿಸಿದ ಹೆಸರನ್ನು ಈಗ ಕಳೆದುಕೊಳ್ಳಲಾರಿರೆಂದು ನಂಬಿದ್ದೇನೆ.

ಬಾದ.—ಹಾ! ಈಗ ನೆನಪಿಗೆ ಬಂದಿತು. ನಾನು ಹೇಳಿದ್ದು ದಿಟ. ಈ ಅಪರಾಧದ ತೀರ್ಪನ್ನು ಪಂಚರಿಂದ ಮಾಡಿಸಬೇಕೇ? ಒಳ್ಳೆಯದು, ಹಾಗೆಯೇ ಆಗಲಿ. ನಿನಗೆ ಯಾವ ಪಂಚರು ಬೇಕು ಹೇಳು.

ಬೀರ.—ಪಂಚರನ್ನು ಆರಿಸಲಿಕ್ಕೆ ನನಗೇ ತಾವು ಅಪ್ಪಣೆ ಕೊಟ್ಟ ಬಗ್ಗೆ ತಮ್ಮ ಉಪಕಾರವನ್ನು ಬಹಳವಾಗಿ ಎಣಿಸುತ್ತೇನೆ. ಆದರೆ ನಾನೇ ಆರಿಸಿದ ಜನರು ಪಕ್ಷಪಾತ ಮಾಡುವರೆಂದು ತಮಗೂ ಉಳಿದವರಿಗೂ ಸಂಶಯ ಬರಬಹುದು. ಆದ್ದರಿಂದ ನಾನು ಹೇಳಿದ ಜಾತಿಯ ಜನರೊಳಗೆ ತಾವೇ ೫ ಮಂದಿ ಪಂಚರನ್ನು ಆರಿಸಿ, ನನ್ನ ಅಪರಾಧವನ್ನು ನಿರ್ಣಯಿಸಬೇಕೆಂದು ಬೇಡುತ್ತೇನೆ. ಖಾವಂದರು ದಯವಿಟ್ಟು ನನ್ನ ಬಿನ್ನಹವನ್ನು ಮನ್ನಿಸಬೇಕು.

ಬಾದ.—ಯಾವ ಜಾತಿಯವರೊಳಗೆ ಚುನಾಯಿಸಬೇಕು ಹೇಳು. ಹಾಗೆಯೇ ಮಾಡುವೆನು.

ಬೀರ.—ಮಹಾರಾಜ! ಇಬ್ಬರು ಸಮಗಾರರು, ಇಬ್ಬರು ಮಾದಿಗರು, ಒಬ್ಬ ಹೊಲೆಯ, ಹೀಗೆ ೫ ಜನರನ್ನು ನೇಮಿಸಿ, ನನ್ನ ತಪ್ಪಿನ ವಿಚಾರಣೆಯನ್ನು ಮಾಡಿಸಬಹುದು.

ಮರುದಿವಸ ಬಾದಶಹನು ಬೀರಬಲ್ಲನು ಹೇಳಿದಂತೆ ೫ ಜನರನ್ನು ಕರೆಯಿಸಿ, ಅವರಿಗೆ ಬೀರಬಲ್ಲನ ಅಪರಾಧವನ್ನು ತಿಳಿಸಿ, ಅವನಿಗೆ ಕೊಡಬೇಕಾದ ತಕ್ಕ ಶಿಕ್ಷೆಯನ್ನು ನಿರ್ಣಯಿಸಬೇಕೆಂದು ಹೇಳಿದನು. ಅವರು ಒಂದು ಕೋಣೆಯೊಳಗೆ ಹೋಗಿ ತಮ್ಮತಮ್ಮೊಳಗೆ ಹಾಕಿಯಾಡಲಾರಂಭಿಸಿದರು.

ಒಬ್ಬ—ಬೀರಬಲ್ಲ ಬಹಳ ಮೆರೀತಾನು. ಈಗ ನಮ್ಮ ಕಯ್ಯಾಗ ಸಿಕ್ಕಾನು. ಅವಗ ನಾಕಿಪ್ಪತ್ತರದಾ ಹತ್ತು ಮೊಹರು ದಂಡ ಹೆಟ್ಟಿ ಬಿಡಿರಿ, ಒದ್ದಿಯಾಡಲಿ.

ಎರಡನೆಯವ—ಛೀ ಏಳೊ ಮಗನೆ! ಎಲ್ಲಿಯಾರ ಬಡವನ್ನ ಕೊಂದ ಬಿಟ್ಟ. ಅವೇನು ನಮಗೆ ಕೆಡಕು ಮಾಡಿಯಾನಪ್ಪ? ಕಯ್ಯಾಗ ಅಧಿಕಾರ

ಬಂದತೆಂದು ಅನ್ಯಾಯ ಮಾಡಬೇಕ? ದೇವರು ಮೆಚ್ಚು ಹಾಗ ಮಾಡೋಣ. ಕಯ್ಯಾಗ ಸಿಕ್ಕಾನೆಂದು ಅವನ್ನ ಕೊಂದಬಿಡಬೇಕ?

ಮೂರನೆಯವ—ನಿನ್ನ ಮಾತು ನನಗೆ ಪಾಡ ಕಾಣತತಿ. ಬಡವ ಸಿಕ್ಕ್ಯಾನಂತ ಅವನ್ನ ಕೊಲ್ಲಬಾರದು. ದೇವರು ನಮಗ ಅನ್ನಾ ಕೊಡಾಕಿಲ್ಲ. ಮೂರಿಪ್ಪತ್ತರದಾ ಎಂಟು ಮೊಹರು ಸಾಕು. ಅಷ್ಟು ಮನಾರ ಆಯ್ತು.

ನಾಲ್ಕನೆಯವ—ಛೀ ಏಳೊ ಏಬರಾಸಿ. ಅಷ್ಟು ದಂಡ ಮಾಡಾಣ? ಬಡವನ ಗೋಣು ಮುರಿದೀತು. ಎರಡಿಪ್ಪತ್ತರದಾಹತ್ತುವೋರಂದರೆ ಮನಾರಾಯ್ತು. ಅದಕ್ಕು ಹೆಚ್ಚು ಬೇಡ್ರೆಪ್ಪಾ. ಮರೊ ಬೇಡ.

ಐದನೆಯವ—ನಿನ್ನ ಮಾತು ಪಾಡು ಕಾಣತತಿ. ಎರಡಿಪ್ಪತ್ತರದ ಹತ್ತು ಸಾಕು. ಇಷ್ಟು ದಂಡ ತೆತ್ತಲಿಕ್ಕೆ ಅವನು ದಮ್ಮನೆ ದಣಿಯುಬಹುದು. ನನಗಂತು ಹೀಗೆ ಕಾಣ್ತತೆಪ್ಪಾ. ಹೆಚ್ಚು ದಂಡಮಾಡಿ ಬಡವನ ಗೋಣು ಮುರುದು ನನ್ನಿಂದಾಗದು.

೧, ೨, ೩, ೪ನೆಯವರು ಹಾಗೇ ಆಗಲಿ. ಎರಡಿಪ್ಪತ್ತರದ ಹತ್ತು ಮಸ್ತಾಯಿತು. ನಡಿರಿ. ದಣೇರಿಗೆ ಹೇಳಿ ಬರೋಣ.

ಆ ಐದು ಜನರು ಬಾದಶಹನಿಗೆ ಸಲಾಮು ಮಾಡಿ, ಅವನ ಮುಂದೆ ಕಯ್ಜೋಡಿಸಿಕೊಂಡು ನಿಂತರು.

ಬಾದ.—ಏನು ತೀರ್ಪು ಮಾಡಿದಿರಿ? ಚೆನ್ನಾಗಿ ವಿಚಾರಮಾಡಿದಿರಾ?

ಪಂಚರು—ಸರಕಾರ; ನಾವು ಬಹಳ ಹೊತ್ತು ಹಾಕಿಯಾಡಿ, ಕೊನೆಗೆ ಎರಡಿಪ್ಪತ್ತರದಾ ಹತ್ತು ಮೊಹರು ದಂಡಮಾಡಬೇಕೆಂದು ಗೊತ್ತು ಮಾಡಿದ್ದೇವೆ. ಒಡೆಯರಿಗೆ ಹೆಚ್ಚು ಶಿಕ್ಷೆಯೆಂದು ಕಂಡುಬಂದರೆ ಕಡಮೆ ಮಾಡಬಹುದು. ಇಷ್ಟು ದಂಡ ಕೊಡಬೇಕಾದರೆ ಬೀರಬಲ್ಲನ ಹೆಣ ಮಲಗಿ ಹೋಗುವುದು. ಬಡವ ಹೇಗೆ ತಾಳಿಕೊಂತಾನೊ ಏನೋ.

ಬಾದ.—(ಕಿಲಕಿಲ ನಕ್ಕು) ಒಳ್ಳೆಯದು. ತೀರ್ಪು ಚೆನ್ನಾಗಿ ಮಾಡಿದಿರಿ. ವೀಳೆಯ ತೆಗೆದುಕೊಳ್ಳಿರಿ. ಹೋಗಿ ಬನ್ನಿರಿ; (ಅವರು ಮುಜುರೆ

ಮಾಡಿ ಹೋದ ಬಳಿಕ) ಬೀರಬಲ್ಲ! ಇವರ ತೀರ್ಪು ಕೇಳಿದೆಯಾ. ೫೦ ಮೊಹರು ಹೊರಲಾರದಷ್ಟು ದಂಡವಂತೆ!

ಬೀರ. — ಮಹಾರಾಜ ! ನ್ಯಾಯಾಧೀಶರ ಅವಸ್ಥೆಯಂತೆ ಶಿಕ್ಷೆಯು ಬದಲಾಗುತ್ತದೆಂಬ ನನ್ನ ಮಾತು ಈಗ ತಮ್ಮ ನಿದರ್ಶನಕ್ಕೆ ಬಂದಿರಬಹುದು. ಸರದಾರಸಾಹುಕಾರರು ಪಂಚರಾಗಿದ್ದರೆ, ಸಾವಿರಗಟ್ಟಲೆ ಮೊಹರು ದಂಡ ಮಾಡುತಿದ್ದರು. ಈ ಸಮಗಾರರು ವರುಷಗಟ್ಟಲೆ ದುಡಿದರೆ ಹೊಟ್ಟೆ ಹೊರೆದುಕೊಂಡು, ನಾಲ್ಕೆಂಟು ಮೊಹರು ಉಳಿಸಬಹುದು. ಆದ್ದರಿಂದ ಅವರಿಗೆ ೫೦ ಮೊಹರು ದೊಡ್ಡ ಮೊಬಲಗೆಂದು ತೋರಿದ್ದು ಸೋಜಿಗವಲ್ಲ.

ಬಾದಶಹನು ನಲಿದು ಬೀರಬಲ್ಲನನ್ನು ಕೊಂಡಾಡಿದನು.

## ೨೦. ಕುದುರೆಯ ವ್ಯಾಪಾರ

ಒಂದು ದಿವಸ ಬಾದಶಹ ಬೀರಬಲ್ಲರು ವಿನೋದದಿಂದ ಮಾತಾಡುತ್ತ ಕುಳಿತಿರುವಾಗ ಬಾದಶಹನು ಆ ಹೊತ್ತು ಬೆಳಿಗ್ಗೆ ತಾನು ಮಾಡಿದ ಕುದುರೆಯ ವ್ಯಾಪಾರದ ಸಂಗತಿಯನ್ನು ಹೇಳಿದನು.

ಬಾದ. — ಈ ಹೊತ್ತು ಬೆಳಿಗ್ಗೆ ನಾನು ೫೦೦ ಮೊಹರು ಕೊಟ್ಟು, ಒಂದು ಹೆಣ್ಣು ಕುದುರೆಯನ್ನು ಕೊಂಡೆನು. ಅದು ಬಹಳ ಸಲಕ್ಷಣವಾಗಿದೆ. ಅದರಂತಹದೇ ಒಂದು ಗಂಡು ಕುದುರೆಯನ್ನು ತರಲಿಕ್ಕೆ ಆ ವ್ಯಾಪಾರಿಗೆ ೧,೫೦೦ ಮೊಹರು ಕೊಡಬೇಕಾಯಿತು. ೧೦೦೦ ಮೊಹರು ಹೆಚ್ಚು ತೆಗೆದುಕೊಂಡನು. ಆದರೂ ಚಿಂತೆಯಿಲ್ಲ. ೬ ತಿಂಗಳಲ್ಲೇ ತಂದು ಕೊಡಬೇಕೆಂದು ಕರಾರು ಆಗಿದೆ.

ಬೀರ. — ಮಹಾರಾಜ! ೧೦೦೦ ಮೊಹರು ಹೋದವೆನ್ನುತ್ತೀರೋ ? ೧೫೦೦ ಮೊಹರು ಹೋದವೆನ್ನುತ್ತೀರೊ ?

ಬಾದ. — ೧೫೦೦ ಹೇಗೆ ಹೋಗುತ್ತವೆ? ೫೦೦ ಕುದುರೆಗೆ ಬೀಳುತ್ತವೆ. ಅವನು ತನ್ನ ಶ್ರಮದ ಬಗ್ಗೆ ೧,೦೦೦ ಮೊಹರುಗಳನ್ನು ಹೆಚ್ಚಿಗೆ ಬೇಡಿದನು. ಅವನು ಕಡಮೆ ಹಣಕ್ಕೆ ಆಗುವುದಿಲ್ಲೆಂದು ಹಟ ಹಿಡಿದುದರಿಂದ ಅವನು ಬೇಡಿದಷ್ಟೇ ಕೊಡಬೇಕಾಯಿತು. ಉಪಾಯವಿಲ್ಲ.

ಬೀರ.—ಮಹಾರಾಜ! ಅವನು ಗಂಡುಕುದುರೆಯನ್ನು ಇನ್ನೂ ಕೊಟ್ಟಿ ಲ್ಲವಲ್ಲವೇ? ಅವನ ಹೆಸರು ಠಾವುಠಿಕಾಣೆಗಳು ತಮಗೆ ಗೊತ್ತುಂಟೇ? ಅವನ ಮಾತು ನಂಬಲಿಕ್ಕೆ ತಮಗೇನು ಆಧಾರಗಳಿರುತ್ತವೆ?

ಬಾದ.—ಆಧಾರಗೀಧಾರ ಏನೂ ಇಲ್ಲ. ಅವನು ಒಂದು ಕಾಗದ ಬರೆದು ಕೊಟ್ಟಿರುತ್ತಾನೆ. ಅದರಲ್ಲಿ ಅವನ ಹೆಸರುಂಟು. ಎಲ್ಲಿ ಹೋಗು ತ್ತಾನೆ?

ಬೀರ.—ಆ ಹೆಸರಾದರೂ ಅವನ ನಿಜವಾದ ಹೆಸರೆಂದು ನಂಬಲಿಕ್ಕೆ ಏನಾದರೂ ಪ್ರಮಾಣ ಉಂಟೋ?

ಬಾದ.—ಹಾ! ಬೀರಬಲ್ಲ! ಅದು ಅವನ ನಿಜವಾದ ಹೆಸರಿರಬಹು ದೆಂದು ನಾನು ನಂಬಿದೆನು. ಅವನು ಸುಳ್ಳು ಹೆಸರು ಕೊಟ್ಟಿರಬಹುದೇ ನು? ಒಳ್ಳೆಯದು, ಎಲ್ಲಿ ಹೋಗುತ್ತಾನೆ? ಅವನು ಪಾತಾಳದಲ್ಲಿದ್ದರೂ ಹಿಡಿಸಿ ತರಿಸುವೆನು. ನನಗೆ ಮೋಸ ಮಾಡಿ ಪಾರಾಗುವನೇ?

ಬೀರ.—ಮಹಾರಾಜ, ಅವನನ್ನು ಗೊತ್ತುಹಚ್ಚುವ ಬಗೆ ಹೇಗೆ? ಅವನ ಹೆಸರುದಸೆ ಗೊತ್ತಿಲ್ಲ. ಠಾವುಠಿಕಾಣೆ ಗೊತ್ತಿಲ್ಲ. ಅವನ ಚಹರೆ ಪಟ್ಟಿಯಿಲ್ಲ. ಅಂದ ಮೇಲೆ ಅವನ ತುಬ್ಬಾಗುವ (ಗೊತ್ತಾಗುವ) ಬಗೆ ಎಲ್ಲಿ? ಕಳವಾದ ಮನೆಗೆ ಎಣ್ಣೆ ದಂಡ ಎಂಬ ಗಾದೆಯಂತೆ, ಅವನು ಒಯ್ದ ಹಣಕ್ಕಿಂತ ಹೆಚ್ಚು ಹಣ ಅವನನ್ನು ಗೊತ್ತುಹಚ್ಚುವುದರಲ್ಲಿ ವೆಚ್ಚ ವಾಗಲಿಕ್ಕಿಲ್ಲವೇ? ಅದಿರಲಿ, ತಾವು ಇಮ್ಮಡಿ ಮುಮ್ಮಡಿ ಹಣ ಖರ್ಚು ಮಾಡಿ, ಅವನನ್ನು ಗೊತ್ತುಹಚ್ಚಿದರೂ ತಾವು ಕೊಟ್ಟ ಹಣ ಅವನಿಂದ ವಸೂಲಾಗುವುದೆಂಬ ಭರವಸೆ ಎಲ್ಲಿ?

ಬಾದ.—ಬೀರಬಲ್ಲ, ನೀನು ಹೇಳುವುದು ನಿಜವೆಂದು ತೋರುತ್ತದೆ. ಆ ವ್ಯಾಪಾರಿಯ ಬಗ್ಗೆ ನಮಗೇನೂ ಗೊತ್ತಿಲ್ಲ. ಕುದುರೆಯ ಆಶೆಗೆ ನಾನು ಅವನಿಗೆ ಹಣ ಕೊಟ್ಟೆನು. ಅವನು ಕ್ರಿಯೆಯಿಂದ ಕುದುರೆ ತಂದರೆ ಒಳಿತಾಯಿತು. ಇಲ್ಲದಿದ್ದರೆ ಕೊಟ್ಟ ಹಣ ಮುಳುಗಿದ ಹಾಗೇ ಸರಿ. ಅವನನ್ನು ಹುಡುಕಿಸುವುದು ಗುಬ್ಬಿಯ ಮೇಲೆ ಪಾಶುಪತಾಸ್ತ್ರ ಬಿಟ್ಟಂತಾಗು

ವುದು. ಅವನನ್ನು ಎಲ್ಲಿಂದು ಹುಡುಕಿಸಬೇಕು? ಅವನನ್ನು ನಂಬಿ ಹಣ ಕೊಟ್ಟುದು ದಡ್ಡತನವಾಯಿತು. ನಿನ್ನೊಡನೆ ಆಲೋಚಿಸಿದ್ದರೆ, ಒಳಿತಾಗುತ್ತಿತ್ತು. ಮಿಂಚಿಹೋದ ಮಾತಿಗೆ ಚಿಂತಿಸಿ ಫಲವೇನು?

ಬೀರ.—ಮಹಾರಾಜ, ತಾವು ಇಷ್ಟು ಚಾಣಾಕ್ಷರಾಗಿದ್ದು, ಇಷ್ಟು ದೊಡ್ಡ ದಡ್ಡತನವನ್ನು ಮಾಡಿದ್ದು ಸೋಜಿಗವಾಗಿ ಕಾಣುತ್ತದೆ. ತಾವು ಹಾರುವ ಹಕ್ಕಿಯ ಪುಚ್ಚ ಎಣಿಸಬಲ್ಲಿರಿ. ಇಂತಹರು ಹೀಗೆ ಹೇಗೆ ಮೋಸ ಹೋದಿರೊ ತಿಳಿಯುವುದಿಲ್ಲ. ನಡೆಯುವವನು ಎಡುವುವನು ಎಂಬ ಗಾದೆಯಂತೆ, ತಾವು ಅವನ ಪಾಶಕ್ಕೆ ಸಿಕ್ಕಿದಿರಿ. ಉಪಾಯವಿಲ್ಲ.

ಬಾದ.—ಬೀರಬಲ್ಲ, ಆ ವ್ಯಾಪಾರಿಯು ಕುದುರೆಯನ್ನು ತಂದು ಕೊಟ್ಟರೆ, ನಿನ್ನ ತರ್ಕವೆಲ್ಲ ಸುಳ್ಳಾಗುವುದಿಲ್ಲವೇ?

ಬೀರ.—ಹೌದು, ಹಾಗೆ ಮಾಡಿದರೆ ಅವನು ದೊಡ್ಡ ಪ್ರಮಾಣಿಕ ಪುರುಷನೆನ್ನಬಹುದು. ಆದರೆ ವ್ಯಾಪಾರಿಗಳಲ್ಲಿ ಇಂತಹರಿರುವುದು ಅಪರೂಪ. ಅವನು ಕುದುರೆಯನ್ನು ತಂದುಕೊಟ್ಟರೆ, ವ್ಯವಹಾರ ದೃಷ್ಟಿಯಿಂದ ತಮ್ಮ ಬದಲು ಅವನೇ ದಡ್ಡ ಶಿರೋಮಣಿಯಾಗುವನು.

ಬಾದಶಹನು ನಕ್ಕು ಬೀರಬಲ್ಲನ ವ್ಯವಹಾರ ಜ್ಞಾನವನ್ನು ಪರಿಪರಿಯಾಗಿ ಕೊಂಡಾಡಿದನು.

## ೨೧. ನಾನಾ ತರದ ಪ್ರಶ್ನಗಳು

ಒಂದು ದಿವಸ ಬಾದಶಹ ಬೀರಬಲ್ಲ ಅನವರಖಾನ ಈ ಮೂವರು ಮಾತುಕಥೆಯಾಡುತ್ತ ಕುಳಿತಿರುವಾಗ —

ಬಾದ.—ಅನವರಖಾನ್! ಮಗು, ಕಾಯಿ, ಹಲ್ಲು ಇವುಗಳೊಳಗೆ ಪ್ರತಿಯೊಂದರಲ್ಲಿ ಹೆಚ್ಚಿನದಾವುದು?

ಅನ.—ಜಹಾಪನಾ! ಮಕ್ಕಳಲ್ಲಿ ಅರಸುಮಗ, ಕಾಯಿಗಳಲ್ಲಿ ತೆಂಗಿನ ಕಾಯಿ, ಹಲ್ಲುಗಳಲ್ಲಿ ಆನೆಯ ಹಲ್ಲು ಶ್ರೇಷ್ಠವಾದುವು. ಉಳಿದವುಗಳು ಇವುಗಳಿಗೆ ಸರಿಯಾಗಲಾರವು.

ಬಾದ.—(ಅಸಮಾಧಾನ ತೋರಿಸಿ) ಬೀರಬಲ್ಲ! ನೀನು ಹೇಳುವು ದೇನು ?

ಬೀರ.—ಮಹಾರಾಜ! ಅನವರಖಾನರು ಚಂದವನ್ನೂ ಬೆಲೆಯನ್ನೂ ಲಕ್ಷ್ಯಕ್ಕೆ ತಂದು ಹೇಳಿದ್ದು ಸರಿಯಾಗಿರುತ್ತದೆ. ಆದರೆ ವಸ್ತುಗಳ ಹೆಚ್ಚಳವು ಅವುಗಳ ಬಳಿಕೆಯನ್ನನುಸರಿಸುತ್ತದೆಂದು ನನ್ನ ಅಲ್ಪಮತಿಗೆ ತೋರುತ್ತದೆ. ಈ ದೃಷ್ಟಿಯಿಂದ, ಮಕ್ಕಳಲ್ಲಿ ಆಕಳ ಕರುವೇ ಹೆಚ್ಚಿನದು. ಏಕೆಂದರೆ ಅದರಿಂದ ಎಷ್ಟೋ ಬಾಲಕರ ಸಂರಕ್ಷಣೆಯಾಗುತ್ತದೆ. ಕಾಯಿಗಳಲ್ಲಿ ಹತ್ತಿಯ ಕಾಯಿ ಹೆಚ್ಚಿನದು; ಏಕೆಂದರೆ ಅದರಿಂದ ಎಲ್ಲ ಜನರ ಉಡಿಗೆ ತೊಡಿಗೆಗಳಾಗುತ್ತವೆ; ಹಲ್ಲುಗಳಲ್ಲಿ ನೇಗಲಿನ ಹಲ್ಲುಗಳೇ ಹೆಚ್ಚಿನವು; ಏಕೆಂದರೆ ಅವುಗಳಿಂದಲೇ ಹೊಲಗಳು ಹಸನಾಗಿ, ಬೆಳೆ ಬಂದು, ನಮ್ಮೆಲ್ಲರ ಹೊಟ್ಟೆ ತುಂಬುತ್ತದೆ.

ಬಾದ.—ಇದು ಸರಿ, ರಾಜರಲ್ಲಿ ಯಾರು ಶ್ರೇಷ್ಠರು? ಗುಣಗಳಲ್ಲಿ ಹೆಚ್ಚಿನ ಗುಣ ಯಾವುದು ?

ಅನ.—ರಾಜರಲ್ಲಿ ಚಕ್ರವರ್ತಿಗಳೇ ಹೆಚ್ಚಿನವರು, ಗುಣಗಳಲ್ಲಿ ವಿದ್ಯೆಯೇ ಹೆಚ್ಚಿನದು.

ಬೀರ.—ಮಹಾರಾಜ! ಇವರು ಹೇಳಿದ್ದು ಸಮಂಜಸವಾಗಿ ತೋರುವುದಿಲ್ಲ. ಏಕೆಂದರೆ, ರಾಜರಲ್ಲಿ ಇಂದ್ರನೇ ಮಿಗಿಲಾದವನು. ಅವನು ಮಳೆ ಕೊಡುವುದರಿಂದ ಎಲ್ಲ ಪ್ರಾಣಿಗಳಿಗೂ ಅನ್ನನೀರು ದೊರೆಯುತ್ತವೆ. ಗುಣಗಳಲ್ಲಿ ಧೈರ್ಯವೇ ಹೆಚ್ಚಿನದು. ವಿದ್ಯೆಯು ನೈಸರ್ಗಿಕ ಗುಣವಲ್ಲ. ಧೈರ್ಯವು ಹುಟ್ಟುಗುಣವಾಗಿರುತ್ತದೆ. ಧೈರ್ಯಶಾಲಿಗೆ ಯಾವುದ ತಾನೆ ದುರ್ಲಭ. ಆದ್ದರಿಂದ «ಧೈರ್ಯಮ್ ಸರ್ವತ್ರ ಸಾಧನಮ್» ಎಂಬ ಗಾದೆಯು ನಮ್ಮ ಪೂರ್ವಜರಿಂದ ಬಂದಿರುತ್ತದೆ.

ಬಾದ.—(ನಲಿದು) ನೀನು ಹೇಳಿದ್ದು ಸರಿ. ಆದರೆ ಮನುಷ್ಯ ಪ್ರಾಣಿಗಳಲ್ಲಿ ಎಲ್ಲಕ್ಕೂ ಹೆಚ್ಚಿನವರಾರು ?

ಅನ.—ಚಕ್ರವರ್ತಿಗಳೇ ಮನುಷ್ಯರೊಳಗೆ ಹೆಚ್ಚಿನವರು ಏಕೆಂದರೆ

ಅವರಿಗೆ ಎಲ್ಲರೂ ತಲೆಬಾಗಿಸುತ್ತಾರೆ. ಅಧಿಕಾರ, ಬುದ್ಧಿ, ಸಾಮರ್ಥ್ಯ, ಸಂಪತ್ತು ಇವುಗಳೆಲ್ಲ ಅವರ ಆಧೀನವಾಗಿರುತ್ತವೆ.

ಬೀರ. — ಮಹಾರಾಜ! ಅನವರಖಾನರು ಯಾವಾಗಲು ಬಾಹ್ಯಾಡಂಬರಕ್ಕೇ ಮನಸೋಲುತ್ತಾರೆ. ಚಕ್ರವರ್ತಿಗಳು ಎಲ್ಲ ಪ್ರಾಣಿಗಳಲ್ಲಿಯೂ ಮೇಲಲ್ಲ. ಸಣ್ಣ ಹುಡುಗರೇ ಎಲ್ಲರಿಗಿಂತ ಮಿಗಿಲು. ಇದು ತಮ್ಮ ಅನುಭವಕ್ಕೆ ಬಂದ ಮಾತಾಗಿರುತ್ತದೆ. ಏಕೆಂದರೆ ಮೊನ್ನೆ ತಾವು ಖಾಸಖಾನರ ಮುದ್ದು ಮಗುವನ್ನು ಎತ್ತಿಕೊಂಡಾಗ, ಅದು ತಮ್ಮ ಗಡ್ಡ ಮೀಸೆ ಹಿಡಿದು ಜಗ್ಗಿ ಆಡಲಿಲ್ಲೇನು? ತಮ್ಮ ಕೂದಲು ಹಿಡಿದು ಎಳೆಯುವ ಯೋಗ್ಯತೆ ಮತ್ತಾರಿಗಾದರೂ ಉಂಟೇ? ಆದ್ದರಿಂದ ಚಿಕ್ಕ ಮಕ್ಕಳೇ ಎಲ್ಲ ಪ್ರಾಣಿಗಳಲ್ಲಿಯೂ ಹೆಚ್ಚಿನವರು.

ಬಾದ. — ಬೀರಬಲ್ಲ! ನೀನು ಹೇಳಿದ್ದು ಸರಿ. ಚಿಕ್ಕ ಬಾಲಕರು ದೇವರಿಗೆ ಸಮಾನ. ನನಗೆ ಬಾಲ್ಯದಲ್ಲಿದ್ದಷ್ಟು ಸುಖ ಈಗಿಲ್ಲ. ಬಾಲಕರು ಬಹಳ ಸುಖಿಗಳು. ಬೀರಬಲ್ಲ! ಇಹದಲ್ಲಿ ಮಾತ್ರ ಸುಖವುಳ್ಳವರು, ಪರದಲ್ಲಿ ಮಾತ್ರ ಸುಖವುಳ್ಳವರು ಇಹಪರಗಳೆರಡರಲ್ಲಿಯೂ ಸುಖವುಳ್ಳವರು ಸುಖವಿಲ್ಲದವರು ಯಾರು?

ಬೀರ. — ಮಹಾರಾಜ! ತಾವು ಕೇಳಿದ ನಾಲ್ಕೂ ತರದ ಜನರು ಈ ಲೋಕದಲ್ಲಿಯೇ ಇರುತ್ತಾರೆ. ವೇಶ್ಯೆಯರು ೧ನೆಯ ತರದವರು. ಅವರು ಇಲ್ಲಿ ತಮ್ಮ ದೇಹವನ್ನು ಮಾರಿ ಹಣಗಳಿಸಿ ಉಂಡುಟ್ಟು ಸುಖಪಡುತ್ತಾರೆ. ಪರದಲ್ಲಿ ತಮ್ಮ ಹಾದರಕ್ಕೆ ತಕ್ಕ ಶಿಕ್ಷೆಯನ್ನನುಭೋಗಿಸುತ್ತಾರೆ. ಸನ್ಯಾಸಿಗಳೇ ಎರಡನೆಯ ತರದವರು. ಅವರು ಇಲ್ಲಿ ಸದಾ ಪುಣ್ಯಕರ್ಮಗಳಲ್ಲಿಯೂ ದೇವತಾಧ್ಯಾನದಲ್ಲಿಯೂ ಮಗ್ನರಾಗಿದ್ದು, ಅನ್ನ ವಸ್ತ್ರಗಳಿಲ್ಲದೆ ತೊಳಲಿ ಬಳಲುತ್ತಾರೆ. ಅವರು ದೇಹವನ್ನು ವಿಪರೀತವಾಗಿ ಕಷ್ಟಪಡಿಸುತ್ತಾರೆ. ದೇಹ ಬಿಟ್ಟಬಳಿಕ ಸ್ವರ್ಗದಲ್ಲಿ ಸುಖಪಡುತ್ತಾರೆ. ಧನಾಢ್ಯರಾದ ಧಾರ್ಮಿಕರೇ ೩ನೆಯ ತರಗತಿಯವರು. ಅವರು ಇಹದಲ್ಲಿ ಉಂಡುಟ್ಟು ಸುಖಬಟ್ಟು, ಅನೇಕ ಪುಣ್ಯಕಾರ್ಯಗಳನ್ನು ಮಾಡಿ, ಪರದಲ್ಲಿ ಸುಖವನ್ನನುಭೋಗಿಸುತ್ತಾರೆ. ಧನಾಢ್ಯರಾದ ಲೋಭಿಗಳೂ ತಿರು

ಕರೂ ನಾಲ್ಕನೆಯ ವರ್ಗದವರು. ಅವರಿಗೆ ಇಹಪರಗಳೆರಡರಲ್ಲಿಯೂ ಸುಖವಿಲ್ಲ. ಜೀನಹನಕರಿಗೆ ದುಡ್ಡೇ ಪರಬ್ರಹ್ಮವಸ್ತುವಾದ್ದರಿಂದ, ಅದನ್ನು ಕೂಡಿಹಾಕಲಿಕ್ಕೆ ಸುಳ್ಳುತಗುಲ-ಮೋಸಗಳನ್ನು ಬಾರಿಬಾರಿಗೆ ಕಯ್ಕೊಳ್ಳುತ್ತಾರೆ. ಅವರಿಗೆ ಮಕ್ಕಳು ಕೂಡ ಬೇಡಾಗುತ್ತಾರೆ. ತಿರುಕರು ಭಿಕ್ಷೆ ಎತ್ತುವ ಉದ್ದೇಶದಿಂದ ಏನಾದರೂ ಸುಳ್ಳುಸೊಟ್ಟರು ಹೇಳುತ್ತಾರೆ. ಜೀನರು ತಾವು ತಿನ್ನಲಾರರು, ಮಂದಿಗೆ ಕೊಡಲಾರರು. ತಿರುಕರಿಗೆ ತಿನ್ನಲಿಕ್ಕೆ ಸಿಕ್ಕುವುದಿಲ್ಲ, ಮಂದಿಗೆ ಕೊಡಲಿಕ್ಕೆ ಇರುವುದಿಲ್ಲ. ಆದ್ದರಿಂದ ಇವರಿಬ್ಬರಿಗೂ ಇಹದಲ್ಲಿ ದುಃಖವುಂಟು. ಪರದಲ್ಲಿ ಸುಖವಿಲ್ಲ. ಇವರಿಬ್ಬರೂ ಇಹಪರಗಳೆರಡಕ್ಕೂ ಭಾರವಾಗಿರುತ್ತಾರೆ.

ಬೀರಬಲ್ಲನ ಮಾತು ಕೇಳಿ ಬಾದಶಹನು ಸಂತುಷ್ಟನಾದನು.

## ೨೨. ಸಣ್ಣ ಮಕ್ಕಳನ್ನು ರಂಬಿಸುವುದು

ಒಂದು ದಿವಸ ಬಾದಶಹ ಬೀರಬಲ್ಲರು ಮಾತಾಡುತ್ತ ಕುಳಿತಿರುವಾಗ ಸಣ್ಣ ಮಕ್ಕಳ ಸಮಾಧಾನ ಮಾಡುವ ವಿಷಯವು ಹೊರಟಿತು.

**ಬೀರ.** — ಮಹಾರಾಜ, ಈ ಹುಡುಗರನ್ನು ಸಮಾಧಾನ ಮಾಡುವುದು ಬಲುಬಿರಿ (ಕಠಿನ). ಹೆಂಗಸರು ಬೇಸತ್ತು ಹೋಗುತ್ತಾರೆ. ಹುಡುಗರ ಹಟ ಕೇಳಲಾಸಲ್ಲ. ಏನು ಕೊಟ್ಟರೂ ಅವು ಒಮ್ಮೊಮ್ಮೆ ಸುಮ್ಮನಾಗುವುದಿಲ್ಲ.

**ಬಾದ.** — ಬೀರಬಲ್ಲ, ಈ ಹೊತ್ತು ನಿನಗೆ ಅತಿಶಯೋಕ್ತಿಯಲ್ಲಿ ಪ್ರೀತಿಯುಂಟಾಗಿದೆ ಎಂದು ತೋರುತ್ತದೆ. ಹುಡುಗರಿಗೆ ಬೇಡಿದ್ದನ್ನು ಕೊಟ್ಟರೆ, ಕೂಡಲೆ ಸುಮ್ಮನಾಗುವುವು. ಏನು ಕೊಟ್ಟರೂ ಸುಮ್ಮನಾಗುವುದಿಲ್ಲೆಂಬದರ ಅರ್ಥವೇನು ?

**ಬೀರ.** — ಮಹಾರಾಜ, ಒಮ್ಮೊಮ್ಮೆ ಅವು ಬೇಡಿದ ವಸ್ತುಗಳನ್ನು ಕೊಟ್ಟರೆ, ಅವುಗಳಿಗೆ ಅಪಾಯ ತಟ್ಟಬಹುದು. ಒಮ್ಮೊಮ್ಮೆ ಕೊಡಲಿಕ್ಕೆ ಬಾರದಂತಹ ವಸ್ತುಗಳನ್ನು ಅವು ಬೇಡುತ್ತವೆ. ತಮಗೆ ಮಕ್ಕಳನ್ನಾಡಿಸಿ ಗೊತ್ತಿಲ್ಲ. ಆದ್ದರಿಂದ ಆ ವಿಷಯವನ್ನು ತಮಗೆ ತಿಳಿಸುವುದು ಬಿರಿಯಾಗಿರುತ್ತದೆ. ತಮ್ಮ ಡ್ಯಾನಿಯಲ್ಲನು ಚಿಕ್ಕ ಮಗುವಾಗಿದ್ದಾನೆ. ಹಟ ಬಂದಾಗ

ಅವನನ್ನು ಸಮಾಧಾನ ಮಾಡಿರಿ. ಅಂದರೆ ತಮಗೆ ಮಕ್ಕಳ ಹಟದ ಅನು ಭವವು ಬರುವುದು.

ಕೂಡಲೆ ಬಾದಶಹನು ಡ್ಯಾನಿಯಲ್ಲನನ್ನು ಕರಿಸಿದನು. ಒಬ್ಬ ದಾಸಿಯು ಅವನನ್ನು ಬಾದಶಹನ ಹತ್ತರ ಕೂಡ್ರಿಸಿ, ಅವನ ಮುಂದೆ ಆಟದ ಸಾಮಾನುಗಳನ್ನು ಇರಿಸಿದಳು. ಕೆಲವು ಹೊತ್ತು ಆಡಿದ ಬಳಿಕ ಅವನಿಗೆ ಹಟ ಬಂತು. ಒಡನೆಯೇ ಬಾದಶಹನು ಅವನನ್ನು ಎತ್ತಿಕೊಂಡು ಮೆಯ್ಮೇಲೆ ಕಯ್ಯಾಡಿಸಿ ಮುದ್ದುಕೊಟ್ಟು, 'ಏಕೆ ಅಳುತ್ತಿ' ಎಂದು ಕೇಳಿ ದನು. ಅದಕ್ಕೆ ಡ್ಯಾನಿಯಲ್ಲನು ಮತ್ತಷ್ಟು ಗಟ್ಟಿಯಾಗಿ ಅಳತೊಡಗಿದನು. ಬಾದಶಹನು ಪರಿಪರಿಯಾಗಿ ರಂಬಿಸಿ ಮತ್ತೆ ಕೇಳಲು—

ಡ್ಯಾನಿಯಲ್—ನನಗೆ ಕಬ್ಬು ಬೇಕು, ಕಬ್ಬು ತರಿಸಿಕೊಡು.

ಬಾದ.—(ಕಬ್ಬಿನ ಹೊರೆಯನ್ನು ತರಿಸಿ ಅವನ ಮುಂದೆ ಹಾಕಿ) ತೆಗೆದುಕೊ, ಎಷ್ಟು ಬೇಕು ಅಷ್ಟು ಕಬ್ಬು ಇದೆ. ಅದರೊಳಗೆ ಬೇಕಾದ್ದನ್ನು ಆರಿಸಿಕೊ.

ಡ್ಯಾನಿ.—(ಅಳುತ್ತ) ನೀನೇ ತೆಗೆದುಕೊಡು, ಚೆಲೊ ಕಬ್ಬು ಬೇಕು.

ಬಾದ.—(ಒಂದು ಚೆಲೊ ಗಳವನ್ನು ಆರಿಸಿ) ಇದನ್ನು ತೆಗೆದುಕೊ.

ಡ್ಯಾನಿ.—ಇದು ಚೆಲೊ ಇಲ್ಲ. ಇದು ನನಗೆ ಬೇಡ, ಮತ್ತೊಂದು ಚೆಲೊದು ಕೊಡು.

ಬಾದಶಹನು ಮತ್ತೊಂದು ಗಳವನ್ನು ಆರಿಸಿಕೊಡಲು, ಅದನ್ನು ಡ್ಯಾನಿಯಲ್ಲನು ಮೆಚ್ಚಲಿಲ್ಲ. ಮೂರನೆಯದೂ ಅವನ ಮನಸ್ಸಿಗೆ ಬರಲಿಲ್ಲ. ಏನೋ ಬಾದಶಹನ ಪುಣ್ಯದಿಂದ ಅವನು ಆರಿಸಿದ ನಾಲ್ಕನೆಯ ಗಳವು ಡ್ಯಾನಿ ಯಲ್ಲನ ಪಸಂದಿಗೆ ಬಂದಿತು. ಆದರೂ ಅವನು ಮತ್ತೆ ಅಳತೊಡಗಿದನು.

ಬಾದ.—ಬಚ್ಚಾ, ಮತ್ತೇಕೆ ಅಳುತ್ತೀ? ಈ ಕಬ್ಬನ್ನು ತೆಗೆದುಕೊ. ಇದು ಎಷ್ಟು ಚೆಲೊ ಅದೆ ನೋಡು. ಸುಮ್ಮನಾಗು. ಇದನ್ನು ಸುಲಿದು ಕೊಡಲೇನು?

ಡ್ಯಾನಿ.—ನನಗೆ ಸುಲಿದು ಹೋಳು ಮಾಡಿಕೊಡು, ಸಣ್ಣ ಹೋಳು ಬೇಕು. ಚೆಲೊ ಹೋಳು ಬೇಕು.

ಬಾದಶಹನು ಒಂದು ಗಣಿಕೆಯನ್ನು ಸುಲಿದು ಚಾಕುವಿನಿಂದ ಹೋಳು ಮಾಡಲಾರಂಭಿಸಿದನು.

ಡ್ಯಾನಿ.—(ಅಳುತ್ತ) ನನಗೆ ಚಾಕು ಕೊಡು. ನಾನೇ ಹೋಳು ಮಾಡುತ್ತೇನೆ.

ಬಾದ.—ಚಾಕು ಬೇಡಪ್ಪಾ ಎಲ್ಲಿಯಾದರೂ ಬಟ್ಟು ಕೊಯ್ಕೊಂಡೀ. ತಗೊ ಈ ಹೋಳು. ತಿನ್ನು ಎಷ್ಟು ಸವಿಯಿದೆ ನೋಡು. ಸೀ ಸಕ್ಕರೆಯಾಗಿದೆ. ನೋಡು, ಬಾಯಾಗ ಹಾಕಿಕೊ (ಎಂದು ಹೋಳು ಕೊಡುತ್ತಾನೆ).

ಡ್ಯಾನಿ.—(ಹೋಳುಗಳನ್ನು ಬಿಸಾಟಿ ಒಗೆದು) ಬೇಡ, ನನಗೆ ಹೋಳು ಬೇಡ. ನನಗೆ ಚಾಕು ಕೊಡು (ಎಂದು ರಂಬಾಟ ಮಾಡಿ ದೊಡ್ಡ ದನಿತೆಗೆದು ಅಳುತ್ತಾನೆ).

ಬಾದ.—(ನಿರುಪಾಯನಾಗಿ ಅಲಗನ್ನು ಮಡಿಚಿ) ಇಕಾ ತಗೊ. ಚಾಕು ತಗೊ.

ಡ್ಯಾನಿ.—(ಅದನ್ನು ಬಿಸಾಟಿ ಒಗೆದು) ಅದು ಬೇಡ; ಉದ್ದಕ್ಕೆ ಮಾಡಿಕೊಡು. ಲಕಲಕ ಎಂಬುದನ್ನು ಹೊರಗೆ ತೆಗೆದುಕೊಡು. ಹೀಗಿದ್ದುದು ಬೇಡ (ಎಂದು ಅಳುತ್ತಾನೆ).

ಬಾದಶಹನು ಚಾಕುವಿನ ಅಲಗನ್ನು ಹೊರಗೆ ತೆಗೆದು ಹಿಡಿಯನ್ನು ಅವನ ಕಯ್ಯಲ್ಲಿ ಕೊಟ್ಟು ಅವನ ಕೈಹಿಡಿದು ಒಂದೆರಡು ಹೋಳು ಮಾಡಿಸಿದನು.

ಡ್ಯಾನಿ.—ನೀ ಕಯ್ಬಿಡು. ನಾನೇ ಕೊಯ್ಯುತ್ತೇನೆ.

ಬಾದ.—ಬಾಳಾ, ಚಾಕು ಬಹಳ ಹರತವಾಗಿದೆ. ಎಲ್ಲಿಯಾದರೂ ಕಯ್ಕೊಯ್ಕೊಳ್ಳುವಿ. ಬವು ಆದೀತು. ನೆತ್ತರ ಸೋರೀತು. ಇಕೊ

ನೋಡು. (ಚಾಕುವಿನ ತುದಿಯಿಂದ ತುಸು ಚುಚ್ಚಿ) ಎಷ್ಟು ಹರತವಾಗಿದೆ. ಈ ಹೋಳು ತಿನ್ನು. ಆಹಾಹಾ ಎಷ್ಟು ಸವಿಯಾಗಿದೆ!!!

ಡ್ಯಾನಿಯಲ್ಲನು ಕೆಲವು ಹೋಳುಗಳನ್ನು ತಿಂದು ಅವುಗಳನ್ನು ಒದ್ದು ಮತ್ತೆ ಅಳಲಾರಂಭಿಸುತ್ತಾನೆ.

ಬಾದ.—ಮತ್ತೇಕೆ? ಏನಾಯಿತು? ಏನು ಬೇಕು? ಅಳಬೇಡ.

ಡ್ಯಾನಿ.—(ಕಬ್ಬಿನ ಮುರಿದ ಗಣಿಕೆಗಳನ್ನು ತೋರಿಸಿ) ಇವನ್ನು ಒಂದ ಕ್ಕೊಂದು ಹಚ್ಚಿ ಗಳ ಮಾಡಿಕೊಡು.

ಬಾದಶಹನು ಅವುಗಳನ್ನು ಒಂದಕ್ಕೊಂದು ಹಚ್ಚಿ ಸಾಲಾಗಿ ಇಡುತ್ತಾನೆ. ಡ್ಯಾನಿಯಲ್ಲನು ಒಂದು ಗಣಿಕೆಯನ್ನು ಹಿಡಿಯಲು ಅದೊಂದೇ ಕಯ್ಯಲ್ಲಿ ಬಂದಿತು. ಆಗ ಕಾಲಪ್ಪಳಿಸಿ, ದೊಡ್ಡ ದನಿಯಿಂದ ಅಳುತ್ತಾನೆ.

ಬಾದ.—ಮತ್ತೇಕೆ ಅಳುತ್ತಿ? ಸುಮ್ಮನಾಗು. ಕಬ್ಬಿನ ಹೋಳು ತಿನ್ನು. ಅಳಬಾರದಪ್ಪ!!

ಡ್ಯಾನಿ.—ಈ ಗಣಿಕೆಗಳನ್ನು ಮೊದಲಿನಂತೆ ಒಂದಕ್ಕೊಂದು ಕೂಡಿಸಿ ಗಳ ಮಾಡಿಕೊಡು.

ಬಾದ.—ನೀ ಏನು ಹುಚ್ಚನೇ? ಅದನ್ನು ಗಳ ಮಾಡಲಿಕ್ಕೆ ಬರುವುದಿಲ್ಲ. ಬೇಕಾದರೆ ಬೇರೆ ಎರಡು ಗಳ ತೆಗೆದುಕೊ (ಎಂದು ಎರಡು ಗಳ ಕೊಡಲಿಕ್ಕೆ ಹೋಗುತ್ತಾನೆ).

ಡ್ಯಾನಿ.—ನಾನೊಲ್ಲೆ, ನನಗೆ ಬೇಡ. ಇವೇ ಗಣಿಕೆಗಳನ್ನು ಕೂಡಿಸಿ ಮೊದಲಿನಂತೆ ಗಳಮಾಡಿಕೊಡು (ಎಂದು ದೊಡ್ಡ ದನಿ ತೆಗೆದು ಅಳುತ್ತ ನೆಲದ ಮೇಲೆ ಹೊರಳಾಡುತ್ತಾನೆ).

ಬಾದಶಹನು ಬೇಸತ್ತು ಬೇಜಾರಾಗಿ ದಾಸಿಯನ್ನು ಕರೆದು, ಅವನನ್ನು ಎತ್ತಿಕೊಂಡು ಹೋಗಲಿಕ್ಕೆ ಹೇಳಿದನು. ಅದರಂತೆ ದಾಸಿಯು ಅವನನ್ನು ಹೊರಗೆ ಒಯ್ದಳು.

ಬೀರ.—ಮಹಾರಾಜ! ನೋಡಿದಿರಾ? ಈ ಹುಡುಗರನ್ನು ಸಮಾಧಾನ ಮಾಡುವುದು ಎಷ್ಟು ಕಷ್ಟತಮವಾದ ಕೆಲಸವಾಗಿರುತ್ತದೆ. ಅವು

ಇಲ್ಲದ್ದನ್ನೇ ಬೇಡುತ್ತವೆ ಮತ್ತು ಅಲ್ಲದ್ದನ್ನೇ ಹೇಳುತ್ತವೆ. ಅವುಗಳನ್ನು ರಂಬಿಸಲಿಕ್ಕೆ ಬಹಳ ತಾಳ್ಮೆ ಬೇಕು. ಹೆಂಗಸರು ಬಲು ಗಟ್ಟಿಗರು. ಅವರ ತಾಳ್ಮೆಗೆ ಅಳತೆಯೇ ಇಲ್ಲ. ಅವರಷ್ಟು ಸಹನಶೀಲತೆಯು ಗಂಡಸಿಗೆ ಎಂದೂ ಬರಲಾರದು. ಅಥವಾ ಮಕ್ಕಳ ಜೋಪಾನವೆಂಬ ಶಿಕ್ಷಣದಿಂದ ದೇವರು ಹೆಂಗಸರಿಗೆ ತಾಳ್ಮೆಯನ್ನು ಕಲಿಸುತ್ತಾನೆ.

**ಬಾದ.**— ಬೀರಬಲ್ಲ! ನೀನು ಹೇಳಿದ ಮಾತು ನಿಜವೆಂದು ನಾನು ಈಗ ಅನುಭವದಿಂದ ಮನಗಂಡೆನು. ಈ ಹುಡುಗರ ಸಂಗಡ ಗುದ್ದಿಯಾಡ ಲಾಸಲ್ಲ. ಈಗ ಒಂದು ಗಳಿಗೆ ಹೊತ್ತಿನೊಳಗೆಯೇ ನನಗೆ ಬೇಜಾರು ಬಂದು ಹೋಯಿತು. ಹುಡುಗರನ್ನು ಸಮಾಧಾನ ಮಾಡುತ್ತ ಕೂಡುವುದ ಕ್ಕಿಂತ ಅವರನ್ನು ದಂಡಿಸಿ ಸುಮ್ಮಗೆ ಮಾಡಿಸುವುದು ಲೇಸಲ್ಲವೇ?

**ಬೀರ.**— ಮಹಾರಾಜ! ಕ್ಷಮಿಸಬೇಕು. ದಂಡನೆಯು ಸಿಟ್ಟಿನ ಪರಿ ಣಾಮವು. ಆದ್ದರಿಂದ ದಂಡನೆಯಿಂದ ಅದನ್ನು ಮಾಡಿದವನಿಗೂ ಮಾಡಿ ಸಿಕೊಂಡವನಿಗೂ ಕೇಡುಂಟು. ಸಿಟ್ಟಿನಿಂದ ಬುದ್ಧಿಭ್ರಂಶವಾಗುತ್ತದೆ. ಬುದ್ಧಿ ಗೇಡಿತನದ ಕೆಲಸವು ಎಂದೂ ಮೇಲಾಗಲಾರದು. ಆದಕಾರಣ ಮಕ್ಕಳ ಶಿಕ್ಷಣದಲ್ಲಿಯೂ ರಾಜನೀತಿಯಲ್ಲಿಯೂ ದಂಡನೆಯು ಕಟ್ಟಕಡೆಯ ಉಪಾ ಯವು. ನಮ್ಮ ಉದ್ದೇಶಗಳು ಒಳ್ಳೆಯ ತಿಳಿವಳಿಕೆಯನ್ನು ಹುಟ್ಟಿಸುವುದ ರಿಂದ ಸಫಲವಾದಷ್ಟು ದಂಡನೆಯಿಂದ ಎಂದೂ ಸಫಲವಾಗಲಾರವು.

**ಬಾದ.**— ಬೀರಬಲ್ಲ! ನೀನು ಹೇಳುವ ಮಾತು ಸರಿಯಾದ್ದು. ನಾನು ಅದರಂತೆ ನಡೆಯಲಿಕ್ಕೆ ಯತ್ನಿಸುವೆನು. ತಪ್ಪಿದರೆ ನೀನು ಕೂಡಲೆ ಎಚ್ಚರ ಕೊಡು. ಹೆದರಬೇಡ, ಮರೆಯಬೇಡ.

## ೨೩. ತೋಟದ ಗಿಡಗಳೂ ಅಡವಿಯ ಗಿಡಗಳೂ

ಒಂದು ದಿವಸ ಬಾದಶಹ ಬೀರಬಲ್ಲರು ಕುದುರೆಯನ್ನೇರಿ ಊರ ಹೊರಗೆ ಹೋಗುತ್ತಿರುವಾಗ ಒಬ್ಬ ತಿರುಕಿ, “ನನ್ನ ಹಡೆದಪ್ಪಾ, ಈಗ ಹುಟ್ಟಿದ ಕರಳನ್ನು ಉಡಿಯೊಳಗೆ ಹಾಕಿಕೊಂಡು ಬಂದೇನು. ಏನಾದರೂ

ಕೊಡಿರಿ. ಕೂಸಿಗೆ ಎಣ್ಣೆಬೆಣ್ಣೆ ತರುವೆನು," ಎಂದು ದಾರಿಹೋಕರನ್ನು ಬೇಡುತ್ತ ಹೋಗುವುದನ್ನು ಕಂಡರು.

ಬಾದ.—ಬೀರಬಲ್ಲ! ಈ ತಿರುಕಿಯನ್ನು ನೋಡು. ಈಗ ಹಡೆದಿದ್ದಾಳೆ. ಈಕೆಗೆ ಮನೆಯೆಲ್ಲಿ? ಹೊರಸು* ಎಲ್ಲಿ? ಸೂಲಗಿತ್ತಿ ಎಲ್ಲಿ? ಕಟ್ಟುವುದೆಲ್ಲಿ, ಕಾಸುವುದೆಲ್ಲಿ? ಅನ್ನವಸ್ತ್ರವೆಲ್ಲಿ? ಏನೂ ಇಲ್ಲದೆ, ಈ ಕೂಸುಗಳು ದೊಡ್ಡವಾಗುತ್ತವಲ್ಲ. ಬಾಣಂತಿತನವಿಲ್ಲದೆ ಈ ತಿರುಕಿಯರು ಅರೋಗರಾಗಿ ದೃಢಕಾಯರಾಗುತ್ತಾರಲ್ಲ!! ನಮ್ಮ ಹೆಂಗಸರನ್ನು ನೋಡು. ಅವರ ಜಂಬವೆಷ್ಟು! ಬಾಣಂತಿತನದ ವೆಚ್ಚವೆಷ್ಟು! ಗದ್ದಲವೆಷ್ಟು!! ದುಡಿತವೆಷ್ಟು!! ಸಡಗರವೆಷ್ಟು!!

ಬೀರ.—ಮಹಾರಾಜ! ಇವೆಲ್ಲ ಅಭ್ಯಾಸದಿಂದ ಪ್ರಕೃತಿಗಳ ಮೇಲೆ ಆಗುವ ಪರಿಣಾಮಗಳು. ಈ ಹೆಚ್ಚುಕಡಮೆಯು ಹೆಂಗಸರಲ್ಲಿ ಮಾತ್ರವಲ್ಲ, ಗಂಡಸರಲ್ಲಿಯೂ ಇರುತ್ತದೆ. ತಿರುಕಿಯರಿದ್ದಂತೆ ತಿರುಕರೂ ಇರುತ್ತಾರೆ. ಆ ತಿರುಕರಂತೆ ಗಾಳಿಮಳೆಚಳಿಬಿಸಲನ್ನು ತಡೆಯುವುದು ನಮ್ಮಿಂದಾಗುವುದೇ? ಅವರಂತೆ ಹಸಿವೆ ಕಟ್ಟಿ ಕದನ್ನವನ್ನು ತಿಂದಿರುವುದು ನಮ್ಮಿಂದ ಆಗುವುದೇ? ಇದರಲ್ಲಿ ಹೆಂಗಸರದೂ ಜಂಬವಿಲ್ಲ, ಗಂಡಸರದೂ ಜಂಬವಿಲ್ಲ. ತಂತಮ್ಮ ಅವಸ್ಥೆಯಂತೆ ಜನರಿಗೆ ಇರಬೇಕಾಗುತ್ತದೆ. ಅದರಲ್ಲಿ ಬದಲು ಮಾಡುವುದು ಕ್ಷೇಮಕರವಲ್ಲ.

ಬಾದ.—ಬೀರಬಲ್ಲ! ಹೀಗೇಕೆ ಎನ್ನುತ್ತೀ? ದೇವರು ಶ್ರೀಮಂತರಿಗೂ ಬಡವರಿಗೂ ಒಂದೇ ತರದ ದೇಹವನ್ನೂ ಅವಯವಗಳನ್ನೂ ಇಂದ್ರಿಯಗಳನ್ನೂ ಕೊಟ್ಟಿರುತ್ತಾನೆ. ಅವುಗಳ ರಚನಾಕ್ರಿಯೆಗಳೂ ಒಂದೇ. ನಮ್ಮ ಹೆಂಗಸರು ಬಾಣಂತಿತನದಲ್ಲಿ ಇಷ್ಟು ಕಾಲ ಕಳೆಯುವುದೇಕೆ? ಇಷ್ಟು ಅಳತೆಗೆಟ್ಟು ಖರ್ಚು ಮಾಡುವುದೇಕೆ? ಇಷ್ಟು ಮಾಡಿದರೂ ಈ ಬಡವರಷ್ಟು ನಮ್ಮ ಹೆಂಗಸರೇನು ಗಟ್ಟಿಯಾಗಿರುವುದಿಲ್ಲ.

ಬೀರ.—ಮಹಾರಾಜ! ರಚನಾಕ್ರಿಯೆಗಳು ಒಂದೇ ಆದರೂ ಪಿಂಡದ ಘಟನಾವಯವಗಳಲ್ಲಿ ಹೆಚ್ಚು ಕಡಮೆಯುಂಟು. ಹೊಲಗಳಲ್ಲಿ ಬಿತ್ತುವ

---

* ಬಾಣಂತಿಯರು ಮಲಗುವ ಮಂಚ.

ಬೀಜಗಳಲ್ಲಿ ಗಟ್ಟಿ, ಪೊಳ್ಳು, ಸಶಕ್ತ, ಅಶಕ್ತ ಎಂಬ ಭೇದವಿರುವಂತೆ ಮನು ಷ್ಯರ ವೀರ್ಯದಲ್ಲಿ ಭೇದವುಂಟು. ಬಡವರಿಗೆ ದುಡಿತವೇ ದೊಡ್ಡ ಮದ್ದು. ಅದರಿಂದ ಅವರು ಬಹುಶಃ ನಿರೋಗಿಗಳೂ ಆರೋಗ್ಯಶಾಲಿಗಳೂ ದೃಢಕಾ ಯರೂ ಆಗುತ್ತಾರೆ. ದೈವುಳ್ಳವರಿಗೆ ದುಡಿತವೇ ಇಲ್ಲ. ಆದ್ದರಿಂದ ಅವರು ಸೋಮಾರಿಗಳೂ ವ್ಯಸನಿಗಳೂ ಅಶಕ್ತರೂ ಆಗಿರುತ್ತಾರೆ. ಅವರಿಗೆ ತಿನ್ನ ಲಿಕ್ಕೆ ಬೇಕಾದಷ್ಟು ಇರುವುದರಿಂದ ಹೆಚ್ಚು ತಿಂದು ಅಥವಾ ಕುಡಿದು, ನಾನಾ ತರದ ಬೇನೆಗಳನ್ನು ತಂದುಕೊಳ್ಳುತ್ತಾರೆ. ಶ್ರೀಮಂತರ ಮುಕ್ಕಾಲುವಾಸಿ ರೋಗಗಳು ಅವರ ತಿನ್ನಾಸಕತನ ಕುಡಕತನ ಸೋಮಾರಿತನಗಳ ಫಲ ಗಳೇ ಸರಿ. ಮೆಯ್ಗಳ್ಳರಾದ್ದರಿಂದ ಮೆಯ್ಮುರಿದು ದುಡಿಯುವುದು ಅವರಿಗೆ ಸೇರುವುದಿಲ್ಲ. ಯಥೇಷ್ಟವಾಗಿ ದುಡ್ಡು ಇರುವುದರಿಂದ ಅದನ್ನು ಹಾಳು ಮಾಡುವ ಹಾದಿಗಳನ್ನು ಹುಡುಕುತ್ತಿರುತ್ತಾರೆ. ಆದ್ದರಿಂದ ಅವರು ಬಹುಶಃ ವ್ಯಾಯಾಮವಿಮುಖರೂ ವಿಷಯಾಸಕ್ತರೂ ವ್ಯಸನಾಧೀನರೂ ವಿಚಾರಶೂನ್ಯರೂ ವ್ಯಾಧಿಗ್ರಸ್ತರೂ ಆಗಿರುತ್ತಾರೆ. ಇದಲ್ಲದೆ ಅವರಿಗೆ ಮಾನಸಿಕ ರೋಗಗಳು ಬಹಳವಾಗಿರುವವು. ಹರಗದ ಹೊಲದಲ್ಲಿ ಕರಕಿ (ನಟ್ಟು) ಬೆಳೆಯುವಂತೆ, ಕೆಲಸವಿಲ್ಲದವನ ಬಗೆಯಲ್ಲಿ ಕುವಿಚಾರಗಳೂ ಕೆಟ್ಟ ಬಯಕೆಗಳೂ ಕುತ್ಸಿತ ಎಣಿಕೆಗಳೂ ಮೊಳೆಯುತ್ತವೆ. ಬಡವರಿಗೆ ಮೆಯ್ಮುರ ದುಡಿತವಿರುವುದರಿಂದ ಅವರ ಬಗೆಯಲ್ಲಿ ಕುವಿಚಾರಗಳಿಗೆ ಅನುವೇ ದೊರೆಯುವುದಿಲ್ಲ. ನೆಲವನ್ನು ಹಾಸಿಗೆಯಾಗಿಯೂ ಕಲ್ಲನ್ನು ತಲೆಗಿಂಬಾಗಿಯೂ ಮಾಡಿಕೊಂಡು, ಗುರಗುಡಿಸುತ್ತ ಆರಾಮಾಗಿ ಮಲಗಿ ರುವ ಬಡವರನ್ನು ತಾವು ಎಷ್ಟೋ ಸಾರಿ ನೋಡಿರುತ್ತೀರಿ. ಬಡವರಿಗೆ ದುಡಿತವು ಮುಗಿದ ಕೂಡಲೆ ಹಸಿವು, ಹಸಿವು ಇಂಗಿದ ಕೂಡಲೆ ನೀರಡಿಕೆ, ಅದು ಸಮಾಧಾನ ಹೊಂದಿದೊಡನೆಯೇ ನಿದ್ದೆ; ಅದು ಮುಗಿದ ಕೂಡಲೆ ಕೆಲಸದ ವಿಚಾರಗಳು ಒಂದರಹಿಂದೊಂದು ಬಲವಾಗಿ ನುಗ್ಗಿ ಬರುವುದ ರಿಂದ, ಕುವಿಚಾರ ಮಾಡಲಿಕ್ಕೆ ಅವರಿಗೆ ಹೊತ್ತೇ ಸಿಕ್ಕುವುದಿಲ್ಲ. ಹಬ್ಬ ಹುಣ್ಣಿವೆಗಳಲ್ಲಿ ತುಸು ವಿರಾಮ ದೊರೆದರೆ ಅವರ ಹಿಗ್ಗು ಹಿಡಿಯಲಾರದಷ್ಟಾ ಗುತ್ತದೆ..

ಹಣವಂತರಿಗಾದರೋ ದುಡಿತವೇ ಕಡಮೆ. ಬಿಡುವೇ ಬಹಳ. ಅವರ ಕೆಲಸ ಮಾಡಲಿಕ್ಕೆ ಆಳು ಮಕ್ಕಳಿರುತ್ತಾರೆ. ಅವರ ಬಯಕೆಗಳನ್ನು ಸಲ್ಲಿಸಲಿಕ್ಕೆ ಇಚ್ಚೆಗಾರರು ಕಯ್ಜೋಡಿಸಿಕೊಂಡು ನಿಂತಿರುತ್ತಾರೆ. ಅವರ ಹಸಿವೆನೀರಡಿಕೆಗಳನ್ನು ಪೂರೈಸಲಿಕ್ಕೆ ನಾನಾ ತರದ ಪಾಕಪೇಯಗಳು ಸಿದ್ಧವಾಗಿರುತ್ತವೆ. ಅವರ ಪಯಣಕ್ಕೆ ನಾನಾತರದ ಬಂಡಿಗಳು ಆನೆ ಯೊಂಟೆ ಕುದುರೆಯೆತ್ತುಗಳೂ ಅಣಿಯಾಗಿರುತ್ತವೆ. ಅವರ ಒಯ್ಯಾರ ಬೆಡಗುಚಂದಗಳಿಗೆ ಬಗೆಬಗೆಯ ಭೋಗ್ಯವಸ್ತುಗಳು ಸುಲಭವಾಗಿ ದೊರೆ ಯುತ್ತವೆ. ಅವರ ದುಗಾಡಿಗೆ (ಜಾಡ್ಯಕ್ಕೆ) ಬೆಲೆ ಬಾಳುವ ಮದ್ದುಗಳು ಸಿದ್ಧವಾಗಿರುತ್ತವೆ. ಅವರ ವಿಷಯಲಂಪಟತನಕ್ಕೆ ವಾರಾಂಗನೆಯರು ಅವಿತುಕೊಂಡು ಕುಳಿತಿರುತ್ತಾರೆ. ಸಾರಾಂಶವೇನೆಂದರೆ, ಅವರು ಕಯ್ಬೀ ಸಿದರೆ ಕೈಲಾಸವು ಅವರ ಮುಂದೆ ಬಂದು ನಿಲ್ಲುತ್ತದೆ. ಅವರಿಗೆ ಆದಿಭೌತಿ ಕ ವಸ್ತುಗಳಲ್ಲಿ ಏತಕ್ಕೂ ಕಡಮೆಯಿಲ್ಲ. ಅವರಲ್ಲಿ ಆತ್ಮಸಂಯಮನ, ಇಂದ್ರಿ ಯನಿಗ್ರಹ, ವೈರಾಗ್ಯ ವಿವೇಕ ಇವುಗಳಿದ್ದರೆ ಅವರಷ್ಟು ಸುಖಿಗಳಾರೂ ಇಲ್ಲ; ಇವು ಇಲ್ಲದಿದ್ದರೆ ಬಡವರು ಇವರಿಗಿಂತ ಸುಖಿಗಳೇ ಸರಿ.

ಬಾದ.—ಬೀರಬಲ್ಲ! ನಿನ್ನ ಮಾತಿನಿಂದ ಬಡವರಿಗೆ ವ್ಯಾಧಿಯೇ ಇಲ್ಲೆಂದು ತೋರುತ್ತದೆ. ಎಷ್ಟೋ ಜನರು ಬಡವರು ರೋಗಗ್ರಸ್ತರಿರು ತ್ತಾರೆ. ಎಷ್ಟೋ ಜನ ಬಡವರು ದಿನಾಲು ಸಾಯುತ್ತಾರಲ್ಲ?

ಬೀರ.—ಮಹಾರಾಜ! ಕ್ಷಮಿಸಬೇಕು. ಬಡವರಿಗೆ ಬೇನೆ ಬರುವು ದಿಲ್ಲೆಂದು ನಾನು ಎಂದೂ ಹೇಳಲಿಲ್ಲ. ದೈವುಳ್ಳವರಿಗಿಂತ ಅವರು ಹೆಚ್ಚು ಚಳಿಮಳೆಗಾಳಿಬಿಸಲನ್ನು ತಡೆಯಬಲ್ಲರು. ಶ್ರೀಮಂತರಿಗೆ ತೀರ್ಥ ತೆಗೆದು ಕೊಂಡರೆ ತಂಡಿಯೂ ಮಂಗಳಾರತಿ ತೆಗೆದುಕೊಂಡರೆ ಕಾವೂ ಆಗುವವು. ಹಣವಂತರು ತರತರದ ಮಿಷ್ಟಾನ್ನಗಳನ್ನುಂಡು ಬಗೆಬಗೆಯ ಪೇಯಗಳನ್ನು ಕುಡಿದು, ಹೊಟ್ಟೆನೋವು, ಹೇಲಾಟ, ಮಲಬದ್ಧತೆ ಮುಂತಾದ ವಿಕಾರಗ ಳಿಂದ ನರಳುವರು; ಬಡವರು ರೊಟ್ಟಿಕಾರ ತಿಂದು ನಲವಿನಿಂದ ದುಡಿಯು ವರು. ಧನಿಕರು ಸ್ತ್ರೀಲಂಪಟದಿಂದ ಉಷ್ಣರೋಗಕ್ಕೆ ಗುರಿಯಾಗುವರು. ಬಡವರು ತಂತಮ್ಮ ಧರ್ಮಪತ್ನಿಯರಲ್ಲಿ ಮಿತಿಯಿಂದ ಸಂಭೋಗಮಾಡಿ,

ಆರೋಗಿಗಳಾಗಿಯೂ ದೃಢಕಾಯರಾಗಿಯೂ ಇರುವ ಮಕ್ಕಳನ್ನು ಪಡೆಯುವರು. ಸಿರಿವಂತರು ಸುಮ್ಮನೆ ಕುಳಿತು ಅಥವಾ ದುರ್ವಿಚಾರದ ಬಲೆಯಲ್ಲಿ ಸಿಲುಕಿ, ಹಲವು ತರದ ಬೇನೆಗಳನ್ನು ತಂದುಕೊಂಡರೆ, ದರಿದ್ರರು ಮೆಯ್ಮುರ ದುಡಿದು ಬೇನೆಯ ಬೀಜಗಳನ್ನು ಬೆವರಿನ ರೂಪದಿಂದ ಹೊರದೂಡಿ ನಿರೋಗಿಗಳಾಗುವರು. ಹಣವಂತರಿಗೆ ಕಸ್ತೂರಿ ಬೇಕಾದರೆ ಬಡವರಿಗೆ ಬೆಳ್ಳುಳ್ಳಿ ಸಾಕು; ಹಣವಂತರಿಗೆ ಗುಲಕಂದು ಬೇಕಾದರೆ, ಬಡವರಿಗೆ ರಾಗಿಯಂಬಲಿ ಸಾಕು; ಹಣವಂತರಿಗೆ ಬಂಗಾರದ ವರ್ಕು (ಚಿನ್ನದ ಹಾಳಿ) ಬೇಕಾದರೆ ಬಡವರಿಗೆ ನವಣಕ್ಕಿಯನ್ನ ಹುರುಳಿಸಂಕಟಿ† ಸಾಕು; ಶ್ರೀಮಂತರಿಗೆ ಕೂಷ್ಮಾಂಡಪಾಕ ಬೇಕಾದರೆ, ಬಡವರಿಗೆ ಉರುಳಿಗಡ್ಡೆ ಬೆಲ್ಲಗಳು ಸಾಕು; ದೈವುಳ್ಳವರಿಗೆ ಬೆಲೆಯುಳ್ಳ ಭಸ್ಮಮಾತ್ರೆಗಳು ಬೇಕಾದರೆ, ದರಿದ್ರರಿಗೆ ಭೂಮಿಯಲ್ಲಿ ಬೆಳೆಯುವ ಗಡ್ಡೆಗೆಣಸು ಬೇರು ತಪ್ಪಲುಗಳು ಸಾಕು. ಸಿರಿವಂತರಿಗೆ ನಾನಾ ಪ್ರಕಾರದ ಹೆಂಡಷರಬತ್ತುಗಳು ಬೇಕಾದರೆ, ಬಡವರಿಗೆ ತರತರದ ಅಂಬರ ಅಂಬಲಿಗಳು ಸಾಕು; ಧನಿಕರಿಗೆ ಮಂಚತಿವಾಸಿ ಕುತ್ನಿಲೇಪು ಚಾದರ ಸಕಲಾತಿಗಳು ಬೇಕಾದರೆ, ಬಡವರಿಗೆ ಹೊರಸು ಚಾಪೆ ಕಂಬಳಿ ಕವದಿಗಳು ಸಾಕು. ಸಾರಾಂಶವೇನಂದರೆ ಅವರವರ ಅವಸ್ಥೆಯಂತೆ ತಿನಸುಣಸುಗಳೂ ಊಟುಡಿಗೆಗಳೂ ಬಟ್ಟೆಬರೆಗಳೂ ಹಾಸಿಕೆ ಹೊದಿಕೆಗಳೂ ಮದ್ದುಗಳೂ ಬೇರೆಬೇರೆಯಾಗಿರುತ್ತವೆ. ಅವುಗಳಲ್ಲಿ ಬದಲು ಮಾಡಿದರೆ ತೊಂದರೆಗೆ ಕಾರಣವಾಗುವುದು; ಇಷ್ಟೇ ಅಲ್ಲ, ಅನರ್ಥವೇ ಆಗಬಹುದು. ಆದ್ದರಿಂದ ಹಡೆದಾಗ ನಮ್ಮ ಹೆಂಗಸರಿಗೆ ನಮ್ಮ ಪದ್ಧತಿಯಂತೆ ಆರೈಕೆಯನ್ನೂ ಉಪಚಾರವನ್ನೂ ಮಾಡಲೇ ಬೇಕು.

ಬಾದ.—ಬೀರಬಲ್ಲ, ಸೃಷ್ಟಿಯ ನೇಮುಗಳು ಒಂದೇ ಅಲ್ಲವೇ? ದೇವರು ಎಲ್ಲ ಮನುಷ್ಯರನ್ನು—ಹೆಂಗಸರನ್ನೂ ಗಂಡಸರನ್ನೂ ಹುಡುಗರನ್ನೂ ಬಡಬಗ್ಗರನ್ನೂ ದೈವುಳ್ಳವರನ್ನೂ—ಒಂದೇ ಪ್ರಕಾರವಾಗಿ ಮಾಡಿಲ್ಲವೇ? ಬಡಬಾಣಂತಿಯರು ನೈಸರ್ಗಿಕ ನಿಯಮದಿಂದ ಸುಖರೂಪವಾಗಿ

† ಬೆಲ್ಲ ಹಾಕಿ ಹಣ್ಣಾಗಿ ಬೇಯಿಸಿದ ಹುರಳಿಯ ನೀರು.

ರುವಂತೆ ನಮ್ಮ ಹೆಂಗಸರು ಏನೂ ಉಪಚಾರವಿಲ್ಲದೆ ಆರೋಗ್ಯಶಾಲಿಗಳು ಏಕೆ ಆಗಬಾರದು?

ಬೀರ. — ಮಹಾರಾಜ, ಮನುಷ್ಯಪ್ರಾಣಿಗಳ ಅಭ್ಯಾಸರೂಢಿಗಳು ಸೃಷ್ಟಿಯ ನಿಯಮಗಳಂತೆ ನಮ್ಮನ್ನು ನಿರ್ಬಂಧಿಸುತ್ತವೆ. ಅವಸ್ಥಾಭೇದ ದಿಂದ ನಮ್ಮ ಅಭ್ಯಾಸರೂಢಿಗಳು ಬೇರೆ ಬೇರೆಯಾಗಿರುತ್ತವೆ. ಅವುಗಳನ್ನು ಮುರಿಯುವುದರಿಂದ ದೇವರ ನಿಯಮಗಳನ್ನು ಮುರಿದಷ್ಟೇ ಕೇಡು ನಮಗೆ ಉಂಟಾಗುವುದು. ಈ ತತ್ವವನ್ನು ದೃಷ್ಟಾಂತದಿಂದ ತೋರಿಸಲಿಕ್ಕೆ ಅಪ್ಪಣೆ ಯಾದರೆ ಹಾಗೆ ಮಾಡುವೆನು.

ಬಾದ. — ಒಳ್ಳೆಯದು, ಈ ಮಾತನ್ನು ದೃಷ್ಟಾಂತದಿಂದ ನನಗೆ ತೋರಿಸು.

ಬೀರ. — ಮಹಾಪ್ರಸಾದ.

ಮುಂದೆ ಕೆಲವು ದಿವಸಗಳಾದ ಬಳಿಕ ಬೀರಬಲ್ಲನು ಬಾದಶಹನ ಹೂಹಣ್ಣಿನ ತೋಟದಲ್ಲಿದ್ದ ಗಿಡಗಳಿಗೆ ನೀರು ಹಾಕಕೂಡದೆಂದು ಆಳು ಗಳಿಗೆ ಅಪ್ಪಣೆ ಮಾಡಿದನು. ತರುವಾಯ ೧೫।೨೦ ದಿವಸ ಹೋದ ಬಳಿಕ ಬೀರಬಲ್ಲನು ಬಾದಶಹನ ಜತೆಯಲ್ಲಿ ತೋಟಕ್ಕೆ ಹೋದನು. ಮೊಗ್ಗೆಹೂಗಳಿಲ್ಲದಿರುವುದನ್ನೂ ಗಿಡಗಳು ಒಣಗಿರುವುದನ್ನೂ ಬಳ್ಳಿಗಳು ಬಾಡಿರುವುದನ್ನೂ ಎಲೆಗಳು ಉದುರಿರುವುದನ್ನೂ ನೋಡಿ ಬಾದಶಹನು ಅಚ್ಚರಿಗೊಂಡು,

ಬೀರಬಲ್ಲ, ಇದೇನು? ತೋಟವೆಲ್ಲ ಹಾಳಾಗಿ ಹೋಗಿರುತ್ತದಲ್ಲ?

ಬೀರ. — ಮಹಾರಾಜ, ಅದು ನೈಸರ್ಗಿಕ ನೇಮದಿಂದ ಸುಖರೂಪ ವಾಗಿರುತ್ತದೆ.

ಬಾದ. — ಇದೇನು ಹುಚ್ಚುಚ್ಚು ಹರಟುತ್ತೀ? ನೋಡಿದೆಯಾ ತೋಟ ವೆಲ್ಲ ಹಾಳಾಗಿ ಹೋಗಿರುತ್ತದೆ. ಕಣ್ಣು ಕಾಣುವುದಿಲ್ಲವೇ? ಆಳುಗಳು ಏನು ಕತ್ತೆಕಾಯುತ್ತಾರೆಯೇ? ಗಿಡಗಳಿಗೆ ನೀರೇ ಹಾಕಿಲ್ಲೆಂದು ತೋರು ತ್ತದೆ. ಎಲ್ಲರೂ ಹರಾಮುಖೋರರಿದ್ದಾರೆ. ಅವರಿಗೆ ಗಿಡಗಳ ಹಂಬಲವೇ ಇಲ್ಲ. ಅವರನ್ನೆಲ್ಲ ಗಲ್ಲಿಗೆ ಹಾಕಿಸು.

**ಬೀರ.**—ಮಹಾರಾಜ, ಕ್ಷಮಿಸಿರಿ. ಇದು ಆಳುಗಳ ತಪ್ಪಲ್ಲ. ನನ್ನದೇ ಅಪರಾಧವಾಗಿರುತ್ತದೆ. ನಾನೇ ಬೇಕೆಂದು ಅವರಿಗೆ ನೀರು ಹಾಕಬೇಡೆಂದು ಕಟ್ಟುಮಾಡಿದೆನು. ಗಿಡಗಂಟೆಗಳನ್ನು ದೇವರು ರಕ್ಷಿಸು ವುದಿಲ್ಲವೇ? ಕಾಡಿನಲ್ಲಿ ಗಿಡಗಳಿಗೆ ನೀರು ಯಾರು ಹಾಕುತ್ತಾರೆ? ಯಾರು ಕತ್ತರಿಸುತ್ತಾರೆ? ಯಾರು ಗೊಬ್ಬರ ಹಾಕುತ್ತಾರೆ? ಯಾರು ಕಸಿ ಮಾಡುತ್ತಾರೆ? ಯಾರೂ ಇಲ್ಲ. ತಾವು ಬಾಣಂತಿಯರನ್ನು ಸೃಷ್ಟಿಯ ನೇಮಗಳಿಗೆ ಒಪ್ಪಿಸಲೆಳಸುತ್ತಿದ್ದಿರಲ್ಲ. ನಾನು ಈ ತೋಟವನ್ನು ಆ ನೇಮ ಗಳಿಗೆ ಒಪ್ಪಿಸಿದ್ದರಲ್ಲಿ ತಪ್ಪೇನು? ಆರಯ್ಕೆ ಇಲ್ಲದಿದ್ದರೆ ಈ ಗಿಡಬಳ್ಳಿಗಳು ಹೇಗೆ ಕೆಡುತ್ತವೆಯೋ ಹಾಗೆ ಹೆಂಗಸರಿಗೆ ಅವರವರ ಸ್ಥಿತಿಗತಿಯಂತೆ ಜೋಪಾನ ಮಾಡದಿದ್ದರೆ ಅವರು ಬೇನೆಗೆ ಈಡಾಗಿ, ಜನ್ಮವನ್ನು ನೀಗ ಬಹುದು. ಈ ತತ್ವವನ್ನು ತಾವು ಪ್ರತ್ಯಕ್ಷವಾಗಿ ತೋರಿಸಬೇಕೆಂದು ಹೇಳಿ ದ್ದರಿಂದ, ನಾನು ಈ ಆಳುಗಳಿಗೆ ತೋಟದ ಯಾವ ಕೆಲಸವನ್ನೂ ಮಾಡ ಕೂಡದೆಂದು ಅಪ್ಪಣೆ ಕೊಟ್ಟಿದ್ದೆನು. ನಾನು ಹೇಳಿದ ಮಾತು ಈಗ ತಮ್ಮ ನಿದರ್ಶನಕ್ಕೆ ಬಂದಿರಬಹುದು. ಆದಕಾರಣ ಒಳ್ಳೆಯ ಉದ್ದೇಶ ದಿಂದ ಈ ತೋಟವನ್ನು ಹಾಳುಗೆಡವಿದ ತಪ್ಪನ್ನು ದಯವಿಟ್ಟು ಹೊಟ್ಟೆ ಯೊಳಗೆ ಹಾಕಿಕೊಳ್ಳಬೇಕೆಂದು ಬೇಡುತ್ತೇನೆ.

**ಬಾದ.**—ಬೀರಬಲ್ಲ! ನಿನ್ನಂತಹ ಬುದ್ಧಿಶಾಲಿಯು ದೊರೆತುದಕ್ಕೆ ನಾನು ಹಿಗ್ಗಿ ನಲಿಯುತ್ತೇನೆ. ಇದು ನನ್ನ ಪೂರ್ವಪುಣ್ಯದ ಫಲವೇ ಸರಿ. ನನ್ನ ತಲೆಯಲ್ಲಿ ಬಂದ ವಿಚಾರವು ಭ್ರಾಮಕವಾದುದೇ ಸರಿ. ನಾನು ಹಾಗೆ ನಡೆದಿದ್ದರೆ, ಎಷ್ಟು ಪ್ರಾಣಹಾನಿಗಳಾಗುತ್ತಿದ್ದವೋ ದೇವರೇ ಬಲ್ಲ. ನೀನು ನನ್ನ ವಿಚಾರದಲ್ಲಿ ತಪ್ಪನ್ನು ಯುಕ್ತಿಸರಸಸಲ್ಲಾಪಗಳಿಂದ ತೋರಿಸಿ ಕೊಟ್ಟುದಕ್ಕೆ ನಾನು ಅತ್ಯಂತ ಕೃತಜ್ಞನಾಗಿರುತ್ತೇನೆ. ನಿನ್ನ ಉಪಕಾರ ವನ್ನು ನಾನೆಂದೂ ಮರೆಯೆನು. ನಿನ್ನಲ್ಲಿರುವ ನನ್ನ ಪೂಜ್ಯಬುದ್ಧಿಯ ದ್ಯೋತಕವಾಗಿ ಈ ಮುತ್ತಿನ ಕಂಠಿಯನ್ನು (ತನ್ನ ಕೊರಳಿನಿಂದ ತೆಗೆದು) ದಯವಿಟ್ಟು ತೆಗೆದುಕೊ. ಅದನ್ನು ನಿನ್ನ ಕೊರಳಿನಲ್ಲಿ ಹಾಕಿಕೊ (ಎಂದು ಅದನ್ನು ಅವನ ಕೊರಳಿನಲ್ಲಿ ಹಾಕುತ್ತಾನೆ).

ಬೀರ.—ಮಹಾರಾಜ, ನನ್ನ ಅಲ್ಪಸೇವೆಯನ್ನು ತಾವು ಗುಡ್ಡವಾಗಿ ಮಾಡಿದ್ದು ತಮ್ಮ ಸೌಜನ್ಯದ ಪರಿಣಾಮವೇ ಸರಿ. ಪರಮೇಶ್ವರನು ತಮಗೆ ಸದಾ ಕಲ್ಯಾಣ ಮಾಡಲಿ.

## ೨೪. ಅಡಕೆಗೆ ಹೋದ ಮಾನ ಆನೆ ಕೊಟ್ಟರೂ ಬಾರದು.

ಒಂದು ದಿವಸ ಬಾದಶಹನ ಹುಟ್ಟಿದ ದಿವಸದ ಸಮಾರಂಭಕ್ಕೋಸ್ಕರ ಸುಮನಾಗಾರವೆಂಬ ಉದ್ಯಾನದಲ್ಲಿದ್ದ ಒಂದು ಹರ(ವಿಶಾಲ)ವಾದ ತೊಟ್ಟಿಯಲ್ಲಿ ಒಂದು ದೊಡ್ಡ ಸಭೆಯು ನೆರೆಯಿತು. ಗೊತ್ತಾದ ಹೊತ್ತಿಗೆ ಬಾದಶಹನ ಎಲ್ಲ ನೆಂಟರೂ ಸರದಾರರೂ ರಾಜ್ಯಾಧಿಕಾರಿಗಳೂ ಧರ್ಮಾಧಿಕಾರಿಗಳೂ ಸೇನಾಧಿಕಾರಿಗಳೂ ಮಾನ್ಯರೂ ಮಿರಾಸೆದಾರರೂ ಇನಾಮುದಾರರೂ ಪಂಡಿತರೂ ಸೆಟ್ಟಿಸಾವುಕಾರರೂ ಕಲಾಕೌಶಲ್ಯಕೋವಿದರೂ ಗೋಷೆಯ ಹೆಂಗಸರೂ ಅಲ್ಲಿ ಹಾಸಿದ್ದ ತಿವಾಸಿರನ್ನಗಂಬಳಿಗಳ ಮೇಲೆ ದಟ್ಟವಾಗಿ ಕುಳಿತಿದ್ದರು. ಜನರ ಸಂದಣಿಯಿಂದ ಆ ಭವ್ಯವಾದ ಮತ್ತು ವಿಸ್ತಾರವಾದ ಮಂದಿರವು ತುಂಬಿ ತುಳುಕುತ್ತಿತ್ತು. ಎತ್ತ ನೋಡಿದರೂ ಭರ್ಜರಿಯ ಉಡಿಗೆಗಳೂ ಬೆಲೆಯುಳ್ಳ ಒಡವೆಗಳೂ ಕಂಗೊಳಿಸುತ್ತಿದ್ದವು. ಅಲ್ಲಲ್ಲಿ ವೀಳೆಯ ಸಾಮುಗ್ರಿಗಳಿಂದ ತುಂಬಿದ ಹರಳುಕೆಚ್ಚಿದ ಹರವಾದ ಚಿನ್ನದ ತಟ್ಟೆಗಳನ್ನು ಇಟ್ಟಿದ್ದರು. ತುಸು ತುಸು ಅಂತರದ ಮೇಲಿಟ್ಟಿದ್ದ ಚಿನ್ನದ ಗಿಡಗಳಿಗೆ ಚುಚ್ಚಿದ್ದ ಊದಿನ ಕಡ್ಡಿಗಳ ಸುಗಂಧಧೂಮವು ಜನರ ಉಚ್ಛ್ವಾಸದಿಂದ ಹೊರಡುವ ದುಷ್ಟವಾಯುವನ್ನು ಬೆನ್ನಟ್ಟಿ ಹೊರದೂಡಿ, ಜನರಿಗೆ ಮಲಯಮಾರುತದ ನೆನಪು ಕೊಡುತ್ತಿದ್ದಿತು.

ಬಾದಶಹನು ಬಂದ ಕೂಡಲೆ ಎಲ್ಲರೂ ಎದ್ದು ನಿಂತು, ಉಚಿತ ಪ್ರಕಾರದಿಂದ ಮುಜರೆ ಮಾಡಿ, ತಂತಮ್ಮ ಸ್ಥಳಗಳಲ್ಲಿ ಕುಳಿತುಕೊಂಡರು. ಕೂಡಲೆ ಎಲ್ಲ ತರದ ವಾದ್ಯಗಳೂ ಮೊಳಗಿದವು. ಹಿಂದೂ ಮುಸಲ್ಮಾನ್ ಕ್ರಿಸ್ತಿ ಧರ್ಮಗಳ ಮುಖ್ಯಸ್ಥರು "ನೂರು ವರುಷ ಬಾಳು" ಎಂದು ಹರಿಸಿದರು. ಬಾದಶಹನು ಜಗನ್ನಿಯಾಮಕನಾದ ದೇವರ ಉಪಕಾರವನ್ನು ಕೊಂಡಾಡಿ ಪ್ರಾರ್ಥನೆಯನ್ನು ಮಾಡಿದನು. ಬಳಿಕ ಕೆಲಹೊತ್ತು ಅಂದ

ವಾದ ನೃತ್ಯವೂ ಇಂಪಾದ ಗಾಯನವೂ ಅಲ್ಲಿದ್ದವರನ್ನೆಲ್ಲ ಮರುಳು ಮಾಡಿ ಬಿಟ್ಟವು. ವೀಳೆಯು, ಹಾರ, ತುರಾಯಿ, ಗಜರೆ, ಮೇವು, ಮಿಠಾಯಿ ಇವುಗಳನ್ನು ಎಲ್ಲರಿಗೂ ಹಂಚಿದ ಬಳಿಕ, ಸಭೆಯು ಬರಖಾಸ್ತಾಯಿತು. ಬಾದಶಹನು ಏಳುವಾಗ ಅತ್ತರಿನ ಕುಪ್ಪಿಯು ಕಾಲುತಗಲಿ ಉರುಳಿತು. ಆಗ ಅವನು ಸ್ವಾಭಾವಿಕವಾಗಿ ಬಗ್ಗಿ ಅತ್ತರನ್ನು ಬಳಿದು, ಕುಪ್ಪಿಯೊಳಗೆ ತುಂಬತೊಡಗಿದನು. ಅಷ್ಟರೊಳಗೆ ಗಾದಿಯಲ್ಲಿದ್ದ ಬೂರಲದರಳೆಯು ಆ ಅತ್ತರನ್ನೆಲ್ಲ ಹೀರಿಕೊಂಡಿತು. ಬಾದಶಹನು ನಿರುಪಾಯನಾಗಿ ಹಿಂದೆ ತಿರುಗಿ ನೋಡಿ, ಬೀರಬಲ್ಲ ಮುಂತಾದ ಸರದಾರರು ತಾನು ಅತ್ತರನ್ನು ಬಳಿಯುವುದನ್ನು ನೋಡಿದರೆಂದು ಮನಗಂಡು, ತನ್ನ ಬಗೆಯೊಳಗೆ ನಾಚಿಕೊಂಡು ಹೊರಟುಹೋದನು. ಆಹೊತ್ತಿನಿಂದ ತನ್ನ ಸರದಾರರು ಕಂಡುಹಿಡಿದ ತನ್ನ ಕಾರ್ಪಣ್ಯದೋಷವನ್ನು ಹೇಗೆ ಹೋಗಲಾಡಿಸಿಕೊಳ್ಳಬೇಕೆಂಬ ವಿಚಾರವು ಅವನ ಮನಸ್ಸಿನಲ್ಲಿ ಕಟಿಯಲಾರಂಭಿಸಿತು. ಸಲಿಗೆಯ ಸರದಾರರೊಡನೆ ಸಲ್ಲಾಪಗೆಯ್ಯುವಾಗ, ಅವರು ತನ್ನ ಜೀನತನವನ್ನು ಯಾವಾಗ ಹೊರಗೆ ಹಾಕುವರೆಂಬ ಹೆದರಿಕೆಯು ಹುಟ್ಟುತ್ತಿತ್ತು. ಆದ್ದರಿಂದ ಅವನು ಬಹಳ ದಿವಸ ಅಳೆದು ಹಾಕಿ, ನೂರಾರು ಕೊಡ ಅತ್ತರನ್ನು ದಾನ ಮಾಡಿದರೆ ಜನರ ಮನಸ್ಸಿನಲ್ಲಿ ತನ್ನ ಬಗ್ಗೆ ಉಂಟಾದ ಕಿಲ್ಮಿಷದ ಪರಿಹಾರವಾಗುವುದೆಂದು ನಿರ್ಧರಿಸಿ, ಆಶ್ವೀಜ ವದ್ಯತ್ರಯೋದಶಿಯ ದಿವಸ ಬೆಳಿಗ್ಗೆ ಬೆಲೆಬಾಳುವ ಅತ್ತರುಗಳನ್ನು ಕೊಡಗಟ್ಟಲೆ ತರಿಸಿ, ಸುಮನಾಗಾರೋದ್ಯಾನದಲ್ಲಿದ್ದ ಒಂದು ಹೌದವನ್ನು ಅತ್ತರಿನಿಂದ ತುಂಬಿಸಿ, ಎಲ್ಲ ಜನರೂ ತಮಗೆ ಬೇಕಾದಷ್ಟು ಅತ್ತರನ್ನು ಒಯ್ಯಬಹುದೆಂದು ಡಂಗುರ ಸಾರಿಸಿದನು. ಜನರು ಆ ಡಂಗುರವನ್ನು ಕೇಳಿ ಹಿಗ್ಗಿ, ಮನೆಗೊಬ್ಬನು ಕುಪ್ಪಿಗಳನ್ನು ತೆಗೆದುಕೊಂಡು ಹೋಗಿ, ತಮಗೆ ಬೇಕಾಗುವಷ್ಟು ಸುವಾಸನೆಯುಳ್ಳ ಅತ್ತರನ್ನು ತಂದು, ಮರುದಿವಸ ನರಕಚತುರ್ದಶಿಯಾದ್ದರಿಂದ ಬೆಳಗಿನ ಜಾವದಲ್ಲಿ ಹೂಸಿಕೊಂಡು ಸ್ನಾನ ಮಾಡಿ, ನಲವಿನಿಂದ ಬಾದಶಹನ ಉದಾರಬುದ್ಧಿಯನ್ನು ಹೊಗಳಿ ಹರಸಿದರು. ನಡುಹಗಲಿನಲ್ಲಿ ಬೀರಬಲ್ಲನು ಅರಮನೆಗೆ ಹೋಗಲು—

ಬಾದ.—ಬೀರಬಲ್ಲ! ಏನು ಸುದ್ದಿ ಊರೊಳಗೆ?

ಬೀರ.—ಮಹಾರಾಜ! ಈ ಹೊತ್ತು ನಮ್ಮ ದೊಡ್ಡ ಹಬ್ಬ. ಶ್ರೀ ಕೃಷ್ಣನು ನರಕಾಸುರನನ್ನು ಕೊಂದು ಜನರ ಕೋಟಲೆಯನ್ನು ತಪ್ಪಿಸಿ, ದ್ವಾರಕೆಗೆ ತಿರುಗಿ ಬಂದು, ತನ್ನ ಬಳಗದವರಿಂದ ಆರತಿ ಮಾಡಿಸಿಕೊಂಡು ಎರೆದುಕೊಂಡನು. ಈ ಮಹಾಕಾರ್ಯವನ್ನು ನೆನಪಿನಲ್ಲಿಡುವುದಕ್ಕೋಸ್ಕರ ಪ್ರತಿವರ್ಷ ಈ ದಿವಸ ಮುಂಜಾವಿನಲ್ಲೆದ್ದು ಆರತಿ ಮಾಡಿಸಿಕೊಂಡು ಎರೆದು ಕೊಳ್ಳುತ್ತೇವೆ. ತಾವು ಧರ್ಮಾರ್ಥವಾಗಿ ಅತ್ತರನ್ನು ಕೊಟ್ಟುದರಿಂದ ಎಲ್ಲರೂ ತಮ್ಮನ್ನು ಕೊಂಡಾಡುತ್ತಾರೆ.

ಬಾದ.—ನಾನು ಉದಾರಬುದ್ಧಿಯುವನೆಂದು ಎಲ್ಲರೂ ಮನಗಂಡ ರಷ್ಟೇ?

ಬೀರ.—ಮಹಾರಾಜ! ಅದೇನೋ ನಾನು ಹೇಳಲಾರೆ.

ಬಾದ.—ಏಕೆ ಹೇಳಲಾರೆ. ಇದ್ದುದನ್ನು ಇದ್ದ ಹಾಗೆ ಹೇಳು.

ಬೀರ.—ಮಹಾರಾಜ! ಕ್ಷಮಿಸಿರಿ. ಜನರ ಬಾಯಿಹಿಡಿಯುವ ರಾರು? ಒಬ್ಬ ಅಗಸನು ಶ್ರೀರಾಮನನ್ನು ಕೂಡ ಎದ್ದೆಣಿಸಿದ (ದೂಷಿಸಿದ) ನೆಂದು ಪುರಾಣಪ್ರಸಿದ್ಧಿಯುಂಟು. 'ಜನಾನೊ ದನಾನೊ' ಎಂದು ವಾಡಿಕೆ ಯಾಗಿ ಹೇಳುತ್ತಾರೆ.

ಬಾದ.—ಜನರು ಹೇಳುವುದಾದರು ಏನು? ಸಾವಿರಗಟ್ಟಲೆ ಮೊಹ ರಿನ ಅತ್ತರನ್ನು ಹಂಚಿದ್ದು ಸುಳ್ಳೇ? ಇಷ್ಟು ಕೃತಾರ್ಥವಾಗಿ ದಾನ ಮಾಡಿ ದವರು ಉದಾರರಲ್ಲವೇ? ಅವರಿಗೆ ಏನು ಸಂಶಯ ಬಂದಿದೆ? ನಿಜ ವಾದ್ದನ್ನು ಮಾಜದೆ ಹೇಳು. ನನಗೆ ಖರೆ ದಿಟವಾದ ಸಂಗತಿ ಬೇಕಾಗಿದೆ. ಹೆದರಬೇಡ.

ಬೀರ.—ಮಹಾರಾಜ! ಕ್ಷಮಿಸಬೇಕು. ಅಡಕೆಗೆ ಹೋದ ಮಾನ ಆನೆ ಕೊಟ್ಟರೂ ಬಾರದೆಂದು ಹಿರಿಯರು ಹೇಳುತ್ತಾರೆ. ತಮ್ಮ ಹುಟ್ಟಿದ ದಿವಸದ ಸಮಾರಂಭದಲ್ಲಿ ತಾವು ಎಣ್ಣೆ ಬಳಿದುದನ್ನು ಸಾವಿರಾರು ಜನರು ನೋಡಿರುತ್ತಾರೆ. ಆದ್ದರಿಂದ ಹಲವರು ಆಗ ತೋರಿಸಿದ ಕಾರ್ಪಣ್ಯವನ್ನು ಮುಚ್ಚಿಕೊಳ್ಳಲಿಕ್ಕೆ ಮಾಡಿದ ದಾನವೇ ಹೊರತು ಇದು ಕೃತಾರ್ಥದಾನ ವಲ್ಲೆಂದು ಆಡಿಕೊಳ್ಳುತ್ತಾರೆ.

ಬಾದ.—ಉಃಶ, ಬೀರಬಲ್ಲ! ಆ ದಿನ ಅತ್ತರ ಬಳಿದುದನ್ನು ಜನರು ಮರೆತು ಬಿಡಲಿಕ್ಕೆ ಏನು ಉಪಾಯ ಮಾಡಬೇಕು?

ಬೀರ.—ಮಹಾರಾಜ! ಏನೂ ಮಾಡಬಾರದು. ಸುಮ್ಮನಿರಬೇಕು. ಏನಾದರೂ ಮಾಡಲಿಕ್ಕೆ ಹೋದರೆ ಅದನ್ನು ನೆನಪು ಮಾಡಿ ಕೊಟ್ಟಂತಾಗುವುದು. ಈ ಹರಲೆಯು ಕಾಲಮಹಿಮೆಯಿಂದ ಹೋಗಬೇಕೇ ಹೊರತು ಬೇರೆ ಉಪಾಯದಿಂದ ಹೋಗಲಾರದು.

ಬಾದ.—ಒಳ್ಳೆಯದು ಹಾಗೇ ಮಾಡುವೆನು.

## ೨೫. ಮುಕುಳಿಯ ಮೇಲೆ ಬಡೆದರೆ ಬಾಯೊಳಗಿನ ಹಲ್ಲು ಉದುರುವುದೇ?

ಒಂದು ದಿವಸ ಚಳಿಗಾಲದಲ್ಲಿ ಬಾದಶಹ ಬೀರಬಲ್ಲರು ತೋಟದಲ್ಲಿ ನಲಿವಿನಿಂದ ತಿರುಗಾಡುತ್ತಿರುವಾಗ ಅಲ್ಲಿರುವ ಹೌದವು ತುಂಬಿ ಡಮಕಿಸುತ್ತಿರುವುದನ್ನು ನೋಡಿ ಬಾದಶಹನಿಗೆ ಸಂತೋಷವಾಯಿತು.

ಬಾದ.—ಬೀರಬಲ್ಲ! ಈ ಹೌದದಲ್ಲಿ ಯಾವನಾದರು ಬೆಳತನಕ ಕುತ್ತಿಗೆಮಟ ನೀರಿನಲ್ಲಿ ಕುಳಿತು ಬದುಕಬಹುದೇ?

ಬೀರ.—ಮಹಾರಾಜ! ಅಂತಹರು ಕ್ವಚಿತ್ತಾಗಿ ಇರಬಹುದು.

ಬಾದ.—ಏನು! ಹನ್ನೆರಡು ತಾಸು ರಾತ್ರಿಯಲ್ಲಿ ಇಂತಹ ಚಳಿಯ ದಿವಸದಲ್ಲಿ ನೀರೊಳಗೆ ಕುಳಿತು ಬದುಕುವ ಬಗೆ ಹೇಗೆ? ೫॥ ತಾಸಿನೊಳಗೆಯೇ ಸೇಡು ಹತ್ತಿ ಸೆಟೆದು ಸಾಯಬಹುದು. ೧೨ ತಾಸು ಕುಳಿತಿರೆ ಹಲ್ಲು ಗಟಗರೆದು ಪ್ರಾಣ ಬಿಡುವುದೇ ನಿಶ್ಚಯ.

ಬೀರ.—ಮಹಾರಾಜ! ದುರ್ಯೋಧನನು ನೀರೊಳಗೆ ಕುಳಿತು ತಪಶ್ಚರ್ಯ ಮಾಡುತ್ತಿರುವಾಗ ಭೀಮಸೇನನು ಅಲ್ಲಿಗೆ ಹೋಗಿ, ತಪೋಭಂಗ ಮಾಡಿದನೆಂದು ಮಹಾಭಾರತದಲ್ಲಿ ಹೇಳಿದೆ. ಆದಕಾರಣ ಜಲಸ್ತಂಭನ ವಿದ್ಯೆ ಬಲ್ಲವರು ನೀರೊಳಗೆ ಬೇಕಾದಷ್ಟು ಹೊತ್ತು ಕೂಡ್ರಬಹುದೆಂದು ತೋರುತ್ತದೆ.

ಬಾದ. — ನಿನಗೆ ಗೊತ್ತಿರುವವರೊಳಗಾರಾದರೂ ಆ ವಿದ್ಯೆಯನ್ನು ಕಲಿತವರಿದ್ದಾರೇನು ?

ಬೀರ. — ಇಲ್ಲ, ನಾನು ಆ ಬಗ್ಗೆ ಶೋಧವನ್ನು ಮಾಡಿಲ್ಲ.

ಬಾದ. — ಹಾಗಾದರೆ ಒಂದು ಜಾಹಿರನಾಮೆಯನ್ನು ಕೊಡು. ಇಡೀ ಇರಳು ಈ ಹೌದದಲ್ಲಿ ಕುಳಿತವರಿಗೆ ನಾನು ೫,೦೦೦ ಮೊಹರು ಇನಾಮು ಕೊಡುವೆನು.

ಬೀರಬಲ್ಲನು ಅದೇ ಪ್ರಕಾರ ಜಾಹಿರನಾಮೆಯನ್ನು ಹೊರಡಿಸಿದನು. ಮುಂದೆ ೮|೧೦ ದಿವಸದ ಮೇಲೆ ಒಬ್ಬ ಬ್ರಾಹ್ಮಣನು ಬಂದು, ತಾನು ಹೌದಿನಲ್ಲಿ ಕೂಡ್ರುವೆನೆಂದು ಬಾದಶಹನಿಗೆ ತಿಳಿಸಿದನು. ಬಾದಶಹನು ಕಾವಲಿನ ಬಂದೋಬಸ್ತನ್ನು ಮಾಡಿ, ಅವನಿಗೆ ಅದೇ ದಿನ ರಾತ್ರಿ ಹೌದಿನಲ್ಲಿ ಕೂಡ್ರಲಿಕ್ಕೆ ಹೇಳಿದನು. ಮರುದಿವಸ ಬೆಳಿಗ್ಗೆ ಆ ಬ್ರಾಹ್ಮಣನು ಕಾವಲುಗಾರರೊಡನೆ ಅರಮನೆಗೆ ಹೋಗಿ ಇನಾಮನ್ನು ಕೇಳಿದನು. ಕರ್ಮಧರ್ಮಸಂಯೋಗದಿಂದ ಬ್ರಹ್ಮದ್ವೇಷಿಯಾದ ಒಬ್ಬ ಮುಸಲ್ಮಾನ ಸರದಾರನು ಬಾದಶಹನ ಬಳಿಯಲ್ಲಿ ಕುಳಿತಿದ್ದನು.

ಸರದಾರ — ಖುದಾವಂದ್. ತಾವು ಇಂತಹ ಮೋಸಕ್ಕೆ ಒಳಗಾಗಬಹುದೇ ? ಇದರಲ್ಲೇನಚ್ಚರಿಯು ? ನೂರಾರು ದೀವಿಗೆಗಳು ತಮ್ಮ ಉಪ್ಪರಿಗೆಯ ಮೇಲೆ ಉರಿಯುತ್ತವೆ. ಅವುಗಳ ಶಕೆಯೇನು ಕಡಮೆಯೇ ? ಆ ಶಕೆಯ ಮೂಲಕ, ಬೇಕಾದವರು ತಮ್ಮ ತೋಟದ ಹೌದಿನಲ್ಲಿ ಕೂಡ್ರಬಹುದು.

ಬಾದ. — ಆ ದೀಪಗಳ ಹತ್ತರಿದ್ದಂತಹರು ತಂಡಿ ಹತ್ತುತ್ತದೆಂದು ಶಾಲುಗಳನ್ನು ಹೊತ್ತುಕೊಳ್ಳುತ್ತೇವಲ್ಲ !! ಆ ಹೌದಿನಲ್ಲಿ ಕುಳಿತವನಿಗೆ ದೀವಿಗೆಯ ಶಕೆ ತಗಲುವ ಬಗೆ ಹೇಗೆ ?

ಸರ. — ಮಹರಾಜ, ತಾವು ಶ್ರೀಮಂತರು. ಸೂಕ್ಷ್ಮಪಿಂಡದವರು. ತಮಗೂ ಈ ಬಡ ಹಾರವನಿಗೂ ಸರಿಯೇ. ಎಷ್ಟೋ ಬಡಜನರು ಈ ಚಳಿಯಲ್ಲಿ ಬರಿ ಮೈಲೆ ಹೊಲದಲ್ಲಿ ದುಡಿಯುವುದನ್ನು ತಾವು ನೋಡಿಲ್ಲವೇ ?

ಇದಲ್ಲದೆ ಇನ್ನೊಂದು ವಿಶೇಷ ಕಾರಣವುಂಟು. ಈಗ ಪಡುವಣ ಗಾಳಿಯು ಬೀಸುತ್ತದೆ; ತೋಟವು ತಮ್ಮ ಅರಮನೆಯ ಪಡುವಲಿಗಿರುತ್ತದೆ. ಆದ್ದರಿಂದ ಗಾಳಿಯು ತಮ್ಮ ದೀವಿಗೆಗಳ ಶಕೆಯನ್ನು ತೋಟಕ್ಕೆ ಒಯ್ಯುತ್ತದೆ. ಹೌದಿನೊಳಗಿನ ನೀರು ಹೆಚ್ಚು ತಂಪಾಗಿರುವುದರಿಂದ ಗಾಳಿಯೊಳಗಿನ ಉಷ್ಣತೆಯನ್ನು ಹೀರಿಕೊಳ್ಳುತ್ತದೆ. ಇದರಲ್ಲೇನೂ ಸಂಶಯವಿಲ್ಲ. ಇವನು ತಮಗೆ ಮೋಸಮಾಡಿದ್ದಾನೆ. ಇವನಿಗೆ ಒಂದು ಕಾಸನ್ನಾದರೂ ಕೊಡಕೂಡದು. ಇಷ್ಟೇ ಅಲ್ಲ, ಮೋಸ ಮಾಡಿದ ಬಗ್ಗೆ ಈ ಹಾರವನಿಗೆ ತಕ್ಕ ಶಿಕ್ಷೆಯಾಗಬೇಕೆಂದು ನನ್ನ ಅರಿಕೆಯುಂಟು.

ಬಾದ.—ಶಿಕ್ಷೆ ಮಾಡಲಿಕ್ಕೆ ಅವನು ಮಾಡಿದ ತಪ್ಪೇನು? ನೀರೊಳಗೆ ಕುಳಿತರೆ ಇನಾಮು ಕೊಡುವೆನೆಂದು ನಾನೇ ಹೇಳಿದ್ದರಿಂದ ಅವನು ಕುಳಿತನು. ಅವನು ತಾನಾಗಿ ಕುಳಿತು ಇನಾಮು ಬೇಡುವುದಿಲ್ಲ.

ಸರ.—ಖುದಾವಂದ್, ಅದು ಸರಿ. ಆದ್ದಾಯಿತು. ಅವನು ಇನಾಮಿಗೆ ಮಾತ್ರ ತಕ್ಕವನಲ್ಲ. ಮೆಹರ್ಬಾನರು ಅದನ್ನು ಕೊಡಕೂಡದೆಂದು ಬಿನ್ನವಿಸುತ್ತೇನೆ.

ಬಾದ.—ಒಳ್ಳೆಯದು, ವಿಚಾರ ಮಾಡುವೆನು. (ಬ್ರಾಹ್ಮಣನ ಕಡೆಗೆ ನೋಡಿ) ಅರಮನೆಯ ದೀವಿಗೆಯ ಶಕೆಯಿಂದ ನಿನಗೆ ತಂಡಿ ಹತ್ತಲಿಲ್ಲವಾದ್ದರಿಂದ ನೀನು ಇನಾಮಿಗೆ ತಕ್ಕವನಲ್ಲೆಂದು ಈ ಸಾಹೇಬರು ಹೇಳುತ್ತಾರೆ. ನಾವು ವಿಚಾರಮಾಡಿ ನಿನಗೆ ಇನಾಮು ಕೊಡುವುದಾದರೆ ನಿನ್ನನ್ನು ಕರೆಕಳಿಸುವೆವು. ಇಲ್ಲವಾದರೆ ಇಲ್ಲ. ಕರೆಯದೆ ನೀನು ಇಲ್ಲಿ ಬರಕೂಡದು. ಹೋಗು ನಡೆ.

೫೦೦೦ ಮೊಹರು ದೊರೆಯುತ್ತವೆಂಬ ಹಿಗ್ಗಿನಿಂದ ಒದ್ದೆ ಬಟ್ಟೆಯಲ್ಲಿ ಬಂದ ಹಾರವನು ಬಾದಶಹನ ನಿರಾಶಾಜನಕವಾದ ಅಪ್ಪಣೆಯನ್ನು ಕೇಳಿ ದಿಗಿಲುಕೊಂಡು, ಉಸ್ಸೆಂದು ಎದ್ದು, ಆ ಮುಸಲ್ಮಾನ ಸರದಾರನ ಮೇಲೆ ಬಯ್ಗುಳ ಮಳೆಯನ್ನು ಕರೆಯುತ್ತ ಮಿಡುಕುತ್ತ ತನ್ನ ಮನೆಗೆ ಹೋಗಿ, ಜಳಕಮಾಡಿ ಒಣಬಟ್ಟೆಯನ್ನುಟ್ಟುಕೊಂಡು, ತನ್ನ ಆಹ್ನಿಕವನ್ನು ತೀರಿಸಿಕೊಂಡು, ಸುಮ್ಮನೆ ಅಳೆದು ಹಾಕುತ್ತ ಪಡಸಾಲೆಯಲ್ಲಿ ಕುಳಿತುಕೊಂಡನು. ಅವನ

ಧರ್ಮಪತ್ನಿಯು ಅವನ ಬಾಡಿದ ಮೋರೆಯನ್ನೂ ಕಂದಿದ ಕಣ್ಣುಗಳನ್ನೂ ಸೊಗಸಿಲ್ಲದ ಬಗೆಯನ್ನೂ ನೋಡಿ ಮೆಲ್ಲಗೆ ಪಡಸಾಲೆಗೆ ಬಂದು "ಏಕೆ? ಏನಾಯಿತು? ಇನಾಮು ದೊರೆಯಲಿಲ್ಲೇನು? ತಂಡಿ ತಡೆಯಲಾರದಷ್ಟಾಯಿತೇನು? ಇಷ್ಟು ಉಮ್ಮಳಿಕೆ ಏಕೆ?"

ಬ್ರಾಹ್ಮಣ—ಮಾಡಿದ್ದೆಲ್ಲ ಪೋಲಾಯಿತು. ಸರ್ವಚಿತ್ತಾರ ಮಸಿ ನುಂಗಿತು. ಈ ಮುಸಲರನ್ನು ನಂಬಕೂಡದು. ಸುಮ್ಮನೆ ಬೆಳ್ಳಬೆಳತನಕ ನೀರಿನಲ್ಲಿ ಕುಳಿತೆನು.

ಹೆಂಡತಿ—ಇನಾಮು ಕೊಡುತ್ತೇವೆಂದು ಡಂಗುರ ಏಕೆ ಮಣ್ಣು ಹೊಯ್ಕೊಳ್ಳಲಿಕ್ಕೆ ಸಾರಿಸಬೇಕು? ಈ ಮುಸಲರನ್ನು ನಂಬಕೂಡದು. ಆದ್ದಾಯಿತು. ಚಿಂತೆಮಾಡಿ ಫಲವೇನು? ಬೀರಬಲ್ಲನಿಗೆ ಇದೆಲ್ಲ ತಿಳಿಸಿದಿರೇನು? ಅವನು ಚೆಲೊ ಮನುಷ್ಯನಿದ್ದಾನೆ.

ಬ್ರಾಹ್ಮಣ—ಹೌದು. ಚೆಲೊ ನೆನಪು ಮಾಡಿದೆ. ಸಂಜೆಯು ಮುಂದೆ ಬೀರಬಲ್ಲನ ಬಳಿಗೆ ಹೋಗುವೆನು. ಈ ದರಬಾರಿನಲ್ಲಿ ನಮ್ಮ ಬ್ರಾಹ್ಮಣರಿಗೆ ಅವನೇ ಗತಿ. ಈ ಮುಸಲ್ಮಾನರೆಲ್ಲ ಬ್ರಹ್ಮದ್ವೇಷಿಗಳೇ. ಈ ಸೂಳೆಮಕ್ಕಳು ಎಂದು ಹಾಳಾಗಿ ಹೋಗುವರೋ?

ಅದೇ ದಿನ ಸಾಯಂಕಾಲಕ್ಕೆ ಬ್ರಾಹ್ಮಣನು ಬೀರಬಲ್ಲನನ್ನು ಕಂಡು, ನಡೆದ ಎಲ್ಲ ಸುದ್ದಿಯನ್ನೂ ತಿಳಿಸಿದನು.

ಬೀರ.—ನೀನು ಸುಮ್ಮನಿರು, ಗದ್ದಲ ಮಾಡಬೇಡ. ನಾನು ಅನುವು ದೊರೆತಾಗ ತಕ್ಕ ಹಂಚಿಕೆ ಮಾಡಿ ನಿನಗೆ ಸಲ್ಲತಕ್ಕ ಇನಾಮು ಕೊಡಿಸುವೆನು.

ಬ್ರಾಹ್ಮಣನು ಮನೆಗೆ ಹೋದನು. ಮುಂದೆ ೨ ತಿಂಗಳಾದ ಬಳಿಕ ಬಾದಶಹನು ಬೀರಬಲ್ಲನೊಡನೆ ಬೇಟೆಗೆ ಹೊರಟು, ಒಂದು ಕಾಡಿನಲ್ಲಿ ಸಿಬಿರ ಹಾಕಿಕೊಂಡು ನಿಂತನು. ಅಲ್ಲಿರುವಾಗ ಒಂದು ದಿನ ಮಾತಿಗೆ ಮಾತು ಹೊರಟು,

ಬಾದ.—ಬೀರಬಲ್ಲ! ನಿನ್ನ ಮೂಢಭಕ್ತಿಗೆ ಮಿತಿಯೇ ಇಲ್ಲೆಂದು ತೋರುತ್ತದೆ. ಧರ್ಮಕ್ಕೂ ಊಟಕ್ಕೂ ಸಂಬಂಧವೇನು? ನಮ್ಮಲ್ಲಿ ಊಟ ಮಾಡಬಾರದೇ?

ಬೀರ.—ಮಹಾರಾಜ! ಕ್ಷಮಿಸಿರಿ. ನಾವು ಬ್ರಾಹ್ಮಣರು, ಸತ್ವಾಹಾರಿಗಳು; ಆದ್ದರಿಂದ ತಮ್ಮಲ್ಲಿ ಉಣಲಾರೆವು.

ಬಾದ.—ಹಾಗಾದರೆ ನೀನು ಹೇಳಿದ ಅಡಿಗೆಯುನ್ನು ಮಾಡಿಸುವೆನು. ಊಟ ಮಾಡು.

ಬೀರ.—ಮಹಾರಾಜ! ಹಾಗಲ್ಲ. ನಮ್ಮ ಅಡಿಗೆಯುನ್ನು ಬ್ರಾಹ್ಮಣರೇ ಮಾಡಬೇಕು. ಅವರಲ್ಲಿರುವ ಚಿದ್ವಿದ್ಯುಚ್ಛಕ್ತಿಗಳು ಆಹಾರ ಜಲ ದ್ವಾರದಿಂದ ನಮ್ಮ ದೇಹವನ್ನು ಸೇರಿ, ನಮ್ಮ ಸತ್ವಗುಣವನ್ನು ಬಲಪಡಿಸುತ್ತವೆ.

ಬಾದ.—ಆಗಲಿ. ನಾನು ಈಹೊತ್ತು ಸಂಜೆಯ ಊಟವನ್ನು ನಿನ್ನ ಮನೆಯಲ್ಲಿ ಮಾಡುವೆನು. ಅಡಿಗೆ ಮಾಡಿಸು.

ಬೀರಬಲ್ಲನು ತನ್ನ ಸ್ಥಳಕ್ಕೆ ಹೋಗಿ ಮಧ್ಯಾಹ್ನದ ಊಟ ತೀರಿಸಿಕೊಂಡು, ತನ್ನ ಡೇರೆಯ ಹತ್ತರ ಒಂದು ಕಂಬವನ್ನು ನಿಲ್ಲಿಸಿ ಅದಕ್ಕೊಂದು ಕಟ್ಟಿಗೆಯುನ್ನು ಅಡ್ಡವಾಗಿ ಕಟ್ಟಿ, ಅದರ ತುದಿಗೆ ಅಕ್ಕಿನೀರು ಹಾಕಿದ ಒಂದು ತಪ್ಪೆಲೆಯುನ್ನು ತೂಗು ಹಾಕಿಸಿ, ಅದರ ಕೆಳಗೊಂದು ಒಲೆಯುನ್ನು ಮಾಡಿಸಿ, ಸಾಯಂಕಾಲಕ್ಕೆ ಆ ಒಲೆಯುನ್ನು ಊದುತ್ತ ಕೂಡ್ರಬೇಕೆಂದು ತನ್ನ ಅಡಿಗೆಯುವನಿಗೆ ಅಪ್ಪಣೆಮಾಡಿ, ತಾನು ಬಾದಶಹನ ಬಳಿಗೆ ಹೋದನು. ಮೂರು ಸಂಜೆಯ ಮುಂದೆ ಬಾದಶಹನು ಬೀರಬಲ್ಲನೊಡನೆ ಬಂದು ನೋಡಲು, ಅಡಿಗೆಯುವನು ಉಫ್, ಉಫ್ ಎಂದು ಒಲೆ ಊದುತ್ತ ಕುಳಿತಿದ್ದನು. ತಪ್ಪೆಲೆಯು ೧೦|೧೨ ಅಡಿ ಎತ್ತರದ ಮೇಲೆ ತೂಗಕಟ್ಟಿತ್ತು.

ಬಾದ.—ಬೀರಬಲ್ಲ! ನಿನ್ನ ಅಡಿಗೆಯುವನು ಹುಚ್ಚನೇನು?

ಬೀರ.—ಮಹಾರಾಜ! ಅದೇಕೆ?

ಬಾದ.—ಏನೋ ಹುಚ್ಚಪ್ಪ! ಇಷ್ಟು ಎತ್ತರವಿರುವ ತಪ್ಪೆಲೆಗೆ ಈ ಒಲೆಯು ಉರಿಯು ಜಳವು ಎಂದಾದರೂ ತಾಕಬಹುದೇ? ಸಾವಿರ ವರುಷ ಒಲೆ ಉರಿಸಿದರೂ ಅನ್ನವಾಗಲಾರದು.

ಬೀರ.—ಮಹಾರಾಜ! ನಮ್ಮಲ್ಲಿ ಒಂದು ಗಾದೆಯುಂಟು—ಯಥಾ ರಾಜಾ ತಥಾ ಪ್ರಜಾ—ಅರಸರು ನಂಬಿದ್ದನ್ನು ಜನರು ನಂಬುವರು. ಅರಸರ ವಿಶ್ವಾಸವೇ ಜನರ ವಿಶ್ವಾಸ.

ಬಾದ.—ಅದಾವ ಮರುಳ ಅರಸು ಹೀಗೆ ನಂಬುವವನು? ಅವನ ಅಯಿಲಿಗೆ (ಬುದ್ಧಿಗೇಡಿತನಕ್ಕೆ) ಎಣೆಯೇ ಇಲ್ಲ.

ಬೀರ.—ಮಹಾರಾಜ! ನಾನು ಹೇಳುವುದನ್ನು ತಾವೇ ಹೇಳಿದಿರಲ್ಲ!!

ಬಾದ.—ಅದು ಹೇಗೆ? ನಿನ್ನ ಮಾತು ನನಗೆ ತಿಳಿಯಲೊಲ್ಲದು.

ಬೀರ.—ಮಹಾರಾಜ! ಈಗ ೨ ತಿಂಗಳ ಹಿಂದೆ ತಮ್ಮ ಜಾಹಿರನಾಮೆಯಂತೆ ಒಬ್ಬ ಬಡ ಬ್ರಾಹ್ಮಣನು ತಮ್ಮ ತೋಟದ ಹೌದಿನಲ್ಲಿ ಇಡೀ ರಾತ್ರಿ ಕುಳಿತು, ಮರುದಿವಸ ಇನಾಮು ಕೇಳಲಿಕ್ಕೆ ಬಂದಾಗ ತಮ್ಮೊಬ್ಬ ಸರದಾರನು ಅರಮನೆಯ ದೀವಿಗೆಗಳ ಜಳವು ೫ ಮೈಲು ದೂರವಿರುವ ಹೌದಿಗೆ ತಗಲಿತೆಂದು ಹೇಳಿದ್ದರಿಂದ ತಾವು ಅದನ್ನು ನಂಬಿ, ಆ ಹಾರವನನ್ನು ಏನೂ ಕೊಡದೆ ಅಟ್ಟಿಸಲಿಲ್ಲವೇ? ತಾವು ನಂಬಿದ್ದನ್ನೇ ಈ ಅಡಿಗೆಯವನು ನಂಬಿರುವುದರಲ್ಲಿ ತಪ್ಪೇನು?

ಬಾದ.—ಅಹಹಾ, ಹಾ, ಹಾ!! ಬೀರಬಲ್ಲ, ನೀನು ಕಡುಜಾಣನು. ನನ್ನ ತಪ್ಪನ್ನು ಬಲುಜಾಣ್ಮೆಯಿಂದ ನನ್ನ ಉಡಿಯಲ್ಲಿ ಹಾಕಿದೆ. ಆ ದಡ್ಡ ಮುನೀಮಖಾನನು ಹಾಗೆ ಹೇಳಿದ್ದರಿಂದ, ನಾನೇನೋ ಅವನ ಮಾತಿನಲ್ಲಿ ವಿಶ್ವಾಸವಿಟ್ಟು, ಪಾಪ ಆ ಬಡ ಬ್ರಾಹ್ಮಣನನ್ನು ಹಾಗೆಯೇ ಕಳುಹಿಸಿದೆನು. ಅದು ಸರ್ವಥಾ ನನ್ನ ತಪ್ಪೇ ಸರಿ. ಆ ತಪ್ಪು ದಂಡಕ್ಕೋಸ್ಕರ ಹೆಚ್ಚಿಗೆ ೫೦೦೦ ಮೊಹರುಗಳನ್ನು ಕೊಡುವೆನು. ನಡೆ, ಆ ಅಡಿಗೆಯವನಿಗೆ ಸರಿಯಾಗಿ ತಪ್ಪೆಲೆಯನ್ನು ಒಲೆಯ ಮೇಲಿಟ್ಟು ಅನ್ನ ಮಾಡಲಿಕ್ಕೆ ಹೇಳು.

ಬಾದಶಹನು ಊಟಮಾಡಿ ತನ್ನ ಸಿಬಿರಕ್ಕೆ ಹೋಗಿ, ಬೀರಬಲ್ಲನ ಜಾಣ್ಮೆಯನ್ನು ಕೊಂಡಾಡುತ್ತ ಇರುಳು ಕಳೆದು, ಮರುದಿವಸ ಬೆಳಿಗ್ಗೆ ರಾಜಧಾನಿಗೆ

ಹೋಗಿ ಆ ಬ್ರಾಹ್ಮಣನನ್ನು ಕರೆಯಿಸಿ, ಅವನಿಗೆ ೧೦,೦೦೦ ಮೊಹರು ಕೊಟ್ಟು ಉಡುಗೊರೆಯನ್ನಿತ್ತು ಸನ್ಮಾನಮಾಡಿ ಮನೆಗೆ ಕಳುಹಿ, ಬೀರಬಲ್ಲನ ಜಾಣತನವನ್ನೂ ಸ್ವಾಮಿಭಕ್ತಿಯನ್ನೂ ಪರಿಪರಿಯಿಂದ ಹೊಗಳಿದನು.

# ಪರಿಶಿಷ್ಟ (ಅ)

## ಬೀರಬಲ್ಲನ ಆಚಾರವಿಚಾರಗಳು

### ೧. ಆಕಳಿನ ಉಪಯೋಗ

ಒಂದು ದಿವಸ ಅಕ್ಬರಬಾದಶಹನ ಓಲಗದಲ್ಲಿ ಆಕಳಿನ ಉಪಯೋಗದ ಬಗ್ಗೆ ಮಾತು ಹೊರಟಿತು. ಆಗ ಒಬ್ಬ ಮುಸಲ್ಮಾನ ಸರದಾರನು—ಆಕಳಿನ ಹಾಲು ಆರೋಗ್ಯವನ್ನು ಹೆಚ್ಚಿಸುವುದೆಂತಲೂ ಅದರ ಮಾಂಸ ಭಕ್ಷಣದಿಂದ ದೇಹಕ್ಕೆ ಅಪಾಯವೆಂತಲೂ ತಮ್ಮ ಮತಗ್ರಂಥದಲ್ಲಿ ಬರೆದಿರುತ್ತದೆಂದು ಹೇಳಿದನು. ಅದನ್ನು ಕೇಳಿದ ಕೂಡಲೆ ಬೀರಬಲ್ಲನು—ಆಕಳ ಹಾಲು ಬಹಳ ಆರೋಗ್ಯಕರವಾದ್ದರಿಂದ ನಿಮ್ಮ ಮತಗ್ರಂಥದ ಆರಂಭದಲ್ಲಿ ಬಕರ (ಪಾರ್ಸಿಶಬ್ದ=ಆಕಳು)ದ ಚಿತ್ರವನ್ನು ಬರೆದಿದ್ದಾರೆ ಎಂದನು. ಈ ಅಭಿಮಾನದ ಮಾತನ್ನು ಕೇಳಿ ಬಾದಶಹನು ಸಂತುಷ್ಟನಾದನು.

### ೨. ವಿಶ್ವಾಸಃ ಫಲದಾಯಕಃ (ವಿಶ್ವಾಸದಿಂದಲೇ ಫಲವು)

ಒಂದು ದಿನ ಬಾದಶಹನು ಒಡ್ಡೋಲಗದಲ್ಲಿ ಕುಳಿತಾಗ ದೇವರು ಹೆಚ್ಚೋ ವಿಶ್ವಾಸ ಹೆಚ್ಚೋ ಎಂಬ ಪ್ರಶ್ನವು ಹೊರಟಿತು. ಆಗ ಸಭಿಕರೆಲ್ಲರೂ ದೇವರು ಹೆಚ್ಚೆಂದು ಏಕಕಂಠವಾಗಿ ನುಡಿದರು. ಬೀರಬಲ್ಲನು ಸುಮ್ಮನಿದ್ದುದನ್ನು ಕಂಡು ಬಾದಶಹನು ಅವನ ಕಡೆಗೆ ನೋಡಿದನು.
ಬೀರ.—ಖುದಾವಂದ್, ನಮ್ಮಂತಹ ಮನುಷ್ಯರಿಗೆ ದೇವರು ಕಾಣಿಸುವುದು ಅಸಂಭವ. ಆದ್ದರಿಂದ ಬ್ರಾಹ್ಮಣರು ಕಲ್ಲುಮಣ್ಣು ಬಂಗಾರ ಬೆಳ್ಳಿ ಹಿತ್ತಾಳಿ ತಾಮ್ರಗಳಿಂದ ಮಾಡಿದ ಮೂರ್ತಿಗಳಲ್ಲಿ ದೇವತಾಹ್ವಾನ ಮಾಡಿ,

ವಿಶ್ವಾಸದಿಂದ ಪೂಜಿಸುತ್ತಾರೆ. ಆದ್ದರಿಂದ ವಿಶ್ವಾಸವೇ ನಮಗೆ ಹೆಚ್ಚಿನ ದೆಂದು ತೋರುತ್ತದೆ. **ಬಾದ.**—ವಿಶ್ವಾಸವು ಹೇಗೆ ಹೆಚ್ಚಿನದಾದೀತು? ದೇವರು ಸರ್ವಶಕ್ತನಲ್ಲವೇ? **ಬೀರ.**—ಅಹುದು ಜೀಯಾ, ದೇವರು ಸರ್ವ ತಂತ್ರಸ್ವತಂತ್ರನು. ನಿರ್ಮಿಸಲೂ ನಾಶಮಾಡಲೂ ಅವನಿಗೆ ಶಕ್ತಿಯುಂಟು. ಆದರೆ ಭಕ್ತಿವಿಶ್ವಾಸಗಳಿಲ್ಲದೆ ಅವನು ದೊರೆಯುವ ಬಗೆ ಹೇಗೆ? ಆದ್ದರಿಂದ ನಮಗೆ ವಿಶ್ವಾಸವೇ ಹೆಚ್ಚಿನದು. **ಬಾದ.**—ನಿನ್ನ ಹೇಳಿಕೆ ನನಗೆ ಚೆನ್ನಾಗಿ ತಿಳಿಯಲೊಲ್ಲದು. ನಿನ್ನ ಅಭಿಪ್ರಾಯವನ್ನು ಅನುಭವದಿಂದ ಸಿದ್ಧ ಮಾಡಿ ತೋರಿಸು. **ಬೀರ.**—ಯಾಕಾಗಲೊಲ್ಲದು. ಒಂದು ವರ್ಷದ ಅವಧಿಯನ್ನು ಕೊಟ್ಟರೆ, ತಮ್ಮ ಅನುಭವಕ್ಕೆ ತಂದುಕೊಡುವೆನು. **ಬಾದ.**—ನಿನಗೆ ಬೇಕಾದ ಕಾಲವನ್ನೂ ಹಣವನ್ನೂ ಕೊಡುವೆನು. ಪ್ರತ್ಯಕ್ಷ ಮಾಡಿ ತೋರಿಸು. **ಬೀರ.**—ಮಹಾರಾಜ! ಹಾಗೇ ಮಾಡುವೆನು.

ಈ ಸಂವಾದವಾದ ಮೂರುನಾಲ್ಕು ದಿವಸಗಳಲ್ಲಿಯೇ ಬೀರಬಲ್ಲನು ಬಾದಶಹನದೊಂದು ಹಳೆ ಮುಚ್ಚಿಯನ್ನು ತೆಗೆದುಕೊಂಡು, ಅದಕ್ಕೆ ರೇಶಿಮಿಯ ವಸ್ತ್ರವನ್ನು ಚೆನ್ನಾಗಿ ಸುತ್ತಿ, ಊರ ಹೊರಗೆ ರಮ್ಯವಾದ ಒಂದು ಸ್ಥಳದಲ್ಲಿ ಅದನ್ನು ಹುಗಿಸಿ, ಅದರ ಮೇಲೆ ಒಂದು ಸುಂದರವಾದ ಗೋರಿಯನ್ನು ಕಟ್ಟಿಸಿ, ಆ ಗೋರಿಯ ಉತ್ಸವಪೂಜೆಗಳ ಬಗ್ಗೆ ಒಬ್ಬ ಫಕೀರನನ್ನು ನೇಮಿಸಿದನು. ಆ ಗೋರಿಗೆ 'ಎಕೀನಶಹಪೀರ'ನೆಂಬ ಸಾಧುಪುರುಷನ ಗೋರಿಯೆಂದು ಹೆಸರಿಟ್ಟು, ಊರಲ್ಲೆಲ್ಲ ಅದನ್ನು ಪ್ರಸಿದ್ಧಪಡಿಸಿದನು. ೪।೫ ತಿಂಗಳಲ್ಲಿಯೇ ಎಷ್ಟೋ ಜನರು ಆ ಗೋರಿಯ ಸೇವೆಯಿಂದ ತಮ್ಮ ಹರಿಕೆಗಳೆಲ್ಲ ಪೂರ್ಣವಾದವೆಂದು ಹೇಳತೊಡಗಿದರು. ಆ ಗೋರಿಯ ಸತ್ಯತೆಯು ಬಾದಶಹನ ಕಿವಿ ಮುಟ್ಟಿತು. ಸರದಾರರೆಲ್ಲ ಎಕೀನಶಹಪೀರನನ್ನು ಹೊಗಳಲಾರಂಭಿಸಿದರು. ಕೆಲವರಂತೂ ಹುಮಾಯುನ ಬಾದಶಹನು ಆ ಪೀರನ ಹರಕೆಯಿಂದಲೇ ಮರಳಿ ರಾಜ್ಯ ಸಂಪಾದಿಸಿದನೆಂದು ಹೇಳ ತೊಡಗಿದರು!!

ಜನ ಮರುಳೋ ಜಾತ್ರೆ ಮರುಳೊ ಸೆಂಟಕ್ಕೆ ಮರುಳು, ಶಂಕರಲಿಂಗ ಎಂಬ ನಾಣ್ಣುಡಿಯಂತೆ ಬಾದಶಹನಿಗೆ ಆ ಗೋರಿಯಲ್ಲಿ ವಿಶ್ವಾಸ ಹುಟ್ಟಿತು. ಆದ್ದರಿಂದ ಅವನು ಬೀರಬಲ್ಲ ಮುಂತಾದ ಕೆಲವು ಸರದಾರ

ರೊಡನೆ ಪಾದಚಾರಿಯಾಗಿ ಆ ಗೋರಿಯ ದರ್ಶನಕ್ಕೆ ಹೋಗಿ, ತನ್ನ ಮಗನಾದ ಸೇಲಿಮನು ಚಿತ್ತೂರಿನ ಅರಸನಾದ ಪ್ರತಾಪಸಿಂಹನನ್ನು ಗೆದ್ದರೆ, ಆ ಗೋರಿಯ ಮೇಲೆ ಸಂಗಮರವರಿ ಕಲ್ಲಿನ (ಅಮೃತಶಿಲೆಯ) ಮಸೀದಿಯನ್ನು ಕಟ್ಟಿಸುವೆನೆಂದು ಬೇಡಿಕೊಂಡನು. ಕರ್ಮಧರ್ಮಸಂಯೋಗದಿಂದ ಅದೇ ಸಮಯಕ್ಕೆ ಒಬ್ಬ ಸವಾರನು ಬಂದು ಪ್ರಣಾಮ ಮಾಡಿ, “ಬಾದಶಹರಿಗೆ ಜಯವಾಗಲಿ. ರಾಣಾಪ್ರತಾಪಸಿಂಗನು ಮರೆಹೊಕ್ಕುದರಿಂದ ಯುವರಾಜರು ಅವನನ್ನು ಕರೆದುಕೊಂಡು ಬೇಗನೆ ಸನ್ನಿಧಾನಕ್ಕೆ ಬರುವರು” ಎಂದು ಹೇಳಿದನು. ಈ ಸುದ್ದಿಯನ್ನು ಕೇಳಿದ ಕೂಡಲೆ ಬಾದಶಹನ ಆನಂದವು ಮಿತಿಮೀರಿತು. ಅವನು ಬೀರಬಲ್ಲನ ಕಡೆಗೆ ನೋಡಿ “ಬೀರಬಲ್ಲ, ನೋಡು ದೇವರು ಹೆಚ್ಚಿನವನಲ್ಲವೇ? ದೇವಾಂಶನಾದ ಎಕೀನಶಹನು ನಾನು ಬೇಡಿಕೊಳ್ಳುವಷ್ಟರಲ್ಲಿಯೇ ನನ್ನ ಮನೋರಥವನ್ನು ಪೂರ್ಣಮಾಡಿದನು !!”

**ಬೀರ.**—ಮಹಾರಾಜ! ತಾವು ಎಕೀನಶಹನನ್ನು ಎಲ್ಲಿ ನೋಡಿರುತ್ತೀರಿ? ಎಕೀನಶಹನು ದೇವತಾ ಪುರುಷನೆಂತಲೂ ಅವನ ಗೋರಿಯು ಇದೇ ಎಂತಲೂ ಇಟ್ಟ ವಿಶ್ವಾಸವೇ ತಮಗೆ ಫಲಕೊಟ್ಟಿತು. ಆದ್ದರಿಂದ ವಿಶ್ವಾಸವೇ ಹೆಚ್ಚಿನದು.

**ಬಾದ.**—ಇದೇನು ಅಬದ್ಧವಾದ ಮಾತು. ಎಕೀನಶಹನು ದೇವತಾ ಪುರುಷನೆಂದು ನೀನು ಒಡಂಬಡುವುದಿಲ್ಲವೊ?

**ಬೀರ.**—ಅವನು ದೇವತಾ ಪುರುಷನಿರಬಹುದು ಅಥವಾ ಇಲ್ಲದಿರಬಹುದು. ಅವನು ದೇವತಾಪುರುಷನೆಂಬ ವಿಶ್ವಾಸವೇ ನಮಗೆ ಮುಖ್ಯವಾದುದು.

**ಬಾದ.**—ನೀನು ಈ ಗೋರಿಗೆ ಸಾಷ್ಟಾಂಗ ನಮಸ್ಕಾರ ಹಾಕಿ ಬೇಡಿಕೊ.

**ಬೀರ.**—ದೇವರು ಸರ್ವಾಂತರ್ಯಾಮಿಯಾದ್ದರಿಂದ ಈ ಗೋರಿಯು ದೇವರೆಂದು ವಿಶ್ವಾಸವಿಟ್ಟು ನಾನು ಪೊಡಮಡುತ್ತೇನೆ.

**ಬಾದ.**—ನೀನು ಹಟಮಾರಿಯಾಗಿ ಕಾಣಿಸುತ್ತೀ. ದೇವರು ಹೆಚ್ಚೆಂದು ಏಕೆ ಒಪ್ಪುವುದಿಲ್ಲ?

ಬೀರ.—ದೇವರು ಎಲ್ಲರಿಗಿಂತ ಶ್ರೇಷ್ಟನೆಂಬ ಬಗ್ಗೆ ಸಂಶಯುವೇ ಇಲ್ಲ. ಮನುಷ್ಯರಾದ ನಮಗೆ ದೇವರಲ್ಲಿಡುವ ವಿಶ್ವಾಸವೇ ಹೆಚ್ಚಿನದೆಂದು ನಾನು ತಮಗೆ ಪ್ರತ್ಯಕ್ಷವಾಗಿ ತೋರಿಸುವೆನು.

ಹೀಗೆ ಹೇಳಿ ಬೀರಬಲ್ಲನು ತನ್ನ ಆಳುಗಳಿಗೆ ಆ ಗೋರಿಯಿದ್ದ ಹಾಸು ಗಲ್ಲನ್ನು ಎತ್ತಿಡಲಿಕ್ಕೆ ಹೇಳಿದನು. ಅವರು ಹಾಗೆ ಮಾಡಿದ ಕೂಡಲೆ ಬೀರಬಲ್ಲನು ಅದರ ಕೆಳಗಿದ್ದ ರೇಶಿಮಿಯ ಗಂಟನ್ನು ಬಿಚ್ಚಿ ಬಾದಶಹನಿಗೆ ಅವನ ಹಳೆ ಮಚ್ಚಿಯನ್ನು ತೋರಿಸಿ, ಖುದಾವಂದ, ಈಗಲಾದರೂ ವಿಶ್ವಾ ಸವು ಹೆಚ್ಚಿನದೆಂದು ಒಡಂಬಡುವಿರೊ? ಎನ್ನಲು ಬಾದಶಹನು ನಿರುತ್ತರ ನಾಗಿ ಬೀರಬಲ್ಲನೊಡನೆ ಮನೆಗೆ ತೆರಳಿದನು.

## ೩. ಸ್ವಧರ್ಮೇ ನಿಧನಂ ಶ್ರೇಯಃ ಪರಧರ್ಮೋ ಭಯಾವಹಃ

(ತನ್ನ ಧರ್ಮದಲ್ಲೇ ತಾನು ಸಾಯುುವುದು ಲೇಸು. ಪರಧರ್ಮ ಸ್ವಿಕಾರದಿಂದ ಕೇಡುಂಟಾಗುವುದು).

ಒಂದು ದಿವಸ ಬಾದಶಹ ಬೀರಬಲ್ಲರು ತಿರುಗಾಡಲಿಕ್ಕೆ ಹೋದಾಗ ಯಮುನೆಯ ದಂಡೆಯಲ್ಲಿ ಸೂರ್ಯಾಸ್ತವಾದ್ದರಿಂದ, ಬೀರಬಲ್ಲನು ಪೋಷಾ ಕನ್ನು ತೆಗೆದು ಕಾಲು ತೊಳೆದುಕೊಂಡು, ಸಂಧ್ಯಾವಂದನೆಯನ್ನು ತೀರಿಸಿ ಕೊಂಡು, ಬಾದಶಹನೊಡನೆ ತಿರುಗಿ ಊರಕಡೆಗೆ ಹೊರಟನು. ಹಾದಿ ಯಲ್ಲಿ ಬಾದಶ್ಹಹ—ಬೀರಬಲ್ಲ, ನನಗೆ ಸಂಧ್ಯಾವಂದನೆಯನ್ನು ಕಲಿಸು.

ಬೀರ. — ಬ್ರಾಹ್ಮಣ-ಕ್ಷತ್ರಿಯರು ಮಾತ್ರ ಸಂಧ್ಯಾವಂದನೆಯನ್ನು ಕಲಿಯುಬೇಕೆಂದು ನಿಯಮವಿದೆ.

ಬಾದ.—ಹಾಗಾದರೆ ನನ್ನನ್ನು ಬ್ರಾಹ್ಮಣನನ್ನಾಗಿ ಮಾಡು.

ಬೀರ.—ಹಾಗೆ ಮಾಡಲಿಕ್ಕೆ ಆಗುತ್ತದೋ ಇಲ್ಲವೋ ಎಂಬ ಬಗ್ಗೆ ಬಲ್ಲವರನ್ನು ಕೇಳಿ ತಮಗೆ ತಿಳಿಸುವೆನು.

ಮುಂದೆ ೨-೩ ದಿವಸ ಕಳೆದುಹೋದ ಬಳಿಕ ಬೀರಬಲ್ಲನು ೮-೧೦ ಜನ ಕುಂಬಾರರನ್ನು ಕರಿಸಿ, ಅವರಿಗೆ ಇಂತಹದೊಂದು ದಿವಸ ನೀವೆಲ್ಲರೂ

ನಿಮ್ಮ ನಿಮ್ಮ ಕತ್ತೆಗಳ ಮೆಯ್ಯನ್ನು ಮಳಲು ಹಚ್ಚಿ ಕಸುವಿನಿಂದ ತೊಳೆಯು ತ್ತಿರಿರಿ. ಬಾದಶಹನು ಏನು ಮಾಡುತ್ತೀರೆಂದು ಕೇಳಿದರೆ, ಕತ್ತೆಗಳನ್ನು ಕುದುರೆಗಳಾಗಿ ಮಾಡಲಿಕ್ಕೆ ಯತ್ನಿಸುತ್ತೇವೆ ಎಂದು ಹೇಳಿರಿ, ಎಂದು ಹೇಳಿದನು. ಗೊತ್ತಾದ ದಿವಸ ಅವರು ಹಾಗೆಯೇ ಹೇಳಲು,

**ಬಾದ.**—ಬೀರಬಲ್ಲ, ಇವರು ಎಂತಹ ಮೂರ್ಖರು! ಕತ್ತೆಗಳು ಕುದುರೆಗಳು ಎಂದಾದರೂ ಆಗಬಹುದೇ?

**ಬೀರ.**—ಪೃಥ್ವೀನಾಥ, ತಮ್ಮ ಮಾತು ನಿಜವಾಗಿರುತ್ತದೆ. ಇವರು ಮಾಡುವುದು ಶುದ್ಧ ಮೂರ್ಖತನ. ಅದರಂತೆಯೇ ಮುಸಲ್ಮಾನರನ್ನು ಬ್ರಾಹ್ಮಣರನ್ನಾಗಿ ಮಾಡುವುದೂ ಹುಚ್ಚುತನವೆಂದು ಬಲ್ಲವರು ಹೇಳುತ್ತಾರೆ.

ಈ ಮಾತನ್ನು ಕೇಳಿ ಬಾದಶಹನು ಸುಮ್ಮನಾದನು. ಮುಂದೆ ಅವನು ತನ್ನನ್ನು ಬ್ರಾಹ್ಮಣನನ್ನಾಗಿ ಮಾಡೆಂದು ಎಂದೂ ಹೇಳಲಿಲ್ಲ.

## ೪. ಬ್ರಾಹ್ಮಣರ ಶ್ರೇಷ್ಠತ್ವ

**ಬಾದ.**—ಬೀರಬಲ್ಲ! ಬ್ರಾಹ್ಮಣರಿಗೆ ಅತ್ಯವಶ್ಯವಾದ ಮಂತ್ರವು ಯಾವುದು? ಮತ್ತು ಅವರಿಗೆ ಅತಿಪವಿತ್ರವಾದ ಪ್ರಾಣಿಯಾವುದು?

**ಬೀರ.**—ಗಾಯತ್ರೀ ಮಂತ್ರವು ಅತ್ಯವಶ್ಯವಾದುದು, ಗೋಮಾತೆಯು ಅತಿಪವಿತ್ರವಾದ ಪ್ರಾಣಿಯು.

**ಬಾದ.**—ಹಾಗಾದರೆ ಬ್ರಾಹ್ಮಣರು ಆಕಳಿನ ತೊಗಲಿನ ಮಚ್ಚಿಗಳನ್ನು ಏಕೆ ಮೆಟ್ಟುತ್ತಾರೆ?

**ಬೀರ.**—ಬ್ರಾಹ್ಮಣರ ಪಾದಗಳು ತೀರ್ಥಸಮಾನವಾದ್ದರಿಂದ ಅವರು ಅಂತಹ ಪಾದರಕ್ಷೆಗಳನ್ನು ಮೆಟ್ಟಿ, ಆ ಜೀವಿಗಳನ್ನು ಉದ್ಧರಿಸುತ್ತಾರೆ.

ಈ ಯುಕ್ತಿವಾದವನ್ನು ಕೇಳಿ ಬಾದಶಹನು ಸಂತುಷ್ಟನಾದನು.

## ೫. ಮಂತ್ರಾಕ್ಷತಾ ಭಸ್ಮಗಳು

ಒಂದು ದಿವಸ ಬೀರಬಲ್ಲನಿಲ್ಲದಾಗ ಬಂಗಾಲದ ಒಬ್ಬ ಬ್ರಾಹ್ಮಣೋತ್ತಮನು ಬಾದಶಹನ ಬಳಿಗೆ ಬಂದು, ಅವನಿಗೆ ಮಂತ್ರಾಕ್ಷತಾ ಭಸ್ಮಗಳನ್ನು

ಪ್ರಸಾದವಾಗಿ ಕೊಟ್ಟು ಹರಸಿದನು. ಭಸ್ಮವನ್ನು ನೋಡಿ ಬಾದಶಹನ ಮನಸ್ಸಿನಲ್ಲಿ ಏನೋ ವಿಕಲ್ಪ ಬಂದುದರಿಂದ, ಅವನು ಆ ಬ್ರಾಹ್ಮಣನನ್ನು ದೂಡಿ ಹಾಕಿಸಿದನು. ಬೀರಬಲ್ಲನಿಗೆ ಈ ಸಂಗತಿಯು ತಿಳಿಯಲು, ಅವನು ಆ ಬ್ರಾಹ್ಮಣನನ್ನು ಸಮಾಧಾನಗೊಳಿಸಿ ದರಬಾರಿಗೆ ಕರೆದುಕೊಂಡು ಹೋಗಿ, "ಖುದಾವಂದ್, ಈ ಬ್ರಾಹ್ಮಣನಿಗೆ ಮಾಡಿದ ಅಪಮಾನದಿಂದ ತಮ್ಮ ಅಪಕೀರ್ತಿಯು ದೇಶದಲ್ಲೆಲ್ಲಾ ಹಬ್ಬುವುದು. ಆದ್ದರಿಂದ ಅವನನ್ನು ಸಂತೈಸಿ ತಿರುಗಿ ಕರೆದುಕೊಂಡು ಬಂದಿರುತ್ತೇನೆ. ಖಾವಂದರವರ ಅಪ್ಪಣೆಯಂತೆ ನಡೆಯುವೆನು."

ಬಾದ. — ಇವನು ನನಗೆ ಬೂದಿಯನ್ನು ಕೊಟ್ಟುದರಿಂದ ನನ್ನ ರಾಜ್ಯವು ನಾಶವಾಗಲೆಂದು ಬಯಸುತ್ತಾನೆಂದೆಣಿಸಿ, ನಾನು ಇವನನ್ನು ಹೊರಗೆ ಹಾಕಿಸಿದೆನು.

ಬೀರ. — ಪ್ರಭುಗಳೇ ಅದು ಹಾಗಲ್ಲ. ಆ ಬ್ರಾಹ್ಮಣನು ತಂದುದು ಮಹಾಕಾಳಿಯ ಪ್ರಸಾದವು. ಮಂತ್ರಾಕ್ಷತೆಗಳು ತಮ್ಮ ರಾಜ್ಯದಲ್ಲಿ ಧನ ಧಾನ್ಯಾಭಿವೃದ್ಧಿಯ ಸೂಚಕಗಳಾಗಿರುತ್ತವೆ. ಭಸ್ಮವು ತಮ್ಮ ಶತ್ರುಗಳ ನಾಶವನ್ನು ಸೂಚಿಸುತ್ತದೆ.

ಬಾದ. — ಹೀಗೋ? ಅರೇ ಅಲ್ಲಾ! ತಪ್ಪು ತಿಳಿವಳಿಕೆಯಾಯಿತು. ಆ ಬ್ರಾಹ್ಮಣನಿಗೆ ೨೦೦ ರೂ. ಸಂಭಾವನೆ ಕೊಟ್ಟು ಅವನನ್ನು ಸನ್ಮಾನಿಸಿ ಕಳುಹಿಸು.

ಬೀರಬಲ್ಲನು ಅಪ್ಪಣೆಯಂತೆ ಮಾಡಿದನು.

## ೬. ಬೀರಬಲ್ಲನ ಜಾತಿಯನ್ನು ಕೆಡಿಸಲಿಕ್ಕೆ ಮಾಡಿದ ವ್ಯರ್ಥಪ್ರಯತ್ನವು

ಅಕ್ಬರಬಾದಶಹನ ದರಬಾರಿನಲ್ಲಿ ಬೀರಬಲ್ಲನೊಬ್ಬನೇ ಬ್ರಾಹ್ಮಣನಾದ್ದರಿಂದ, ಮುಸಲ್ಮಾನ ಸರದಾರರು ಅವನನ್ನು ಪರಿಪರಿಯಿಂದ ಪೀಡಿಸುತ್ತಿದ್ದರು. ಬೀರಬಲ್ಲನು ಮುಸಲ್ಮಾನನಾದರೆ ಈ ತೊಂದರೆಯೆಲ್ಲ ತಪ್ಪುವದೆಂದೆಣಿಸಿ, ಬಾದಶಹನು ದಿನಾಲು ಅವನನ್ನು ಊಟಕ್ಕೆ ಕರೆಯುತ್ತಿದ್ದನು.

ಆದರೆ ಬೀರಬಲ್ಲನು ಏನಾದರೂ ಒಂದು ನೆವನ ಹೇಳಿ, ತಪ್ಪಿಸಿಕೊಳ್ಳುತ್ತಿದ್ದನು. ಒಂದು ದಿವಸ ಬೀರಬಲ್ಲನು ಯಾವುದೋ ಒಂದು ವಿಚಾರದಲ್ಲಿ ಮಗ್ನನಾಗಿದ್ದಾಗ, ಬಾದಶಹನು ಅವನನ್ನು ಊಟಕ್ಕೆ ಕರೆದನು. ಬೀರಬಲ್ಲನು ಆ ಆಮಂತ್ರಣವನ್ನು ಸ್ವೀಕರಿಸಿದನು. ಮುಂದೆ ಸ್ವಲ್ಪ ಹೊತ್ತಿನ ಮೇಲೆ ತಾನು ಮಾಡಿದ ತಪ್ಪು ಲಕ್ಷ್ಯಕ್ಕೆ ಬರಲು, ಅವನಿಗೆ ಬಹಳ ಪಶ್ಚಾತ್ತಾಪವಾಯಿತು. ಆದರೆ ಮಾಡುತ್ತಾನೇನು? ಮಿಂಚಿ ಹೋದ ಮಾತಿಗೆ ಚಿಂತಿಸಿ ಫಲವೇನು? "ಸ್ವಧರ್ಮೇ ನಿಧನಮ್ ಶ್ರೇಯಃ" ಎಂದು ಭಗವದಾಜ್ಞೆಯಿದ್ದು, ನಾನು ಈಗ ಧರ್ಮಭ್ರಷ್ಟನಾಗುತ್ತೇನಲ್ಲ!! ನನ್ನ ಬಾಳಿಕೆಯಿಂದ ಪ್ರಯೋಜನವೇನು? ಆತ್ಮಹತ್ಯ ಮಾಡಿಕೊಳ್ಳಲೋ? ಬೇನೆಯ ಸೋಗು ಹಾಕಲೊ? ಏನಾದರೂ ಬೇರೆ ಯುಕ್ತಿಮಾಡಿ ಪಾರಾಗಲೊ? ಈ ಬಗೆಯ ವಿಚಾರಗಳಲ್ಲಿ ಮುಳುಗಿ, ಇಡೀ ರಾತ್ರಿ ಕಣ್ಣಿಗೆ ಕಣ್ಣು ಹಚ್ಚಲಿಲ್ಲ.*!! ಆದರೂ ಏನೂ ಉಪಾಯ ತೋರಲಿಲ್ಲ.

ಯಾವುದಾದರೊಂದು ದೊಡ್ಡ ವಿಚಾರದಲ್ಲಿ ಮುಳುಗಿದವರ ತಲೆಯಲ್ಲಿ ಹೊಸ ವಿಚಾರಗಳು ಬರುವುದೇ ಇಲ್ಲ. ಅವೇ ಅವೇ ವಿಚಾರಗಳು ತಿರುಗಿ ತಿರುಗಿ ಬರುತ್ತವೆ. ಆದ್ದರಿಂದ ಇಂತಹ ಸಂದರ್ಭಗಳಲ್ಲಿ ಹೊಸ ಹೊಸ ಜನರ ಭೆಟ್ಟಿಯಾಗುವುದೂ ಸ್ಥಳತ್ಯಾಗ ಮಾಡುವುದೂ ಆಟನೋಟ ಚಮತ್ಕಾರಗಳಿಗೆ ಹೆಚ್ಚು ಲಕ್ಷ್ಯ ಕೊಡುವುದೂ ಉತ್ತಮ ಉಪಾಯಗಳೆಂದು ಬಲ್ಲವರು ಹೇಳುತ್ತಾರೆ. ಇಂತಹ ಸಾಧನಗಳಿಂದ ಮನಸ್ಸಿನ ಉದ್ವಿಗ್ನತೆಯು ಕಡಮೆಯಾದ ಬಳಿಕ, ಮನಸ್ಸು ಕೆಲಮಟ್ಟಿಗೆ ಶಾಂತತೆಯನ್ನು ಹೊಂದುವುದು. ಮನಶ್ಶಾಂತಿಯಿಂದಲೇ ಹೊಸ ವಿಚಾರವು ಹುಟ್ಟಲಿಕ್ಕೆ ಅನುಕೂಲ್ಯ ದೊರೆಯುವುದು.

ಇಡೀ ಇರುಳನ್ನೂ ಮರುದಿವಸದ ೪।೫ ತಾಸು ಹೊತ್ತನ್ನೂ ಬೀರಬಲ್ಲನು ದುಗುಡದಲ್ಲಿಯೇ ಕಳೆದನು!! ಏನೂ ಪ್ರಯೋಜನವಾಗಲಿಲ್ಲ. ಬಾದಶಹನಿಂದ ಊಟಕ್ಕೆ ಕರೆ ಬಂತು. ಶ್ರೀಶಂಕರನೇ ಈ ಸಂಕಟದಿಂದ ಪಾರು ಮಾಡಲಿ. ದೇವರು ಮಾಡಿಸಿದ್ದಾಗಲಿ. ನಾನಂತೂ ಪ್ರಾಣ

* ನಿದ್ದೆ ಮಾಡಲಿಲ್ಲ.

ಹೋದರೂ ನನ್ನ ಧರ್ಮವನ್ನು ಬಿಡುವುದಿಲ್ಲ, ಎಂದು ನಿಶ್ಚಯಿಸಿ ಪೋಷಾಕು ಹಾಕಿಕೊಂಡು, ಅರಮನೆಯ ದಾರಿ ಹಿಡಿದನು. ಹೋಗುವಾಗ ದಾರಿಯಲ್ಲಿ ಎರಡು ಮಗ್ಗಲಿಗೂ ಲಕ್ಷ್ಯಪೂರ್ವಕವಾಗಿ ನೋಡುತ್ತ ನಡೆದನು. ಒಂದು ಅಂಗಡಿಯಲ್ಲಿ ಒಬ್ಬ ಸೊನ್ನಗಾರನು ವರಾಹಕೇಶದಿಂದ ಚಿನ್ನದ ಒಡವೆಯನ್ನು ಬೆಳಗುತ್ತಿದ್ದನು; ಅದನ್ನು ನೋಡಿದ ಕೂಡಲೆ ಅವನು ಹಿಗ್ಗಿದನು. ಆ ವರಾಹಕೇಶವನ್ನು ಬೆಲೆಕೊಟ್ಟು ಕೊಂಡು, ನಿಶ್ಚಿಂತನಾಗಿ ರಾಜಮಂದಿರವನ್ನು ಸೇರಿದನು.

ಬೀರಬಲ್ಲನು ಊಟಕ್ಕೆ ಬರುವನೆಂಬ ಸಂತೋಷದಿಂದ ಬಾದಶಹನು ನೂರಾರು ಜನ ಅಮೀರರನ್ನು ಭೋಜನಕ್ಕೆ ಕರೆದಿದ್ದನು. ಬೀರಬಲ್ಲನು ಬಂದುದನ್ನು ನೋಡಿ ಎಲ್ಲರಿಗೂ ಸಂತೋಷವಾಯಿತು. ಬಾದಶಹನ ಆನಂದವು ಉಕ್ಕೇರಿತು. ಎಲ್ಲರೂ ಬೀರಬಲ್ಲನನ್ನು ಹೊಗಳಿದರು. ಅವನ ಪುಣ್ಯಕ್ಕೆ ಎಣೆಯಿಲ್ಲದಾಯಿತು. ಊಟದ ಪಾತ್ರೆಗಳು ಸಿದ್ಧವಾದವೆಂದು ವರದಿ ಬಂತು. ಬಾದಶಹನು ಬೀರಬಲ್ಲನನ್ನು ಊಟಕ್ಕೆ ಎಬ್ಬಿಸಿದನು.

ಬೀರ. — ಪೃಥ್ವೀನಾಥ! ನನ್ನದೊಂದು ಅರಿಕೆಯುಂಟು. ಊಟಕ್ಕೆ ಕೂಡ್ರುವುದಕ್ಕಿಂತ ಮೊದಲು ನಾನು ಮಾಡತಕ್ಕ ಕೆಲ ವಿಧಾನವುಂಟು. ಅದನ್ನು ಮಾಡಲಿಕ್ಕೆ ಅಪ್ಪಣೆ ಕೊಡಬೇಕು.

ಬಾದ. — ಖುಶಾಲಾಗಿ ಮಾಡಬಹುದು. ನಮ್ಮದೇನೂ ಅಡ್ಡಿಯಿಲ್ಲ.

ಬೀರ. — ನಮ್ಮ ಜಾತಿಯಲ್ಲಿ ದೇವರಿಗೆ ನೈವೇದ್ಯ ಮಾಡಿ ಊಟ ಮಾಡಬೇಕೆಂಬ ನಿಯಮವುಂಟು. ಆದ್ದರಿಂದ ನಾನು ಎಲ್ಲ ಭೋಜನಪಾತ್ರೆಗಳಿಗೂ ನೀರು ಸಿಂಪಡಿಸಿ ನೈವೇದ್ಯ ಮಾಡಿ, ಬಳಿಕ ಊಟಕ್ಕೆ ಕೂಡ್ರುವೆನು. ಹೀಗೆ ಮಾಡಲಿಕ್ಕೆ ಯಾರೂ ಅಡ್ಡಿ ಮಾಡಕೂಡದೆಂದು ತಮ್ಮ ಅಭಯ ವಚನವನ್ನು ಬೇಡುತ್ತೇನೆ.

ಬಾದಶಹನು ಅಮೀರರ ಕಡೆಗೆ ನೋಡಲು, ಅವರು ತಮ್ಮದೇನೂ ಅಡ್ಡಿಯಿಲ್ಲೆಂದು ಒಟ್ಟಾಗಿ ಹೇಳಿದರು.

ಬಾದ. — ನಿನ್ನ ಸಾಂಪ್ರದಾಯದಂತೆ ನೀನು ಮಾಡಲಿಕ್ಕೆ ನಮ್ಮ ಯಾರದೂ ಏನೂ ಅಡ್ಡಿಯಿಲ್ಲ.

ಕೂಡಲೇ ಎಲ್ಲರು ಊಟದ ಮನೆಗೆ ಹೊರಟರು. ಬೀರಬಲ್ಲನು ಎಡಗಯ್ಯಲ್ಲಿ ನೀರು ತುಂಬಿದ ಒಂದು ತಂಬಿಗೆಯನ್ನು ತೆಗೆದುಕೊಂಡು, ಬಲಗಯ್ಯಲ್ಲಿ ಹಿಡಿದ ವರಾಹಕೇಶವನ್ನು ಅದರಲ್ಲದ್ದಿ ಪ್ರತಿಯೊಂದು ಎಲೆಗೂ ನೀರು ಸಿಂಪಡಿಸಲಾರಂಭಿಸಿದನು. ಒಬ್ಬ ಕಾಜಿಯು ಅದನ್ನು ನೋಡಿ "ಯಾ ಅಲ್ಲಾ, ಯಾ ಖುದಾ, ನಮ್ಮ ಧರ್ಮವನ್ನು ಕೆಡಿಸುತ್ತಾನೆ" ಎಂದು ಗಟ್ಟಿಯಾಗಿ ಕೆಟ್ಟ ದನಿಯಿಂದ ಕೂಗಿದನು. ಉಳಿದ ಅಮೀರರು ಸಿಟ್ಟು ಬೆಂಕಿಯಾಗಿ ಬೀರಬಲ್ಲನ ಕಯ್ಯಿಂದ ತಂಬಿಗೆಯನ್ನು ಕಸಿಕೊಂಡು, ಅವನನ್ನು ದಬ್ಬಿ, ಅರಮನೆಯ ಹೊರಗೆ ದೂಡಿದರು. ತನಗೆ ಒದಗಿದ ಕುತ್ತಿನಿಂದ ದೇವರು ಪಾರುಮಾಡಿದನೆಂಬ ಕೃತಜ್ಞತಾ ಭಾವದಿಂದ ಪರಮೇಶ್ವರನನ್ನು ಸ್ತುತಿಸುತ್ತ ಬೀರಬಲ್ಲನು ಮನೆಗೆ ಹೋಗಿ ಸ್ನಾನಮಾಡಿ, ಊಟಮಾಡಿದನು.

## ೭. ಬೀರಬಲ್ಲನ ತಂಬಾಕು ತಿನ್ನುವ ಚಟ.

ಒಂದು ದಿವಸ ಅಕ್ಬರಬೀರಬಲ್ಲರು ಊರ ಹೊರಗೆ ಅಡ್ಡಾಡಲಿಕ್ಕೆ ಹೋದಾಗ, ಒಂದು ತಂಬಾಕಿನ ಹೊಲದಲ್ಲಿ ಕತ್ತೆಗಳು ಓಡಿಯಾಡುವುದನ್ನು ನೋಡಿದರು. ಆಗ ಬಾದಶಹನ ಮನಸ್ಸಿನಲ್ಲಿ ತಂಬಾಕಿನ ಚಟದ ಬಗ್ಗೆ ಬೀರಬಲ್ಲನನ್ನು ಹೀಯಾಳಿಸಬೇಕೆಂಬ ಬಯಕೆ ಹುಟ್ಟಿ—

ಬಾದ.—ಬೀರಬಲ್ಲ, ನೋಡಿದೆಯಾ ಕತ್ತೆಗಳು ಕೂಡ ತಂಬಾಕು ತಿನ್ನುವುದಿಲ್ಲ.

ಬೀರ.—ಮಹಾರಾಜ! ಅವು ತಂಬಾಕನ್ನು ತಿನ್ನುವುದಿಲ್ಲೆಂತಲೇ ಅವುಗಳನ್ನು ಇಲ್ಲಿ ಬಿಟ್ಟಿರುತ್ತಾರೆ. ತಿನ್ನುತ್ತಿದ್ದರೆ ಅವನ್ನು ಕೂಡಲೆ ಹೊಡೆದು ಅಟ್ಟುತ್ತಿದ್ದರು.

ಈ ಉತ್ತರವನ್ನು ಕೇಳಿ ಬಾದಶಹನು ಸುಮ್ಮನಾದನು.

## ೮. ಗಂಗೆಯ ನೀರು ಅಮೃತವಿರುತ್ತದೆ ಜಲವಲ್ಲ.

ಒಂದು ದಿವಸ ಬಾದಶಹ ಬೀರಬಲ್ಲರು ಅರಮನೆಯ ಉಪ್ಪರಿಗೆಯ ಮುಂಭಾಗದಲ್ಲಿ ನಿಂತು ಯಮುನಾ ಪ್ರವಾಹವನ್ನು ನೋಡುತ್ತಿರುವಾಗ—

ಬಾದ. — ಬೀರಬಲ್ಲ, ಯಾವ ಹೊಳೆಯ ನೀರು ಮೇಲಾದುದು?

ಬೀರ. — ಯಮುನಾ ನದಿಯ ಜಲವೇ ಉತ್ತಮವಾದುದು.

ಬಾದ. — ನಿಮ್ಮ ಶಾಸ್ತ್ರದಲ್ಲಿ ಗಂಗಾನದಿಯೇ ಎಲ್ಲಕ್ಕೂ ಹೆಚ್ಚಿನದೆಂದು ಹೇಳಿಲ್ಲವೆ?

ಬೀರ. — ಅಹುದು.

ಬಾದ. — ಹಾಗಾದರೆ ನೀನು ಯಮುನಾ ಜಲವೇ ಹೆಚ್ಚಿನದೆಂದು ಏಕೆ ಹೇಳುತ್ತಿ?

ಬೀರ. — ಮಹಾರಾಜ! ಗಂಗಾ ನದಿಯಲ್ಲಿ ಅಮೃತವಿರುತ್ತದೆ; ಜಲ ವಿರುವುದಿಲ್ಲ. ಆದ್ದರಿಂದ ಜಲದಲ್ಲಿ ಯಮುನಾ ಜಲವೇ ಶ್ರೇಷ್ಠವಾದುದು.

ಈ ಸಮಯಸೂಚಕತೆಯನ್ನೂ ಚಾತುರ್ಯವನ್ನೂ ನೋಡಿ ಬಾದಶ ಹನು ಬೆರಗಾದನು.

## ೯. ಬೀರಬಲ್ಲನ ಧರ್ಮಾಭಿಮಾನ

ತನ್ನ ಸಭೆಯಲ್ಲಿ ಬೀರಬಲ್ಲನೊಬ್ಬನೇ ಬ್ರಾಹ್ಮಣನಾದ್ದರಿಂದ ಬಾದಶ ಹನಿಗೆ ಆಗಿಂದಾಗ ತೊಂದರೆಯುಂಟಾಗುತಿತ್ತು. ಆದ್ದರಿಂದ ಅವನು ಸಾಮೋಪಾಯದಿಂದ ಅವನನ್ನು ಮುಸಲ್ಮಾನನಾಗಿ ಮಾಡಲಿಕ್ಕೆ ಯತ್ನಿಸಿ ದನು. (೬ನೆಯ ಕಥೆ ನೋಡಿರಿ). ಆ ಯತ್ನವು ಬೀರಬಲ್ಲನ ಜಾಣ್ಮೆಯಿಂದ ನಿಷ್ಫಲವಾದ್ದನ್ನು ನೋಡಿ ಬಾದಶಹನು ಹತಾಶನಾಗದೆ, ದಾನೋಪಾಯ ದಿಂದ ಅವನನ್ನು ಕುಲಗೆಡಿಸಬೇಕೆಂದು ಯೋಚಿಸಿದನು.

ಬಾದ. — ಬೀರಬಲ್ಲ, ನೀನು ಮುಸಲ್ಮಾನನಾದರೆ, ನಾನು ನಿನಗೆ ಸಂತೋಷದಿಂದ ಬೇಡಿದ್ದನ್ನು ಕೊಡುವೆನು.

ಬೀರ. — ಮಹಾರಾಜ! ಮಾನ-ಧರ್ಮ-ಗುಣಗಳು ಮಾರಾಟ ಮಾ ಡತಕ್ಕ ವಸ್ತುಗಳೇ?

ಬಾದ. — ನಿನಗೆ ಅರ್ಧರಾಜ್ಯ ಕೊಟ್ಟರೆ ಮುಸಲ್ಮಾನವಾಗುವಿಯಾ?

ಬೀರ.—ಖುದಾವಂದರ ಇಚ್ಛೆಯು ಅತ್ಯುತ್ಕಟವಾದಂತೆ ತೋರುತ್ತಲಿದೆ. ಆದ್ದರಿಂದ ವಿಚಾರಮಾಡಿ ತಮಗೆ ಅರಿಕೆಮಾಡಿಕೊಳ್ಳುವೆನು.

ಓಲಗವನ್ನು ಬಿಟ್ಟ ಕೂಡಲೆ ಬೀರಬಲ್ಲನು ಹೊಲೆಗೇರಿಗೆ ಹೋಗಿ, ಹೊಲೆಯರನ್ನೆಲ್ಲ ಕರೆದು, "ನೀವು ಬಲು ಎಚ್ಚರದಿಂದ ಇರಿ. ಬಾದಶಹನ ಮನಸ್ಸಿನಲ್ಲಿ ನಿಮ್ಮನ್ನೆಲ್ಲ ಮುಸಲ್ಮಾನರನ್ನಾಗಿ ಮಾಡಬೇಕೆಂಬ ಆಶೆ ಹುಟ್ಟಿರುತ್ತದೆ. ಬೇಕಾದರೆ ನಿಮ್ಮ ಧರ್ಮವನ್ನು ರಕ್ಷಿಸಿಕೊಳ್ಳಿರಿ." ಈ ಮಾತನ್ನು ಕೇಳಿ ಅಂತ್ಯಜರು ಸಿಟ್ಟುಬೆಂಕಿಯಾಗಿ ಒಟ್ಟುಗೂಡಿ, ದರಬಾರಿಗೆ ಹೋಗಿ "ಖಾವಂದ್" ನಮ್ಮೆಲ್ಲರನ್ನೂ ಇಲ್ಲೇ ತೋಪಿನ ಬಾಯಿಗೆ ಕೊಡಿರಿ. ನಾವು ಸಾಯಲಿಕ್ಕೆ ಸಿದ್ಧರಾಗಿದ್ದೇವೆ. ನಮ್ಮ ಧರ್ಮವನ್ನು ಬಿಟ್ಟು ಮುಸಲ್ಮಾನರಾಗಲಾರೆವು" ಎಂದು ಅಡ್ಡಬಿದ್ದರು. ಬಾದಶಹನು ಅವರನ್ನು ಸಮಾಧಾನ ಮಾಡಿ ಕಳುಹಿ, ಬೀರಬಲ್ಲ! ಇವರ ಧರ್ಮಾಭಿಮಾನವೆಷ್ಟು, ನೋಡಿದೆಯಾ?

ಬೀರ.—ಅಂತ್ಯಜರಲ್ಲಿ ಇಷ್ಟು ಧರ್ಮಾಭಿಮಾನವಿದ್ದ ಬಳಿಕ ನನ್ನಂತಹ ಬ್ರಾಹ್ಮಣನಲ್ಲಿ ಎಷ್ಟು ಅಭಿಮಾನವಿರಬಹುದೆಂಬುದನ್ನು ಖಾವಂದರವರೇ ವಿಚಾರಮಾಡಬಹುದು.

ಈ ಮಾತುಕಥೆಯಾದ ಬಳಿಕ ಬಾದಶಹನು ಬೀರಬಲ್ಲನನ್ನು ಮುಸಲ್ಮಾನನಾಗೆಂದು ಮುಂದೆ ಎಂದೂ ಕೇಳಲಿಲ್ಲ.

## ೧೦. ಬ್ರಾಹ್ಮಣರ ಉಪಯುಕ್ತತೆ.

ಒಂದು ದಿವಸ ಬಾದಶಹನು, ದೇವರಂತೆ ಪೂಜ್ಯನೂ ಪಾಕಶುದ್ಧಿಕಾರಕನೂ ಜಲವಾಹಕನೂ ಭಾರವಾಹಕನೂ ಆದ ಒಬ್ಬ ಮನುಷ್ಯನನ್ನು ಕರೆದುಕೊಂಡು ಬಾರೆಂದು ಹೇಳಲು, ಬೀರಬಲ್ಲನು ಒಬ್ಬ ಬ್ರಾಹ್ಮಣನನ್ನು ಕರೆತಂದು ಬಾದಶಹನ ಮುಂದೆ ನಿಲ್ಲಿಸಿ, "ಪೃಥ್ವೀನಾಥ, ಇವನು ನಾಲ್ಕು ವರ್ಣಗಳಲ್ಲಿಯೂ ಶ್ರೇಷ್ಠನಾದ್ದರಿಂದ ಪೂಜ್ಯನು, ಇವನ ಕಯ್ಯಿಂದ ಎಲ್ಲರೂ ಊಟ ಮಾಡುವರಾದ್ದರಿಂದ ಪಾಕಶುದ್ಧಿಕಾರಕನು. ಇವನು ಎಲ್ಲರಿಗೂ

ತೀರ್ಥವನ್ನು ಕೊಡುವನಾದ್ದರಿಂದ ಜಲವಾಹಕನು, ಒಜ್ಜೆ (ಹೊರೆ)ಯನ್ನು ಹೊತ್ತುಕೊಂಡು ತೀರ್ಥಾಟನ ಮಾಡುವುದರಿಂದ ಇವನು ಭಾರವಾಹಕನು. ಆದಕಾರಣ ಇವನೊಬ್ಬನನ್ನು ಇಟ್ಟುಕೊಂಡರೆ, ಮೇಲೆ ಹೇಳಿದ ನಾಲ್ಕೂ ಕೆಲಸಗಳು ಸರಿಯಾಗಿ ನಡೆಯುವವು" ಎಂದು ಹೇಳಿದನು. ಅದನ್ನು ಕೇಳಿ ಬಾದಶಹನು ಸಂತುಷ್ಟನಾದನು.

### ೧೧. ಜಾತಿಗೆಟ್ಟ ಆಕಳು

ಒಂದು ದಿವಸ ಅಕ್ಬರಬೀರಬಲ್ಲರು ಕುದುರೆಯ ಮೇಲೆ ಕುಳಿತುಕೊಂಡು ಹೋಗುತ್ತಿರುವಾಗ ಮಲವನ್ನು ತಿನ್ನುತ್ತಿದ್ದ ಒಂದು ಆಕಳನ್ನು ನೋಡಿದರು. ಆಗ—

**ಬಾದ.**— ಬೀರಬಲ್ಲ! ಆಕಳು ನಿಮಗೆ ಅತಿ ಪವಿತ್ರ ಪ್ರಾಣಿಯಲ್ಲವೇ?

**ಬೀರ.**— ಅಹುದು ಜೀಯಾ.

**ಬಾದ.**— ನೋಡು ಇಲ್ಲಿ, ನಿಮ್ಮ ಗೋಮಾತೆಯು ಏನು ತಿನ್ನುತ್ತಾಳೆ?

**ಬೀರ.**— ಮಹಾರಾಜ, ಈ ಆಕಳು ಈಗ ಹಿಂದೂಧರ್ಮದಲ್ಲಿಲ್ಲ. ಮುಸಲ್ಮಾನ ಧರ್ಮವನ್ನು ಸ್ವೀಕರಿಸಿದಂತೆ ತೋರುತ್ತದೆ.

**ಬಾದ.**— ಅದು ಹೇಗೆ?

**ಬೀರ.**— ಕೆಲವು ಹಿಂದೂ ಗೃಹಸ್ಥರು ಮುಸಲ್ಮಾನರಾಗಿ ಅಭಕ್ಷ್ಯಭಕ್ಷಣ ಮಾಡುತ್ತಾರೆಂಬುದು ತಮಗೆ ಗೊತ್ತುಂಟು. ಹಾಗೆಯೇ ಈ ಆಕಳು ಮುಸಲ್ಮಾನ ಧರ್ಮವನ್ನು ಸ್ವೀಕರಿಸಿ, ಮಲವನ್ನು ತಿನ್ನಲಾರಂಭಿಸಿದೆ. ಬೀರಬಲ್ಲನ ಸಮಯಸೂಚಕತೆಗೆ ಬಾದಶಹನು ಬೆರಗಾದನು.

---

## ಪರಿಶಿಷ್ಟ (ಇ)

## ಬ್ರಾಹ್ಮಣರ ದೇವತೆಗಳ ಶ್ರೇಷ್ಠತ್ವ

### ೧. ಗುಂಜಾಭರಣ

**ಬಾದ.**— ನಿಮ್ಮ ಶ್ರೀಕೃಷ್ಣನಿಗೆ ಮುತ್ತು ಹವಳರನ್ನಗಳು ದೊರೆಯಲಿಲ್ಲವೇನು?

ಬೀರ.—ಮಹಾರಾಜ! ಅವನಿಗೇನು ಕಡಮೆ? ಸಾಕ್ಷಾತ್ ಶ್ರೀಲಕ್ಷ್ಮಿಯೇ ಆವನ ಪ್ರಾಣಪ್ರಿಯಳಾಗಿರುತ್ತಾಳೆ.

ಬಾದ.—ಹಾಗಾದರೆ ಅವನು ಗುಂಜಾಭರಣನೇಕೆ?

ಬೀರ.—ಅದು ವಜ್ರಮೌಕ್ತಿಕಗಳ ಅಭಾವಕ್ಕೋಸುಗವಲ್ಲ. ಗುಲಗಂಜೆಗಳು ಬಹಳ ಶುದ್ಧವಾದ ವಸ್ತುಗಳಾದ್ದರಿಂದ ಶ್ರೀಕೃಷ್ಣನು ಅವುಗಳನ್ನು ಧರಿಸಿರುತ್ತಾನೆ.

ಬಾದ.—ಗುಲಗಂಜೆಯ ಬಳ್ಳಿಗಳು ಪವಿತ್ರವೆಂದು ಬ್ರಾಹ್ಮಣರು ಎಲ್ಲಿ ಎಣಿಸುತ್ತಾರೆ?

ಬೀರ.—ಬಳ್ಳಿಗಳು ಪವಿತ್ರವಾಗದಿದ್ದರೂ ಗುಲಗಂಜೆಗಳು ಅತಿ ಪವಿತ್ರವಾಗಿರುತ್ತವೆ. ಏಕೆಂದರೆ ಜನ್ಮದಲ್ಲಿ ಒಂದು ಸಾರಿ ಬಂಗಾರದಿಂದ ತುಲಾಭಾರ ಮಾಡಿಸಿಕೊಂಡ ಮನುಷ್ಯನು ಪರಿಶುದ್ಧನಾಗುತ್ತಾನೆಂದು ಶಾಸ್ತ್ರಗಳು ಹೇಳುತ್ತವೆ. ಆದರೆ ಗುಲಗಂಜೆಗಳು ಸಾವಿರಾರು ಸಾರಿ ಚಿನ್ನದೊಡನೆ ತೂಗಲ್ಪಡುತ್ತವೆ. ಆದ್ದರಿಂದ ಅವು ಎಷ್ಟು ಪರಿಶುದ್ಧವಾಗಿರಬೇಕು ?

ಈ ಯುಕ್ತಿವಾದವನ್ನು ಕೇಳಿ ಬಾದಶಹನು ಸಂತುಷ್ಟನಾದನು.

## ೨. ಶ್ರೀಕೃಷ್ಣನ ಭಕ್ತವಾತ್ಸಲ್ಯ.

ಬಾದ.—ಬೀರಬಲ್ಲ, **ಗಜೇಂದ್ರಮೋಕ್ಷ**ದಲ್ಲಿ ಮೊಸಳೆಯು ಆನೆಯ ಕಾಲನ್ನು ಹಿಡಿಯಲು ಶ್ರೀಕೃಷ್ಣನು ತಾನೇ ಬಂದು, ಅದನ್ನು ಬಿಡಿಸಿದನೆಂದು ಬರೆದಿರುತ್ತದಷ್ಟೇ. ಆದರೆ ಅವನ ಬಳಿಯಲ್ಲಿ ಆಳುಗಳಿರಲಿಲ್ಲವೇನು? ಸೇವಕರನ್ನು ಕಳುಹಿಸಿ ಆ ಆನೆಯನ್ನು ಬಿಡಿಸಲಿಕ್ಕೆ ಅಡ್ಡಿ ಏನಿತ್ತು?

ಬೀರ.—ಎಲ್ಲ ಜಗತ್ತೇ ಆಧೀನದಲ್ಲಿರುವಾಗ ಶ್ರೀಕೃಷ್ಣನಿಗೆ ಆಳುಗಳು ಕಡಮೇ?

ಬಾದ.—ಹಾಗಾದರೆ ಅವನು ತಾನೇ ಏಕೆ ಹೋದನು?

ಬೀರ.—ಶ್ರೀಕೃಷ್ಣನಿಗೆ ಭಕ್ತರಲ್ಲಿ ಅತಿ ಪ್ರೇಮ. ಭೃಗುಮುನಿಯಿಂದ ಅವನು ಒದಿಸಿಕೊಂಡು ಸುಮ್ಮನೆ ಕೂಡ್ರಲಿಲ್ಲವೇ?

ಬಾದ. — ಸೇವಕರನ್ನು ಕಳಿಸಿ ನೆರವಾದರೆ, ಪ್ರೇಮ ತೋರಿಸಿದಂತೆ ಆಗುವುದಿಲ್ಲವೇ?

ಬೀರ. — ತಾನೇ ಹೋಗುವುದು ಅಧಿಕ ಪ್ರೇಮವನ್ನು ತೋರಿಸುತ್ತದೆ. ಈ ಮಾತಿನ ಅನುಭೋಗವು ತಮಗೆ ಎಷ್ಟೋ ಸಾರಿ ಬಂದಿರಬಹುದು.

ಬಾದ. — ಅಂತಹ ಸಂದರ್ಭದಲ್ಲಿ ನಾನು ಆಳುಗಳನ್ನು ಕಳಿಸುತ್ತಿದ್ದೆನು.

ಬೀರ — ಯಾರ ಬಗ್ಗೆ ತಾವು ಆಳನ್ನು ಕಳುಹಿಸುವಿರೊ ಅವರ ಬಗ್ಗೆ ತಮ್ಮ ಪ್ರೇಮವು ಹೆಚ್ಚಿಲ್ಲೆಂದು ಸ್ಪಷ್ಟವಾಗಿರುತ್ತದೆ.

ಬಾದ. — ಅದೇಕೆ ?

ಬೀರ. — ಪ್ರೀತಿಯು ಅತಿಶಯವಾಗಿದ್ದಲ್ಲಿ, ತಾವು ಸ್ವತಃ ಹೋಗುವಿರಿ. ಮೊನ್ನೆ ಅರಮನೆಯಲ್ಲಿ ತಮ್ಮ ಮೊಮ್ಮಗಳು ಬೀಳಲು, ತಾವೇ ಹೋಗಿ ಏಕೆ ಆಕೆಯನ್ನು ಎತ್ತಿಕೊಂಡಿರಿ? ಆಳುಗಳಿಗೆ ಹೇಳಬೇಕಾಗಿತ್ತು.

ಬಾದ. — ಹಾ! ಅಹುದು. ನೀನು ಹೇಳುವ ಮಾತು ನಿಜವಾದ್ದು.

## ೩. ದೇವೇಂದ್ರನ ಶ್ರೇಷ್ಠತ್ವ

ಒಂದು ದಿವಸ ಬಾದಶಹನು ಮುಂಚಿತವಾಗಿಯೇ ಓಲಗಕ್ಕೆ ಬಂದು, ಪ್ರತಿಯೊಬ್ಬ ಸರದಾರನು ಬಂದ ಕೂಡಲೆ "ದೇವೇಂದ್ರನು ಹೆಚ್ಚೊ, ನಾನು ಹೆಚ್ಚೊ?" ಎಂದು ಕೇಳಲಾರಂಭಿಸಿದನು. ಅವರಿಗೆ ಏನು ಉತ್ತರಕೊಡ ಬೇಕೆಂಬುದು ಗೊತ್ತಾಗಲಿಲ್ಲ. ದೇವೇಂದ್ರನು ಹೆಚ್ಚಿನವನೆಂದರೆ ಬಾದಶ ಹನು ಮುನಿಯಬಹುದು. ಬಾದಶಹನೇ ವೆಗ್ಗಳಿಗನೆಂದರೆ "ಅದು ಹೇಗೆ, ಕಾರಣಕೊಡು" ಎಂದು ಕೇಳುವನು. ಆದ್ದರಿಂದ ಅವರು ಉತ್ತರ ಕೊಡ ಲಿಕ್ಕೆ ಅಸಮರ್ಥರಾದರು.

ಮುಂದೆ ಸ್ವಲ್ಪ ಹೊತ್ತಿನ ಮೇಲೆ ಬೀರಬಲ್ಲನು ದರಬಾರಕ್ಕೆ ಬಂದನು. ಎಲ್ಲ ಅಮೀರರು ಅವನನ್ನು ಎವೆಯಿಕ್ಕದೆ ನೋಡತೊಡಗಿದರು. ಅವನು ತನ್ನ ಆಸನದಲ್ಲಿ ಕುಳಿತ ಕೂಡಲೆ, ಬಾದಶಹನು ಉಳಿದವರನ್ನು ಕೇಳಿದಂತೆ ಅವನನ್ನೂ ಪ್ರಶ್ನೆಮಾಡಿದನು.

ಬೀರ. — ನರವರ! ತಾವು ಹೆಚ್ಚಿನವರೆನ್ನಲಿಕ್ಕೆ ಸಂಶಯವೇಕೆ?

**ಬಾದ.**— ದೇವೇಂದ್ರನು ಸ್ವರ್ಗದ ರಾಜನಲ್ಲವೆ?

**ಬೀರ.**— ಅಹುದು; ಆದರೇನಾಯಿತು? ತಾವೇ ಶ್ರೇಷ್ಠರು.

**ಬಾದ.**— ಏನು ಕಾರಣ ಹೇಳು.

**ಬೀರ.**— ನಮ್ಮ ಶಾಸ್ತ್ರದಂತೆ, ಬ್ರಹ್ಮನು ತಮ್ಮ ಮತ್ತು ದೇವೇಂದ್ರನ ಮೂರ್ತಿಗಳನ್ನು ಮಾಡಿ, ಒಂದು ತಕ್ಕಡಿಯಲ್ಲಿಟ್ಟು ತೂಗಿದನು. ತಾವು ಹೆಚ್ಚು ಭಾರವಾದ್ದರಿಂದ ತಮ್ಮ ಪರಡಿಯು ನೆಲಕ್ಕೆ ಇಳಿಯಿತು. ಆದ್ದರಿಂದ ತಾವು ಹೆಚ್ಚಿನವರೆಂದು ಸಿದ್ಧವಾಯಿತು.

**ಬಾದ.**— ಹಾಗಾದರೆ ದೇವರು ದೇವೇಂದ್ರನಿಗೆ ಸ್ವರ್ಗದ ರಾಜ್ಯವನ್ನು ಏಕೆ ಕೊಟ್ಟನು? ಅದನ್ನು ನನಗೇಕೆ ಕೊಡಲಿಲ್ಲ?

**ಬೀರ.**— ತಮ್ಮ ಪರಡಿಯು ನೆಲಕ್ಕೆ ಇಳಿದುದರಿಂದ ತಮಗೆ ಈ ಭೂಲೋಕದ ರಾಜ್ಯವನ್ನೂ ದೇವೆಂದ್ರನ ಪರಡಿಯು ಮೇಲಕ್ಕೇರಿದುದರಿಂದ ಅವನಿಗೆ ಸ್ವರ್ಗದ ರಾಜ್ಯವನ್ನೂ ಕೊಟ್ಟನು.

**ಬಾದ.**— ಶಹಬಾಸ! ಬೀರಬಲ್ಲ, ನಿನ್ನ ಬುದ್ಧಿಚಾತುರ್ಯಕ್ಕೆ ಎಣೆಯೇ ಇಲ್ಲ. ಗೂಢಾರ್ಥದಿಂದ ದೇವೇಂದ್ರನು ಶ್ರೇಷ್ಠನೆಂದು ಹೇಳಿ, ವ್ಯವಹಾರದೃಷ್ಟಿಯಿಂದ ನಾನೇ ಶ್ರೇಷ್ಠನೆಂದು ತಿಳಿಸಿದೆ. ನಿನ್ನಂತಹ ಬುದ್ಧಿವಂತನನ್ನು ನಾನೆಲ್ಲಿಯೂ ನೋಡಲಿಲ್ಲ. ನೀನೇ ಧನ್ಯನು. ನನ್ನ ಭಾಗ್ಯೋದಯದಿಂದ ನನಗೆ ದೊರೆತಿರುತ್ತೀ. ನಿನಗೆ ಏನು ಬಹುಮಾನ ಕೊಟ್ಟರೂ ಕಡಮೆಯೇ ಸರಿ. ಎಂದು ಹೊಗಳಿ ಬಲು ಬೆಲೆಯುಳ್ಳ ಒಡವೆಗಳನ್ನು ಉಚಿತವಾಗಿ ಕೊಟ್ಟು ಸನ್ಮಾನಿಸಿ ಕಳುಹಿದನು.

---

## ಪರಿಶಿಷ್ಟ (ಉ)

## ಬೀರಬಲ್ಲನ ಕುಟುಂಬ

### ೧. ಬೀರಬಲ್ಲನ ಚಿಕ್ಕ ಮಗಳು

ಒಂದು ದಿವಸ ಬೀರಬಲ್ಲನು ತನ್ನ ಆರೇಳು ವರ್ಷದ ಚಿಕ್ಕ ಮಗಳನ್ನು ಕರೆದುಕೊಂಡು ಅರಮನೆಗೆ ಹೋದನು. ಬಾದಶಹನು ಆ ಹುಡು

ಗಿಯನ್ನು ಮುಂದಕ್ಕೆ ಕರೆದು, ತನ್ನ ತೊಡೆಯ ಮೇಲೆ ಕುಳ್ಳಿರಿಸಿಕೊಂಡು, "ತಂಗೀ ನಿನಗೆ ಮಾತಾಡಲಿಕ್ಕೆ ಬರುತ್ತದೆಯೊ?" ಎಂದು ಕೇಳಿದನು.

ಹುಡುಗಿ — ಹೆಚ್ಚು ಕಡಮೆಯಾಗಿ ಬರುತ್ತದೆ.

ಬಾದ. — ಹೆಚ್ಚು ಕಡಮೆ ಏಕೆ?

ಹುಡುಗಿ — ನನಗಿಂತ ಸಣ್ಣವರೊಡನೆ ಹೆಚ್ಚು ಮಾತಾಡಲಿಕ್ಕೂ ಹಿರಿಯರೊಡನೆ ಕಡಮೆ ಮಾತಾಡಲಿಕ್ಕೂ ಬರುತ್ತದೆ.

ಈ ಜಾಣತನದ ಮಾತನ್ನು ಕೇಳಿ ಬಾದಶಹನು ಸಂತುಷ್ಟನಾದನು.

## ೨. ಬೀರಬಲ್ಲನ ಮಕ್ಕಳ ಜಾಣತನ

ಒಂದು ದಿವಸ ಬೀರಬಲ್ಲನು ಮನೆಯಲ್ಲಿಲ್ಲದಿದ್ದಾಗ ಬಾದಶಹನು ವೇಷಧಾರಿಯಾಗಿ ಅವನ ಮನೆಗೆ ಹೋದನು. ಅವನ ಹುಡುಗ ಹುಡುಗಿಯರು ಬಾಗಿಲಲ್ಲಿ ಆಡುತ್ತಿದ್ದರು. ಹುಡುಗನು ವೇಷಧಾರಿಯಾದ ಅಕ್ಬರನನ್ನು ನೋಡಿ "ವಹ ಆಯಾ" (ಎತ್ತು ಬಂತು) ಅಂದನು; ಹುಡುಗಿಯು "ವಹ ನಹಿ ಹೈ?" (ಅದಕ್ಕೆ ಕೋಡುಗಳಿರುವುದಿಲ್ಲವೊ?) ಎಂದಳು. ಆಗ ಬೀರಬಲ್ಲನ ಹೆಂಡತಿಯು ಹೊರಗೆ ಬಂದು "ಏಸೇಭಿ ಹೋತಾ ಹೈ, ಔರವೈಸಾಭಿ ಹೋತಾ ಹೈ" (ಕೆಲವುಗಳಿಗೆ ಕೋಡುಗಳಿರುತ್ತವೆ, ಕೆಲವುಗಳಿಗಿರುವುದಿಲ್ಲ) ಎಂದಳು. ಹುಡುಗರು ತನ್ನನ್ನು ಎತ್ತಿಗೆ ಹೋಲಿಸಿ, ಲಾಕ್ಷಣಿಕ ಭಾಷೆಯಲ್ಲಿ ಮಾತಾಡಿದ್ದನ್ನು ಕೇಳಿ ಬಾದಶಹನು ಬೆರಗಾದನು.

## ೩. ಬೀರಬಲ್ಲನ ಸಂತತಿ.

ಬಾದ. — ಬೀರಬಲ್ಲ! ನೀನು ಮದುವೆಮಾಡಿಕೊಂಡು ಸಂಸಾರಮಾಡಲಿಕ್ಕೆ ಆರಂಭಿಸಿ ಎಷ್ಟು ವರ್ಷಗಳಾದುವು?

ಬೀರ. — ಹುಜೂರ್, ಐದು ವರ್ಷಗಳಾದವು.

ಬಾದ. — ನಿನಗೆ ಎಷ್ಟು ಜನ ಮಕ್ಕಳಾಗಿರುವರು?

ಬೀರ. — ಮಹಾರಾಜ! ಒಂದು ಗಂಡು ಮಗುವು ಮಾತ್ರ ಹುಟ್ಟಿರುತ್ತದೆ.

ಬಾದ.—ಒಂದೇ! ೫ ವರ್ಷಗಳಲ್ಲಿ ಒಂದೇ?

ಬೀರ.—ಮಹಾಸ್ವಾಮಿ, ಒಂದೇ ಮಗುವು ಮಾತ್ರ.

ಬಾದ.—ನೀನು ಕಯ್ಯಲಾಗದವನು. ಖಾನಖಾನನನ್ನು ನೋಡು. ಅವನು ಮದುವೆಯಾಗಿ ೩ ವರ್ಷಗಳಾದವು. ೩ ಜನ ಮಕ್ಕಳಾಗಿರುತ್ತಾರೆ.

ಬೀರ.—ಖುದಾವಂದ್ ಕ್ಷಮಿಸಬೇಕು. ನನ್ನ ಮನೆಯಲ್ಲಿ ನಾನೊಬ್ಬನೇ ದುಡಿಯುವವನು. ಖಾನಖಾನನ ಮನೆಯಲ್ಲಿ ಎಷ್ಟೋ ಜನರು ಪರಿಚಾರಕರಿರುತ್ತಾರೆ.

ಈ ಉತ್ತರವನ್ನು ಕೇಳಿ ಬಾದಶಹನು ಬಿದ್ದುಬಿದ್ದು ನಕ್ಕನು.

## ೪. ಬೀರಬಲ್ಲನ ಹೆಂಡತಿ

ಒಂದು ದಿವಸ ಬಾದಶಹನು ಆನಂದದಿಂದ ಮಾತಾಡುತ್ತ ಕುಳಿತಿರುವಾಗ, “ಬೀರಬಲ್ಲ, ಧರ್ಮಗ್ರಂಥಗಳಲ್ಲಿ ಅಪ್ಸರೆಯರೂ ಡಾಕಿಣಿಯರೂ ಇರುತ್ತಾರೆಂದು ಬರೆಯುತ್ತಾರೆ. ಅವರನ್ನು ನಾನು ನೋಡಿಲ್ಲ. ನನಗೆ ಅವರನ್ನು ತೋರಿಸುವೆಯಾ? ಎಂದು ಕೇಳಿದನು.

ಬೀರ.—ಸರಕಾರ್! ಅದು ಯಾವ ದೊಡ್ಡ ಕೆಲಸ? ಬೇಕಾದಾಗ ತೋರಿಸುವೆನು.

ಬಾದ.—ಹಾಗಾದರೆ ನಾಳೆ ಬೆಳಿಗ್ಗೆ ತೋರಿಸು.

ಬೀರ.—ಅವಶ್ಯವಾಗಿ ತೋರಿಸುವೆನು.

ಮರು ದಿವಸ ಬೆಳಿಗ್ಗೆ ಬೀರಬಲ್ಲನು ತನ್ನ ಹೆಂಡತಿಯನ್ನೂ ಒಬ್ಬ ವೇಶ್ಯಾಸ್ತ್ರೀಯನ್ನೂ ತನ್ನ ಸಂಗಡ ಕರೆದುಕೊಂಡು ಬಾದಶಹನ ಬಳಿಗೆ ಹೋದನು.

ಬಾದ.—ಬೀರಬಲ್ಲ! ಅಪ್ಸರೆಯೂ ಡಾಕಿನಿಯೂ ಎಲ್ಲಿದ್ದಾರೆ?

ಬೀರ.—ಹುಜೂರ್! ಇಲ್ಲೇ ಬಂದಿರುತ್ತಾರೆ. ಅವರನ್ನು ಹೊರಗೆ ನಿಲ್ಲಿಸಿ ನಾನು ಒಳಗೆ ಬಂದೆನು.

ಬಾದ. — ಅವರನ್ನು ಒಳಗೆ ಕರೆಯಿಸು.

ಬೀರ. — (ತನ್ನ ಹೆಂಡತಿಯನ್ನು ತೋರಿಸಿ) ಈಕೆಯು ನನ್ನ ಹೆಂಡತಿ. ಈಕೆಯೇ ಅಪ್ಸರೆಯಾಗಿರುತ್ತಾಳೆ. ಏಕೆಂದರೆ ಈಕೆಯು ನನ್ನನ್ನು ಪರಿಪರಿಯಿಂದ ಸೇವಿಸಿ ಸಂತೋಷಗೊಳಿಸುತ್ತಾಳೆ.

ಬಾದ. — ಈಕೆ ಕಪ್ಪುಬಣ್ಣದವಳಿರುತ್ತಾಳಲ್ಲ!!

ಬೀರ. — ಮಹಾರಾಜ! ತೊಗಲಿನ ಚೆಲುವಿಕೆಗಿಂತ ಗುಣದ ಸೌಂದರ್ಯವು ಹೆಚ್ಚಿನದು. ಈಕೆಯು ಪತಿಸೇವಾಪರಾಯಣಳಾದ್ದರಿಂದ ನನಗೆ ಸ್ವರ್ಗಸುಖವು ದೊರೆಯುತ್ತದೆ. ತೊಗಲು ಕೆಂಪಿದ್ದರೆ ಕಣ್ಣಿಗೆ ಮಾತ್ರ ಸುಖವಾಗುತ್ತಿತ್ತು. ಈಕೆಯ ಸದ್ಗುಣಪ್ರೇಮಭಾವಗಳಿಂದ ನನ್ನ ಆತ್ಮವು ತುಷ್ಟಿಯನ್ನು ಹೊಂದುತ್ತದೆ. ಆದ್ದರಿಂದ ಈಕೆಯು ಅಪ್ಸರೆಗಿಂತ ಶ್ರೇಷ್ಠಳೆಂದು ಭಾವಿಸುತ್ತೇನೆ.

ಬಾದ. — ಒಳ್ಳೆಯದು. ಡಾಕಿಣಿ ಎಲ್ಲಿ?

ಬೀರ. — (ವೇಶ್ಯೆಯನ್ನು ತೋರಿಸಿ) ಈಕೆಯೇ ಡಾಕಿಣಿಯು. ಈಕೆಯನ್ನು ಮೋಹಿಸಿದವರು ತಮ್ಮ ಆಸ್ತಿಯನ್ನೂ ಶರೀರಸಂಪತ್ತನ್ನೂ ಕಳೆದುಕೊಂಡು ಮಣ್ಣುಪಾಲಾಗುವರು. ಡಾಕಿಣಿಯರು ಇದಕ್ಕಿಂತ ಹೆಚ್ಚಿನ ಕೇಡನ್ನು ಏನು ಮಾಡಬಲ್ಲರು?

ಬಾದಶಹನು ಸಂತುಷ್ಟನಾಗಿ ಬೀರಬಲ್ಲನ ಹೆಂಡತಿಗೆ ವಸ್ತ್ರಾಲಂಕಾರಗಳನ್ನು ಕೊಟ್ಟು ಸನ್ಮಾನಿಸಿ ಕಳುಹಿಸಿಕೊಟ್ಟನು.



## ॥ ಸಿರಿಗನ್ನಡಂ ಗೆಲ್ಗೆ ॥

ನಮ್ಮಲ್ಲಿ ದೊರೆಯುವ ಮತ್ತು ಎಲ್ಲ ಕನ್ನಡಿಗರು ಅತ್ಯವಶ್ಯವಾಗಿ ಓದಬೇಕಾದ ಹಳೆಹೊಸ ಗ್ರಂಥಗಳು:—

| | | ರೂ. ಆ. ಪೈ. |
|---|---|---|
| ೧. | ಕವಿ ಚರಿತ್ರೆ ಸ. ೧, ೨ | ೮— ೦—೦ |
| ೨. | ಅಕ್ಬರ ಚಕ್ರವರ್ತಿಯ ಚರಿತ್ರೆ (ಸಚಿತ್ರ) | ೧— ೧—೦ |
| ೩. | ಚರಿತ್ರಸಂಗ್ರಹ (ಪೂರ್ವಾರ್ಧ) | ೧— ೪—೦ |
| ೪. | ಮೊಗಲ್ ಬಾದಶಾಹಿ ( ,, ) | ೦—೧೪—೦ |
| ೫. | ಮಹಾರಾಣಿ ಲಕ್ಷ್ಮೀಬಾಯಿ ಝಾಂಸಿ | ೨— ೦—೦ |
| ೬. | ಧರ್ಮಸ್ಥಾಪಕರೂ ಧರ್ಮಸುಧಾರಕರೂ | ೦— ೬—೦ |
| ೭. | ನಗೆಗಡಲು, ನನ್ನ ಆಚಾರ್ಯ (ಪ್ರತಿಯೊಂದಕ್ಕೆ) | ೦— ೬—೦ |
| ೮. | ನಿರ್ಮಲೆ, ವಿಚಿತ್ರಕಾರಸ್ಥಾನ ,, | ೦—೧೨—೦ |
| ೯. | ಅದ್ಭುತಪ್ರೇಮ, ನಭಾ ,, | ೦—೧೦—೦ |
| ೧೦. | ತ್ರಾಟಿಕಾನಾಟಕ, ಪ್ರಥಮಚಿಕಿತ್ಸೆ ,, | ೦—೧೨—೦ |
| ೧೧. | ರಾಜಶೇಖರ ಚರಿತ್ರೆ | ೧— ೧—೦ |
| ೧೨. | ತಿಲಕರ ಗೀತಾರಹಸ್ಯ | ೩— ೮—೦ |
| ೧೩. | ಪರಶುರಾಮಭಾವು ಪಟವರ್ಧನ ಚರಿತ್ರೆ | ೧— ೪—೦ |
| ೧೪. | ರಾಜಯೋಗ, ಬೃಹಸ್ತೋತ್ರರತ್ನಾಕರ (ಪ್ರತಿಯೊಂದಕ್ಕೆ) | ೧— ೬—೦ |
| ೧೫. | ಶ್ರೀದಾಸಬೋಧ ಭಾ. ೧, ೨ | ೧—೧೪—೦ |
| ೧೬. | ಭಗವಾನ್‌ದಾಸ (ಪತ್ತೆದಾರಿ ಕಥೆ) | ೧— ೦—೦ |
| ೧೭. | ಭಯಂಕರ ಕೊಲೆ ,, | ೦—೧೨—೦ |
| ೧೮. | ಕರ್ನಾಟಕ ಸಿಂಹಾಸನ ಸ್ಥಾಪನೆ | ೧— ೦—೦ |
| ೧೯. | ರಾಯಚೂರವಿಜಯ | ೨— ೨—೦ |
| ೨೦. | ರಾಮರಾಯನ ಬಖೈರು | ೦— ೫—೬ |
| ೨೧. | ಸುರೇಶ್ವರಾಚಾರ್ಯರ ಚರಿತ್ರೆ (ಸಚಿತ್ರ) | ೦—೧೨—೦ |
| ೨೨. | ಸ್ವರಾಜ್ಯವಿಯೋಗ ನಾಟಕ (ಗದ್ಯ) | ೦—೧೨—೦ |
| ೨೩. | ಬಾಲಭಾರತ (ಪದ್ಯ) | ೧— ೦—೦ |
| ೨೪. | ಹನೂಮದ್ರಾಮಾಯಣ ,, | ೨— ೧—೦ |
| ೨೫. | ಜೈಮಿನಿಭಾರತ ೧೭ ಸಂಧಿ ಟೀಕು (ಕರಿಬಸವಶಾಸ್ತ್ರಿ) | ೪— ೦—೦ |
| ೨೬. | ನಳರಾಜೇಂದ್ರ ಚರಿತ್ರೆ ಟೀಕು | ೨— ೦—೦ |
| ೨೭. | ಶಬ್ದಮಣಿದರ್ಪಣ (ಸಾಹಿತ್ಯ ಪರಿಷತ್ತು) | ೨—೧೧—೦ |

| | | ರೂ. ಆ. ಪೈ. |
|---|---|---|
| ೨೮. | ಶಿವಶರಣರ ಕಥೆಗಳು . . . . . . | ೨— ೪—೦ |
| ೨೯. | ಶ್ರೀ ಚಿದಂಬರ ವಿಜಯ . . . . . . | ೧— ೮—೦ |
| ೩೦. | ಕರ್ನಾಟಕ ಸತ್ಪುರುಷಮಂಡಲ ಭಾ. ೧, ೨ . . | ೦— ೯—೦ |
| ೩೧. | ವಿಕ್ರಮ, ಆರ್ಯಕೀರ್ತಿ ಭಾ. ೧ (ಪ್ರತಿಯೊಂದಕ್ಕೆ) . . | ೧— ೨—೦ |
| ೩೨. | ಯದುಮಹಾರಾಜ, ದಿವ್ಯಸುಂದರಿ (ಪ್ರತಿಯೊಂದಕ್ಕೆ) . | ೧— ೦—೦ |
| ೩೩. | ಇಂಡಿಯನ್ ಕಂಪನಿ ಆಕ್ಟ (ಹೊಸ ಬದಲಾವಣೆ ಸಹಿತ) . | ೨—೧೧—೬ |
| ೩೪. | ,, ಕಾಂಟ್ರಾಕ್ಟ ಆಕ್ಟ . . . . | ೦—೧೨—೦ |
| ೩೫. | ,, ಪೀನಲ್ ಕೋಡು (ಹೊಸ ಬದಲಾವಣೆ ಸಹಿತ) . | ೧—೧೫—೦ |
| ೩೬. | ಕಾರಖಾನೆಗಳ ವಿಷಯದ ಆಕ್ಟ ,, . | ೦— ೮—೬ |
| ೩೭. | ಕ್ರಿಮಿನಲ್ ಪ್ರೊಸೀಜರ ಕೋಡು ,, . | ೨— ೫—೦ |
| ೩೮. | ಕೊಂಡವಾಡೆ ಆಕ್ಟ ,, . | ೦— ೨—೬ |
| ೩೯. | ಕೋರ್ಟಫೀ ಆಕ್ಟ ,, . | ೦— ೮—೦ |
| ೪೦. | ಗ್ರಾಮಪೋಲೀಸ ಆಕ್ಟ ,, . | ೦— ೨—೦ |
| ೪೧. | ಗ್ರಾಮಮುಲ್ಕಿ ಲೆಕ್ಕದ ಪುಸ್ತಕ ,, . | ೨— ೬—೦ |
| ೪೨. | ಡಿಸ್ಟ್ರಿಕ್ಟ ಪೋಲೀಸ ಆಕ್ಟ ,, . | ೦— ೫—೬ |
| ೪೩. | ಭೂಮಿಯ ಮಹಸೂಲಿನ ಸಂಬಂಧ ಕಾಯಿದೆ ,, . | ೧—೧೧—೬ |
| ೪೪. | ಮಾಮಲೇದಾರ ಕೋರ್ಟ ಆಕ್ಟ. . . . . | ೦— ೪—೦ |
| ೪೫. | ಮುದ್ದತಿನ ವಿಷಯದ ಆಕ್ಟ (ಹೊಸ ಬದಲಾವಣೆ ಸಹಿತ) . | ೦—೧೨—೬ |
| ೪೬. | ಮುನಸಿಪಲ್ ಆಕ್ಟ ಭಾ. ೧, ೨ . . . | ೨— ೨—೦ |
| ೪೭. | ಲೋಕಲ್ ಬೋರ್ಡ ಆಕ್ಟ (ಹೊಸ ಬದಲಾವಣೆ ಸಹಿತ) . | ೦—೧೪—೦ |
| ೪೮. | ವಂಶಪರಂಪರ ಹುದ್ದೆ ಸಂಬಂಧ ಕಾಯಿದೆ ,, . | ೦—೧೦—೬ |
| ೪೯. | ವಿದ್ಯುಚ್ಛಕ್ತಿಯ ಆಕ್ಟ (ಹೊಸ ಬದಲಾವಣೆ ಸಹಿತ) . | ೦—೧೩—೬ |
| ೫೦. | ಸ್ಟಾಂಪು ಆಕ್ಟ ,, . | ೦— ೬—೦ |
| ೫೧. | ಸಿವ್ಹಿಲ್ ಪ್ರೊಸೀಜರ ಕೋಡು ,, . | ೫— ೮—೦ |
| ೫೨. | ಹತ್ಯಾರುಗಳ ವಿಷಯದ ಆಕ್ಟ ,, . | ೦— ೪—೬ |

ಶ್ರೀಪಾದ ರಾಮಚಂದ್ರ ದೇಶಪಾಂಡೆ, ಬಿ. ಎಸ್‌ಸಿ.,
ವ್ಯವಸ್ಥಾಪಕ,
ಶ್ರೀಶಂಕರ ಕರ್ನಾಟಕ ಪುಸ್ತಕ ಭಾಂಡಾರ,
ಮಾಳಮಡ್ಡಿ, ಧಾರವಾಡ.

